ಬಸವಕವಿಕೃತ

# ಮಹಲಿಂಗಲೀಲೆ

ಪ್ರಕಾಶಕರು :

ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು

ಮುರುಘಾಮಠ, ಧಾರವಾಡ

ಸಂಪಾದಕರು :

ಆರ್. ಸಿ. ಹಿರೇಮಠ, ಎಂ. ಎ., ಕನ್ನಡ ವಿಭಾಗದ ರೀಡರ

ಕರ್ನಾಟಕ ವಿಶ್ವವಿದ್ಯಾಲಯ

ಧಾ ರ ವಾ ಡ

ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ : ೧೩

ಬಸವಕವಿಕೃತ

# ಮಹಲಿಂಗಲೀಲೆ

**

ಪ್ರಕಾಶಕರು :

ಶ್ರೀ. ಮ. ನಿ. ಪ್ರ. ಮೃತ್ಯುಂಜಯಸ್ವಾಮಿಗಳು, ಮುರುಘಾಮಠ

ಸ್ಥಾಪಕರು ಮತ್ತು ಸಂಚಾಲಕರು :

ಶ್ರೀ. ಮ. ನಿ. ಜ. ಮುರುಘಾರಾಜೇಂದ್ರ ಪ್ರಸಾದನಿಲಯ

ಹಾವೇರಿಪೇಟೆ, ಧಾರವಾಡ

**

ಸಂಪಾದಕರು :

ಆರ್. ಸಿ. ಹಿರೇಮಠ, ಎಂ. ಎ.

ರೀಡರ

ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೭-೨-೧೯೫೪ ಬೆಲೆ : ೩-೦-೦



ಶ್ರೀ. ಮ. ನಿ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು
ಗಚ್ಚಿನಮಠ, ಅಥಣಿ

# ಅರ್ಪಣೆ

ಶಿವಶರಣರ ಘನವಾದ ಮಾರ್ಗದಲ್ಲಿ ನಡೆದು
ಶ್ರೇಷ್ಠವಾದ ತಪಸ್ಸನ್ನಾಚರಿಸಿದ ಪರಮವೈರಾಗ್ಯ
ಮೂರ್ತಿಗಳೂ ಕಾರಣಪುರುಷರೂ ಆದ
ಅಥಣಿ ಗಚ್ಚಿನಮಠದ ಲಿಂಗೈಕ್ಯ

ಶ್ರೀ. ಮ. ನಿ. ಪ್ರ

**ಮುರುಘೇಂದ್ರ ಮಹಾಶಿವಯೋಗಿಗಳ**

**ದಿವ್ಯಪಾದಾರವಿಂದಗಳಿಗೆ**

ಈ ಗ್ರಂಥವನ್ನು ಭಕ್ತಿಪುರಸ್ಸರವಾಗಿ
ಸಮರ್ಪಿಸಲಾಗಿದೆ

# ಮುನ್ನುಡಿ

ಪರಮತಪಸ್ವಿಗಳಾದ ಶ್ರೀಮದಥಣಿ ಮುರುಘೇಂದ್ರ ಮಹಾಶಿವಯೋಗಿಗಳವರ ಕೃಪೆಯಿಂದ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ವರುವರುಷ ಹೊಸಹೊಸ ಪುಷ್ಪಗಳು ಅರಳುತ್ತಿರುವುದು ಸಂತೋಷಪ್ರದವಾಗಿದೆ. ಇದೀಗ ಈ ಗ್ರಂಥಮಾಲೆಯ ಹದಿಮೂರನೆಯ ಪುಷ್ಪವಾಗಿ ಬಸವಕವಿಕೃತ ಮಹಲಿಂಗಲೀಲೆ ಎಂಬ ಕಾವ್ಯವು ಚಿತ್ರದುರ್ಗದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಅಮೃತ ಹಸ್ತದಿಂದ ಪ್ರಕಟವಾಗುತ್ತಿರುವುದು ಮಂಗಲಕರವಾಗಿದೆ.

ಮಹಲಿಂಗಲೀಲೆಯೆಂಬ ಈ ಕಾವ್ಯವು ಇದುವರೆಗೂ ಅಚ್ಚಾಗಿರಲಿಲ್ಲ. ಈ ಕಾವ್ಯವನ್ನು ಬರೆದ ಬಸವಕವಿಯ ಹೆಸರಾಗಲಿ ಇಲ್ಲವೆ ಆತನ ಕಾವ್ಯಗಳ ಹೆಸರಾಗಲಿ ಕರ್ನಾಟಕ ಕವಿಚರಿತೆಯಲ್ಲಿ ಉಕ್ತವಾಗಿರುವುದಿಲ್ಲ. ಮಹಲಿಂಗಲೀಲೆಯು ಮಹಾತಪಸ್ವಿಯಾದ ಮಹಲಿಂಗೇಶ್ವರನನ್ನು ಕುರಿತು ಬರೆದ ಕಾವ್ಯ. ಈ ಮಹಲಿಂಗಮುನಿನಾಥನು ಮಹಾತಪಸ್ವಿಯೂ ಪರಮವೈರಾಗ್ಯಮೂರ್ತಿಯೂ ಆಗಿದ್ದುದರಿಂದ ಆ ಮಠಕ್ಕೆ ವೀರಶೈವರಷ್ಟೇ ಅಲ್ಲದೆ ಅನ್ಯರೂ ಭಕ್ತಿಗೌರವಗಳನ್ನರ್ಪಿಸುತ್ತ ಬಂದಿರುವರು. ಮುಧೋಳದ ಘೋರ್ಪಡೆ ಮನೆತನದ ಅರಸರು ಮಹಲಿಂಗಮುನಿನಾಥನಿಗೆ ಭಕ್ತಿಯನ್ನರ್ಪಿಸುತ್ತ ಬಂದುದು ಈ ಕಾವ್ಯದಲ್ಲಿಯೂ ಬಂದಿದೆ. ಬೇರೆ ಕಡೆಗೂ ಆ ಬಗೆಗೆ ಉಲ್ಲೇಖಗಳಿವೆ. ಈ ಸಂದರ್ಭದಲ್ಲಿ ಅತ್ಯಂತ ಮಹತ್ವವಾದ ಸಂಗತಿಯೆಂದರೆ ಈ ಮಠಕ್ಕೆ ಮುಸಲ್ಮಾನ ದೊರೆಯಾದ ಇಬ್ರಾಹಿಮ ಬಾದಶಹಾನು ತನ್ನ ಭಕ್ತಿಗೌರವಗಳನ್ನು ಅಭಿವ್ಯಕ್ತಪಡಿಸುವ ಒಂದು ಸನದನ್ನು ಕೊಟ್ಟಿರುವುದು. ಇದೆಲ್ಲವೂ ಮಹಲಿಂಗೇಶ್ವರನ ಪ್ರಭಾವದ ಮೂಲಕವಾಗಿಯೇ ಎಂದು ಬೇರೆ ಹೇಳಬೇಕಾಗಿಲ್ಲ. ಮಹಲಿಂಗೇಶ್ವರನು ಸಿದ್ಧಾಯಿಯೆಂಬ ಸದ್ಭಕ್ತೆಗೆ ದಯಪಾಲಿಸಿದ ಜಡೆಯು ಬೆಳೆಯುತ್ತ ನಡೆದಿರುವುದು ಸರ್ವಶ್ರುತವಿದೆ. ಆ ಜಡೆಯ ಪೂಜೆ ಅಭಿಷೇಕಗಳು ಇಂದಿಗೂ ನಡೆಯುತ್ತಿವೆ. ಹೀಗೆ ಅತ್ಯಂತ ಮಹಿಮಾಶಾಲಿಯಾದ ಮಹಲಿಂಗೇಶ್ವರನನ್ನು ಕುರಿತು ಬರೆದ ಒಂದು ಸರಸ ಕಾವ್ಯವು ಬೆಳಕಿಗೆ ಬರುವುದು ಅವಶ್ಯವಾಗಿದ್ದಿತು.

ನಮ್ಮ ಅಪೇಕ್ಷೆಯಂತೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ರೀಡರರಾದ ಪ್ರೊ. ಆರ್. ಸಿ. ಹಿರೇಮಠ, ಎಂ. ಎ., ಅವರು ಈ ಕವಿ ಮತ್ತು ಕಾವ್ಯದ ಬಗೆಗೆ ಸಂಶೋಧನೆ ನಡೆಸಿ ಈ ಗ್ರಂಥ ಸಂಪಾದನೆಯ ಎಲ್ಲ ಕಾರ್ಯವನ್ನೂ ಭಕ್ತಿಯಿಂದ ನೆರವೇರಿಸಿರುವರು. ಅವರ ಈ ಸಂಶೋಧನೆಯ ಮೂಲಕ ಕಣ್ಮರೆಯಾಗಿದ್ದ ಬಸವಕವಿಯಂತಹ ಉತ್ತಮ ಕವಿಯು ಬೆಳಕಿಗೆ ಬಂದುದು ಸ್ತುತ್ಯವಾಗಿದೆ. ಶ್ರೀ ಶಿವಯೋಗೀಶ್ವರನು ಪ್ರೊ. ಆರ್. ಸಿ. ಹಿರೇಮಠರವರಿಗೆ ಸನ್ಮಂಗಲವನ್ನುಂಟು ಮಾಡಲಿ.

ಈ ಗ್ರಂಥ ಪ್ರಕಟನೆಗಾಗಿ ಅವಶ್ಯವಿದ್ದ ಮೂಲ ಮಾತೃಕೆಗಳನ್ನು ಮತ್ತು ಮಠಕ್ಕೆ ಸಂಬಂಧಿಸಿದ ಸನದುಗಳನ್ನು ಒದಗಿಸಿಕೊಟ್ಟ ಶ್ರೀ. ಮ. ನಿ. ಪ್ರ. ಗುರುಲಿಂಗ ಸ್ವಾಮಿಗಳು, ಮಹಾಲಿಂಗೇಶ್ವರಮಠ, ಮಹಲಿಂಗಪುರ ಅವರಿಗೆ ನಮ್ಮ ಕೃತಜ್ಞತೆಗಳು.

ಇದಲ್ಲದೆ ಈ ಗ್ರಂಥದ ಅಚ್ಚಿನ ಪ್ರತಿಯನ್ನು ಒಳ್ಳೇ ಶ್ರದ್ಧೆಯಿಂದ ಸಿದ್ಧಪಡಿಸಿದ ಶ್ರೀ. ಕೆ. ಎಸ್. ಪಾಟೀಲ, ನಿವೃತ್ತ ಹೆಡ್ ಮಾಸ್ತರರು, ಸರಕಾರಿ ಪ್ರ್ಯಾಕ್ಟೀಸಿಂಗ ಸ್ಕೂಲ, ಧಾರವಾಡ ಅವರಿಗೂ, ಭಕ್ತಿಯಿಂದ ಮುದ್ರಣ ಕಾರ್ಯವನ್ನು ಮಾಡಿಕೊಟ್ಟ ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯರಾದ ಬಿಳಗಿ ಬಂಧುಗಳಿಗೂ, ಈ ಕಾವ್ಯದ ಸಂಪಾದಕರು ಸಂಶೋಧನೆಗಾಗಿ ಮಹಾಲಿಂಗಪುರಕ್ಕೆ ಹೋದಾಗ ಅವರಿಗೆ ಆತಿಥ್ಯವನ್ನು ನೀಡಿದ ಡಾ. ಪಿ. ಎಸ್. ಥಾಂಗಿ, ಘಟಪ್ರಭಾ ಅವರಿಗೂ, ಮಹಲಿಂಗೇಶ್ವರ ಮಠದ ಗುರುಪರಂಪರೆಯನ್ನು ಒದಗಿಸಿಕೊಟ್ಟ ಗುಡಗೇರಿ ಬಸವಲಿಂಗ ಶಾಸ್ತ್ರಿಗಳಿಗೂ ಶ್ರೀ ಶಿವಯೋಗಿಗಳವರ ಕೃಪೆಯಿರಲಿ.

ಬಸವಕವಿಕೃತ ಮಹಲಿಂಗಲೀಲೆಯೆಂಬ ಈ ಕಾವ್ಯವು ಕನ್ನಡ ಸಾಹಿತ್ಯದಲ್ಲಿ ಸ್ಥಿರವಾಗಿ ನಿಲ್ಲುವಂತೆ ಶ್ರೀ ಶಿವಯೋಗೀಶ್ವರನು ಅನುಗ್ರಹಿಸಲಿ.

ಶ್ರೀ ಮುರುಘಾಮಠ
ಹಾವೇರಿಪೇಟೆ, ಧಾರವಾಡ
ಮಾ. ಶು. ೪ ರವಿವಾರ
೭-೨-೧೯೫೪

ಪ್ರಕಾಶಕರು

# ಪ ರಿ ವಿ ಡಿ


| ವಿಷಯ | | | ಪುಟ |
|---|---|---|---|
| **ಪ್ರಸ್ತಾವನೆ** | | | ೧-೩೨ |
| **ಕಥಾಸಾರ** | | | ೧-೭೨ |
| **ಮಹಲಿಂಗಲೀಲೆ** | | | ೧-೨೯೧ |
| ಸಂಧಿ | ೧ | ಪೀಠಿಕೆ | ೧ |
| ,, | ೨ | ಮಹಲಿಂಗಮುನಿನಾಥನ ಅವತಾರ | ೧೧ |
| ,, | ೩ | ಗುರುಕಾರುಣ್ಯಸ್ಥಲ | ೧೬ |
| ,, | ೪ | ಶಿವಯೋಗಸಾಧನೆ | ೩೫ |
| ,, | ೫ | ನಾಗಾಖ್ಯಮುಪ್ಪಿನಾಂಬೆಯರ ಲೀಲೆ | ೪೫ |
| ,, | ೬ | ರುದ್ರಿಯಮ್ಮನ ಪವಾಡ | ೫೫ |
| ,, | ೭ | ಮಹಲಿಂಗನ ನಿಜದ ಲೀಲೆ | ೬೫ |
| ,, | ೮ | ನರಗಟ್ಟಿಯ ದಾನಪತ್ರ | ೭೬ |
| ,, | ೯ | ಲಿಂಗಮುದ್ರೆಗಳ ಸ್ಥಾಪನೆ | ೮೫ |
| ,, | ೧೦ | ಮಹಲಿಂಗಪುರವಿರಚನೆ | ೯೦ |
| ,, | ೧೧ | ಬಸವತೀರ್ಥವಿರಚನೆ | ೧೦೩ |
| ,, | ೧೨ | ಮೋದಪುರಕ್ಕೆ ಮುನಿನಾಥನ ಆಗಮನ | ೧೨೧ |
| ,, | ೧೩ | ಮೇದಿನೀಶ್ವರ ಮಾಲೋಜಿಯ ಪೂಜೆ | ೧೩೬ |
| ,, | ೧೪ | ಪಾದಾಂಬು ಶ್ರೀ ಭಸ್ಮ ಮಹಿಮೆ | ೧೪೩ |
| ,, | ೧೫ | ಶ್ರೀಹರಿಯ ರೂಪದರ್ಶನ | ೧೬೫ |
| ,, | ೧೬ | ಇಷ್ಟಲಿಂಗವನ್ನು ಪೂಜಿಸಿದ ಶರಣರ ಇತಿಹಾಸ | ೧೮೧ |
| ,, | ೧೭ | ಶಿವಾಕ್ಷಿಮಣಿ ಗುರುಮಹಿಮೆ | ೨೦೭ |
| ,, | ೧೮ | ವಿಷಮರೋಗನಿವಾರಣೆ-ಪ್ರಸಾದ ಮಹಿಮೆ | ೨೨೬ |
| ,, | ೧೯ | ಬಾಲಗ್ರಹ ನಿವಾರಣೆ | ೨೪೩ |
| ,, | ೨೦ | ಚರಣತೀರ್ಥದಲೀಲೆ | ೨೫೩ |

ವಿಷಯ | ಪುಟ


,, ೨೧ ಪತ್ರಿಪರಗಣೆಗಾಗಿ ನಡೆದ ಯುದ್ಧದವರ್ಣನೆ ೨೫೮

,, ೨೨ ಅಮೃತೇಶಲಿಂಗಸ್ಥಾಪನೆ ೨೬೭

,, ೨೩ ಮುನಿನಾಥನು ಶಿವಯೋಗದಲ್ಲಿ ಸನ್ನಿಹಿತನಾದುದು ೨೭೪

,, ೨೪ ಪ್ರಾರ್ಥನೆ ೨೮೩

ಶಬ್ದಕೋಶ ೨೯೫-೩೦೭

ಒಪ್ಪೋಲೆ ೩೦೮-೩೦೯


## ಚಿತ್ರಗಳು


೧. ಶ್ರೀ. ಮ. ನಿ. ಪ್ರ. ಅಥಣಿ ಮುರುಘೇಂದ್ರ ಮಹಾಶಿವಯೋಗಿಗಳು — ಮುಖಪತ್ರದ ಎದುರು

೨. ಯೋಗಿ ಗುರುಲಿಂಗಾರ್ಯರ ತಪೋಭೂಮಿ (ಮಹಲಿಂಗಮುನಿನಾಥನು ಗುರುಕಾರುಣ್ಯ ಪಡೆದ ಸ್ಥಲ) — ಪುಟ ೩೦ ರ ಎದುರು

೩. ಯೋಗಿ ಗುರುಲಿಂಗಾರ್ಯರ ಗದ್ದುಗೆ — ಪುಟ ೩೧ ರ ಎದುರು

೪. ಮಹಲಿಂಗೇಶ್ವರ ಮಠಕ್ಕೆ ದೊರೆತ ಸನದುಗಳು — ಪುಟ ೩೩ ರ ಎದುರು

೪. ಮಹಲಿಂಗಮುನಿನಾಥನ ತಪೋಭೂಮಿ — ಪುಟ ೪೪ ರ ಎದುರು

೫. ಮಹಲಿಂಗಪುರ — ಪುಟ ೯೨ ರ ಎದುರು

೬. ಬಸವತೀರ್ಥ — ಪುಟ ೧೦೮ ರ ಎದುರು

೭. ರಾಮಲಿಂಗ ದೇವಾಲಯ — ಪುಟ ೧೧೮ ರ ಎದುರು

೮. ಚೆನ್ನಗಿರಿ ದುರ್ಗ — ಪುಟ ೧೧೩ ರ ಎದುರು

೯. ಮಹಲಿಂಗಮುನಿನಾಥನ ಮಠ — ಪುಟ ೨೮೨ ರ ಎದುರು

೧೦. ಮಹಲಿಂಗಮುನಿನಾಥನ ಗದ್ದುಗೆ — ಪುಟ ೨೮೩ ರ ಎದುರು

೧೧. ಮಹಲಿಂಗೇಶ್ವರ ಮಠ — ಪುಟ ೨೮೮ ರ ಎದುರು

# ಮಹಲಿಂಗಲೀಲೆ

## ಪ್ರಸ್ತಾವನೆ

### ಬಸವಕವಿ - ವಂಶಪರಂಪರೆ - ಗುರುಪರಂಪರೆ

‘ ಮಹಲಿಂಗಲೀಲೆ ’ ಯೆಂಬ ಕಾವ್ಯದ ಕರ್ತೃ ಬಸವಕವಿ. ಅಸಮ ಕರ್ನಾಟ ಶಾಸ್ತ್ರವಿಚಾರಸಂಪನ್ನನೂ ರಸಿಕಾವತಂಸನೂ ವೇದಾಂತಕೋವಿದನೂ ವೃಷಭ ಗೋತ್ರಜನೂ ಆದ ಶಿವಬಸವೇಶನು ಈತನ ತಂದೆ. ತೊಂಡಿಕಟ್ಟಿ[೧]ಯ ಗ್ರಾಮಾಧಿಪತಿ (ಗೌಡ) ಯಾದ ರಾಮಲಿಂಗಪ್ಪನವರ ವಿಮಲವಂಶದಲ್ಲಿ ತಾನು ಜನಿಸಿರುವುದಾಗಿ ಕವಿ ಹೇಳುತ್ತಾನೆ.[೨] ಆತನ ಸವಿತಾಪಿತಾಮಹರೆಲ್ಲ ಕರ್ನಾಟಶಾಸ್ತ್ರಕೋವಿದರೆನಿಸಿದ್ದರು.[೩] ಎಳವರಯದಲ್ಲಿಯೇ ಈತನು ಕಾವ್ಯರಚನಾಶಕ್ತಿಯುತನೂ ಶಾಸ್ತ್ರಸಂಪನ್ನನೂ ಆಗಿದ್ದನು.[೩] ಮುದುವೊಳಲ ಜೀರಿಗೆಮಠದ ಮದ್ದಾನಿ ಮಡಿವಳತಂದೆಗಳು ಬಸವಕವಿಯ ಕುಲಗುರುಗಳು.[೪] ಕರ್ನಾಟಗೀರ್ವಾಣ ಶಾಸ್ತ್ರಗಳ ಸಾರವನ್ನು ತಿಳಿದು[೫] ಸರ್ವಜ್ಞರಾದ ಸೋಲೂರ ಶ್ರೀಚೆನ್ನವೀರೇಂದ್ರ ವಿರಕ್ತರು ಈತನ ವಿದ್ಯಾಗುರುಗಳು. ಈ ಗುರುವರ್ಯರ ಕೃಪೆಯಿಂದ ಬಸವಕವಿಯು ಕಾವ್ಯಗಳನ್ನು ರಚಿಸಿರುವನು. ಮಹಲಿಂಗಲೀಲೆಯ ಪ್ರತಿಯೊಂದು

---

೧ ತೊಂಡಿಕಟ್ಟಿಯು ಮೊದಲು ಬೆಳಗಾವಿ ಜಿಲ್ಹೆಯ ಗೋಕಾಕ ತಾಲೂಕಿನ ಒಂದು ಹಳ್ಳಿಯಾಗಿದ್ದು ಈಗ ರಾಮದುರ್ಗ ತಾಲೂಕಿಗೆ ಸೇರಿದೆ. ಈ ಊರಲ್ಲಿ ಈಗ ಬಸವಕವಿಯ ವಂಶಜರಾರೂ ಇದ್ದಂತೆ ತೋರುವುದಿಲ್ಲ. ಊರ ಗೌಡಿಕೆಯೂ ಈಗ ಬೇರೆಯವರಿಗಿದೆ. ಕವಿಯು ಇದೇ ಊರವನಿರಬಹುದೆಂದು ಊಹಿಸಲು ಅಲ್ಲಿ ದೊರೆವ ಒಂದೇ ಒಂದು ಪ್ರಮಾಣವೆಂದರೆ ಅಲ್ಲಿರುವ ರಾಮಲಿಂಗೇಶನ ದೇವಾಲಯ. ಇಂತಹ ಸತ್ಕವಿಯ ಬಗೆಗೆ ಆ ಊರಲ್ಲಿ ಏನೂ ದೊರೆಯದಿರುವುದು ಶೋಚನೀಯವಾಗಿದೆ.

೨ ಮ. ಲೀ. ಸಂ. ೨೪, ಪ. ೨೯-೩೦; ದು. ಜಂ. ಲೀ. ಸಂ. ೩೩, ಪ. ೩೧.

೩ ಮ. ಲೀ. ಸಂ. ೧, ಪ. ೧೯-೨೦; ದು. ಜಂ. ಲೀ. ಸಂ. ೧, ಪ. ೧೭.

೪ ಮ. ಲೀ. ಸಂ. ೧, ಪ. ೧೬-೧೭.

೫ ದು. ಜಂ. ಲೀ. ಸಂ. ೩೩, ಪ. ೩೨.

ಸಂಧಿಯು[೧] ಆರಂಭದಲ್ಲಿ ಕವಿ ಶಿವಸ್ವರೂಪನೆಂದು ಮುಕ್ತಕಂಠದಿಂದ ಸ್ತೋತ್ರ ಮಾಡಿರುವುದು ಇದೇ ಚೆನ್ನವೀರೇಶನನ್ನು[೨]. ಬಸವಸುಕುಮಾರನು ಮಾರುತೋಪದ್ರವರೋಗಪೀಡಿತನಾಗಿರಲು ಜೀರಕಾಮೃತಮಠಾಧೀಶರಾದ ಶಿವರುದ್ರಮಾಹೇಶ್ವರರು ' ಮಹಲಿಂಗಲೀಲೆ ' ಯೆಂಬ ಕಾವ್ಯವನ್ನು ನಿರ್ಮಿಸಿದರೆ ಆತನ ರೋಗ ನಿವಾರಣೆಯಾಗುವುದೆಂದು ಸೂಚಿಸಿದರು.[೩] ರಾಮದುರ್ಗದ ಸಂಗನಬಸವ ಮಾಹೇಶ್ವರರು ಮಹಲಿಂಗಲೀಲೆಯನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿದ್ದರು. ಅವರನುಹಿಡಿದು ಬಸವಕವಿಯು ಈ ಕಾವ್ಯವನ್ನು ವಾರ್ಧಿಕ ಷಟ್ಪದಿಯಲ್ಲಿ ವಿರಚಿಸಿದನು.

ಆದಿಯಲಿ ಮುಗ್ಧಸಂಗೋತ್ತಮನ ಮಹಿಮೆಯಂ
ಸಾದರದಿ ನಿರ್ಮಿಸಿದ ಬಳಿಕ ಮಹಲಿಂಗ ಜಗ
ದಾದಿ ಮುನಿಚಂದ್ರಮನ ಲೀಲೆಯಂ ವಿರಚಿಸಿದ ಮೇಲಿನ್ನು ಭೂತಳದೊಳು
ನಾದಮಯ ದುರುದುಂಡಿ ಜಂಗಮವಿಲಾಸಮಂ
ಭೇದವಿಲ್ಲದೆ ಪೇಳ್ವೆನು[೪] ....

ಎಂಬ ಪದ್ಯದಿಂದ ಈತನು

೧ ಮುಗ್ಧಸಂಗಮಲೀಲೆ
೨ ಮಹಲಿಂಗಲೀಲೆ
೩ ದುರದುಂಡಿ ಜಂಗಮಲೀಲೆ (ಶಿವಲಿಂಗಲೀಲೆ)

ಎಂಬ ಕಾವ್ಯಗಳನ್ನು ರಚಿಸಿರುವಂತೆ ತಿಳಿದುಬರುತ್ತದೆ. ಈ ಕೃತಿಗಳಲ್ಲಿ ದುರುದುಂಡಿ ಜಂಗಮಲೀಲೆಯೊಂದೇ ಕ್ರಿ. ಶ ೧೯೨೭ರಲ್ಲಿ ಅಚ್ಚಾಗಿದೆ.

ಬಸವಕವಿಯು ವೀರಶೈವನೆಂಬುದಕ್ಕೆ ಆಂತರಿಕ ಬಾಹ್ಯಪ್ರಮಾಣಗಳು ವಿಪುಲವಾಗಿವೆ. ಅವುಗಳಲ್ಲಿ ಈ ಕವಿಯ ವಂಶಪರಂಪರೆ, ಗುರುಪರಂಪರೆ, ಆತನು ರಚಿಸಿದ ಕಾವ್ಯಗಳ ವಸ್ತು, ಅವುಗಳಲ್ಲಿ ಬಂದಿರುವ ಅಷ್ಟಾವರಣ ಪಂಚಾಚಾರಗಳ

---

೧ ಎಂಟನೆಯ ಸಂಧಿಯು ಇದಕ್ಕೆ ಅಪವಾದವಾಗಿದೆ.

೨ ದುರುದುಂಡಿ ಜಂಗಮಲೀಲೆಯ ಪ್ರತಿಯೊಂದು ಸಂಧಿಯಲ್ಲಿಯೂ ಸಹ ಕವಿ ಸೋಲೂರ ಶ್ರೀಚೆನ್ನವೀರೇಶನನ್ನು ಸ್ತೋತ್ರಮಾಡಿರುವನು.

೩ ಮ. ಲೀ. ಸಂ. ೧, ಪ. ೨೩.

೪ ದು. ಜಂ. ಲೀ. ಸಂ. ೧, ಪ. ೨೪

ವಿವರಣೆ ಇವು ಮುಖ್ಯವಾದುವು. ಕಾವ್ಯಾರಂಭದಲ್ಲಿ ಶಿವ, ಪಾರ್ವತಿ, ವಿಘ್ನೇಶ, ಷಣ್ಮುಖ, ವೀರೇಶ್ವರ ಮೊದಲಾದ ದೇವತೆಗಳನ್ನೂ ಬಸವೇಶ್ವರ, ಚೆನ್ನಬಸವೇಶ್ವರ, ಪ್ರಭುದೇವರೇ ಮೊದಲಾದ ಶರಣಸಂದೋಹವನ್ನೂ ಸ್ತುತಿಸಿರುವನು. ಶಿವಭಕ್ತರಾದ ಕಾಳಿದಾಸ, ಭೋಜ, ಬಾಣ, ಮಯೂರ, ಕೇಶಿರಾಜ, ಮಲಯರಾಜರನ್ನೂ ವೀರಶೈವರಾದ ಪಂಡಿತಾರಾಧ್ಯ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ, ಭೀಮಕವಿ, ಮಲ್ಲಣಾರ್ಯ, ಷಡಕ್ಷರದೇವರನ್ನೂ ಭಕ್ತಿಯಿಂದ ಬಲಗೊಂಡು ತನ್ನ ಕಾವ್ಯಗಳನ್ನು ರಚಿಸಿರುವನು.[೧]

ಬಸವಕವಿಯು ವಿನಯಶೀಲನಾಗಿರುವನು; ಷಡಕ್ಷರದೇವರೇ ಮೊದಲಾದ ಕವಿಗಳಂತೆ ತಾನು ಕೋವಿದನಲ್ಲು; ಕೇವಲ ಬಾಲಕನು;[೨] ಸಂಧಿ ಬಂಧಗಳಲ್ಲಿದ್ದ ತಪ್ಪನ್ನು ಕರ್ನಾಟ ಕವಿಜಾಲಪಂಚಾಸ್ಯರು ಕಾರುಣ್ಯದಿಂದ ಮಮಕರಿಸಿ ತಿದ್ದಬೇಕೆಂದು ಪ್ರಾರ್ಥಿಸಿರುವನು.[೩] ಆದರೆ ಆತನು ಸರಸಕವಿಯೂ ಶಾಸ್ತ್ರಕೋವಿದನೂ ಆಗಿದ್ದನೆಂಬುದು ನಿರ್ವಿವಾದವಾದುದು. " ಪರಮ ಕಬ್ಬಿಗರೆಲ್ಲ ಮತ್ಕಾವ್ಯವನು ಬಿಡದೆ ಹರುಷದಿಂದಲಿ ಒರೆದು ಮಮಕರಿಸಿ ಮನವೊಲಿದು ಭಾವಿಸರೆ ಭೂಭಾಗದೊಳ್ "; " ಮತ್ಕಾವ್ಯಕನ್ನಿಕೆಯು ಇಳೆಯೊಳಗೆ ಸದ್ರಸಿಕರೆದೆರಂಗಮಂಟಪದಿ ನಚ್ಚಣಿಸದೇನಿರ್ಪಳೆ ?"[೪] ಎಂದು ಕೇಳುವ ಆತ್ಮವಿಶ್ವಾಸವೂ ಬಸವಕವಿಗಿದೆ. ಈ ಕವಿಯ ಪಾಂಡಿತ್ಯದ ಸ್ಥೂಲಪರಿಚಯವಾಗಬೇಕಾದರೆ ಪ್ರತಿಸಂಧಿಯ ಆರಂಭದ ಪದ್ಯಗಳನ್ನು ನೋಡಬೇಕು. ಶಿವಪುರಾಣ, ಲಿಂಗಪುರಾಣ, ಕ್ರಿಯಾಸಾರದಂತಹ ಗ್ರಂಥಗಳನ್ನು ಬಸವಕವಿಯು ಆಸ್ಥೆಯಿಂದ ಅಭ್ಯಸಿಸಿದ್ದನೆಂಬುದಕ್ಕೆ ಆತನ ಕಾವ್ಯಗಳಲ್ಲಿ ಅಲ್ಲಲ್ಲಿ ಬರುವ ಉಲ್ಲೇಖಗಳೇ ಸಾಕ್ಷಿ.[೫] ಇದಲ್ಲದೆ ಈ ಕಾವ್ಯದುದ್ದಕ್ಕೂ ಎದ್ದುನಿಂತ ಪುರಾಣಾಂತರ್ಗತವಾದ ನೂರಾರು ಕಥೆಗಳು ಕವಿಯ ಪಾಂಡಿತ್ಯವನ್ನು ಪ್ರತಿಬಿಂಬಿಸುತ್ತವೆ. ಈತನ ಸವಿತಾಪಿತಾಮಹರೆಲ್ಲ ಶಾಸ್ತ್ರಕೋವಿದರಾದುದರಿಂದ ಕವಿಗೆ ಪಾಂಡಿತ್ಯದ ಸಂಸ್ಕಾರ ಬಾಲ್ಯದಿಂದಲೇ ಬಂದಿರುವುದರಲ್ಲಿ ಸಂದೇಹವಿಲ್ಲ. ಬಸವಕವಿಯ ವಿದ್ಯಾಗುರುಗಳಾದ ಸೋಲೂರ ಚೆನ್ನವೀರದೇಶಿಕೇಂದ್ರರೂ ಉಭಯ

೧ ಮ. ಲೀ. ಸಂ. ೧, ಪ. ೧೪-೧೫, ದು. ಜಂ. ಲೀ. ಸಂ. ೧, ಪ. ೧೦.

೨ ದು. ಜಂ. ಲೀ. ಸಂ. ೧, ಪ. ೧೬.

೩ ಮ. ಲೀ. ಸಂ. ೧, ಪ. ೨೧.

೪ ಮ. ಲೀ. ಸಂ. ೧, ಪ. ೨೮-೨೯.

೫ ಮ. ಲೀ. ಸಂ. ೧೫, ಪ. ೨೦ ವ್ಯಾಸಮುನಿಯ ಲೈಂಗ್ಯಪುರಾಣದ ಉಲ್ಲೇಖ.
,, ೧೭, ,, ೪೧ ಕಾತ್ಯಾಯನರ ಶಾಖೆಯ ಉಲ್ಲೇಖ.
,, ೮, ,, ೧೧ ವ್ಯಾಸ ಪುರಾಣದ ಉಲ್ಲೇಖ.

ಶಾಸ್ತ್ರಗಳಲ್ಲಿ ಅಸಮವಿಶಾರದರಾಗಿ ಶಿಷ್ಯನಿಗೆ ಒಳ್ಳೇ ವಾತ್ಸಲ್ಯದಿಂದ ವಿದ್ಯಾದಾನ ಮಾಡಿರಬೇಕು. ಅಂತೆಯೇ ಕವಿ ಅವರ ವಿಷಯವಾಗಿ ಉತ್ಕಟವಾದ ಭಕ್ತಿಯನ್ನು ಪ್ರಕಟಿಸಿರುವನು. ಬಸವ ಕವಿಯಲ್ಲಿ ಕಾವ್ಯನಿರ್ಮಿತಿಯ ಶಕ್ತಿ, ಸತತಾಭ್ಯಾಸ, ಶಾಸ್ತ್ರಪರಿಚಯ ಇವು ಮುಪ್ಪುರಿಗೊಂಡಿದ್ದುವು.

## ಬಸವಕವಿಯ ಕಾಲ

ಬಸವಕವಿಯ ದುರುದುಂಡಿಜಂಗಮಲೀಲೆಯಲ್ಲಿ ಆತನ ಕಾಲವನ್ನು ಸ್ಪಷ್ಟ ಪಡಿಸುವ ಕೆಳಗಣ ಪದ್ಯವಿದೆ.

ವರಸಪ್ತದಶಶತಕದ್ವಾಶೀತಿಗಣನೆಯಿಂ
ಮಿರುಪ ರೌದ್ರಾಭಿಧಾನದ ವತ್ಸರಾಗ್ರದೊಳ್
ಮೆರೆವ ಫಾಲ್ಗುಣಮಾಸ ಶುಕ್ಲಪಕ್ಷದ ನವಮಿ ತಿಥಿ ಸೌಮ್ಯವಾಸರದೊಳು
ವರ ಪುನರ್ವಸು ತಾರೆಯಾಮ್ಯೈಕ ಶುಭಯೋಗ
ಮಿರೆ ಬಸವಕವಿಯಿಂದೆ ನುತವಾದ ದುರುದುಂಡಿ
ವರನ ಸತ್ಕಾವ್ಯವಿದ ದೋಷವೊಂದಿರೆ ತಿರ್ದಿಯೋದುವುದು ವಿಭುದರ್ಕಳು[೧]

ಈ ಪದ್ಯದಿಂದ ಬಸವಕವಿಯು ಶಾಲಿವಾಹನ ಶಕ ೧೭೮೨ ನೆಯ ರೌದ್ರನಾಮ ಸಂವತ್ಸರ ಫಾಲ್ಗುಣ ಶುದ್ಧ ನವಮಿ ಸೋಮವಾರ ಪುನರ್ವಸುನಕ್ಷತ್ರದಲ್ಲಿ (ಕ್ರಿ. ಶ. ೧೮೬೦ ನೆಯ ಇಸ್ವಿ) ದುರುದುಂಡಿ ಜಂಗಮಲೀಲೆಯನ್ನು ಮುಕ್ತಾಯಗೊಳಿಸಿದಂತೆ ತಿಳಿದು ಬರುತ್ತದೆ. ಇದರಿಂದ ಬಸವಕವಿಯು ೧೯ ನೆಯ ಶತಮಾನದ ಮಧ್ಯ ಭಾಗದಲ್ಲಿ ಜೀವಿಸಿದ್ದನೆಂದು ಸ್ಪಷ್ಟವಾಗುತ್ತದೆ.

## ಬಸವಕವಿಯ ಕಾವ್ಯಗಳು

### ಮುಗ್ಧಸಂಗಮಲೀಲೆ

ಮುಗ್ಧಸಂಗಮಲೀಲೆಯಲ್ಲಿ ಕವಿ ಉಪ್ಪುರಗಟ್ಟಿಯ ಮುಗ್ಧಸಂಗಯ್ಯನ ಚರಿತೆಯನ್ನು ಬಣ್ಣಿಸಿರುವನು. ಉಪ್ಪುರಗಟ್ಟಿಯಲ್ಲಿ ಮುಗ್ಧಸಂಗಯ್ಯನೆಂಬ ಮಹಿಮಾಪುರುಷನಿದ್ದನು. ಆತನು ದನಕಾಯುವ ಕಾಯಕದಲ್ಲಿ ನಿರತನಾಗಿ ನಿತ್ಯವೂ ಶಿವ ಪೂಜೆಯನ್ನು ಮಾಡುತ್ತಿದ್ದನು. ಒಂದು ದಿನ ಮುಗ್ಧಸಂಗಯ್ಯನು ದನಕಾಯುತ್ತ

೧ ದು. ಜಂ. ಲೀ. ಸಂ. ೩೩, ಪ. ೩೮.

ಅಡವಿಯಲ್ಲಿ ನಿಂತಿರಲು ಮಲ್ಲಿಕಾರ್ಜುನನ ದರ್ಶನಕ್ಕೆಂದು ಹೊರಟ ಪರಸಿಯನ್ನು ಕಂಡನು. ತಾನೂ ಆ ಪರಸಿಯೊಡನೆ ಹೊರಟು ಒಂದು ದಿನದಲ್ಲಿ ಅರುವತ್ತುಗಾವುದ ನಡೆದು ಶ್ರೀಗಿರಿಗೆ ಬಂದು ಮಲ್ಲಿಕಾರ್ಜುನನ ದರ್ಶನ ಮಾಡಿಕೊಂಡು ಅಂದೇ ಶ್ರೀಗಿರಿಯಿಂದ ಉಪುರಗಟ್ಟಿಗೆ ಬಂದನು. ಮುಗ್ಧಸಂಗನ ಭಕ್ತಿಗೆ ಮೆಚ್ಚಿ ಶ್ರೀಶೈಲದ ಲಿಂಗ, ನದಿಗಳೆಲ್ಲ ಆತನ ಬೆನ್ನಹಿಂದೆ ಬಂದುವು. ಹೀಗೆ ಬಂದ ಲಿಂಗ-ನದಿಗಳನ್ನೆಲ್ಲ ಉಪುರಗಟ್ಟಿಯಲ್ಲಿ ಸ್ಥಾಪಿಸಿ ಅದನ್ನು ಮುಗ್ಧಸಂಗಮನಾಥನು ಕೈಲಾಸವೆಂದೆನಿಸಿದನು.

ಈ ಕಾವ್ಯ ಚಿಕ್ಕದಾದರೂ ಜನಪ್ರಿಯವಾಗಬಹುದಾಗಿದೆ. ಮೊದಲನೆಯ ಕೃತಿಯಲ್ಲಿಯೇ ಬಸವಕವಿಯ ಕಾವ್ಯಶಕ್ತಿ ಚಿಗುರಿನಿಂತಿದೆ.

**

## ದುರದುಂಡಿ ಜಂಗಮಲೀಲೆ

ದುರದುಂಡಿಜಂಗಮ ( ಶಿವಲಿಂಗ ) ಲೀಲೆಯು ಈ ಕವಿಯ ಮೂರನೆಯ ಕೃತಿ. ಇದು ವಾರ್ಧಿಕ ಷಟ್ಪದಿಯಲ್ಲಿದೆ.

ನಂದಿಯ ಹೃದಯದಿಂದ ಜಂಗಮನವತರಿಸಿ, ಶಿವನಿಂದ ಶಿವಲಿಂಗನೆಂದು ನಾಮಕರಣಹೊಂದಿ ಮಹಲಿಂಗಜಂಗಮನ ಗುರುವಾದ ಧವಳಾಪುರದ ಗುರುಲಿಂಗ ವಿಭುಗಳಿಂದ ಉಪದೇಶ ಪಡೆದು ಮಹಲಿಂಗೇಶನೊಂದಿಗೆ ತೇರದಾಳ ಪ್ರಭುದೇವರಲ್ಲಿಗೆ ಬಂದನು. ಅಲ್ಲಿಂದ ಮುಂದೆ ಅರಭಾವಿಗೆ ಆಗಮಿಸಿ ಅನೇಕ ಪವಾಡಗಳನ್ನೆಸಗಿದನು. ಅವುಗಳಲ್ಲಿ ಆತನು ಕೊಟ್ಟೂರ ಬಸವೇಶನನ್ನು ಅರಭಾವಿಗೆ ಬರಮಾಡಿಕೊಂಡುದು, ಟೀಪು ಸುಲ್ತಾನನು ಕಿತ್ತೂರ ಮಲಸರ್ಜನನ್ನು ಬಂಧಿಸಿದಾಗ ಆತನನ್ನು ಬಿಡಿಸಿದುದು, ಇವೇ ಮೊದಲಾದ ಪವಾಡಗಳು ಮುಖ್ಯವಾಗಿವೆ. ಅವುಗಳ ವಿವರಣೆ ಹೃದಯಂಗಮವೂ ಆಗಿದೆ.

ಈ ಕಾವ್ಯದ ಶೈಲಿ ಸುಂದರವಾಗಿದೆ; ಬಂಧುರವಾಗಿದೆ. ಪದಪ್ರಯೋಗ ನಿರರ್ಗಳವಾಗಿದೆ. ಮಹಲಿಂಗಜಂಗಮ ಮತ್ತು ಶಿವಲಿಂಗಜಂಗಮ ಇರ್ವರೂ ಸಮಕಾಲೀನರೆಂಬುದೂ ಅವರಿಬ್ಬರಿಗೂ ಧವಳಾಪುರದ ಗುರುಲಿಂಗಶಿವಯೋಗಿಗಳು ಉಪದೇಶವಿತ್ತಿರುವರೆಂಬುದೂ ಗಮನಾರ್ಹವಾಗಿದೆ.

**

## ಮಹಲಿಂಗಲೀಲೆ : ' ಮಹಲಿಂಗದೇವ '

ಮಹಲಿಂಗಲೀಲೆಯ ಕಥಾನಾಯಕನಾದ ಮಹಲಿಂಗದೇವನು ಐತಿಹಾಸಿಕ ಪುರುಷನು. ಈತನು ಮುಧೋಳ ಸಂಸ್ಥಾನದ ಅಧಿಪತಿಯಾದ ಮಾಲೋಜಿರಾಜನಿಂದ ಪೂಜೆವಡೆದು ಆತನ ತಮ್ಮಂದಿರನ್ನೂ ಮಕ್ಕಳನ್ನೂ ಉದ್ಧರಿಸಿದ ವಿಷಯವು ಈ ಕಾವ್ಯದ ಬಹುಭಾಗವನ್ನು ವ್ಯಾಪಿಸಿದೆ. ಪತ್ರಿಪರಗಣೆಯ ವಿಷಯವಾಗಿ ನಡೆದ ಯುದ್ಧದ ಉಲ್ಲೇಖವೂ ಈ ಕಾವ್ಯದಲ್ಲಿ ಬಂದಿದೆ. ಮಾಲೋಜಿ ಮಹಾರಾಜನು ಈ ಯುದ್ಧಕ್ಕೆ ಹೊರಡುವ ಮೊದಲು ಮಹಲಿಂಗಮುನಿವರನ ಆಶೀರ್ವಾದಪಡೆದನೆಂದೂ ಯುದ್ಧದಲ್ಲಿ ಮುನಿಯ ದರ್ಶನವಾಗಿ ಕೈಯಿಂದ ಖಡ್ಗವು ಕಳಚಿ ಕೆಳಗೆ ಬಿದ್ದಾಗ ಆ ಮುನಿವರನಿಂದಲೇ ಅದನ್ನು ಪಡೆದನೆಂದೂ ಯುದ್ಧಕ್ಕೆ ಹೊರಡುವ ಮೊದಲು ಮಹಲಿಂಗಮುನಿಪತಿಗೆ ನಮಸ್ಕರಿಸುವುದನ್ನು ಮರೆತು ಹೋದ ಗೋವಿಂದರಾಜನು ಅತ್ಯಂತ ಪರಾಕ್ರಮದಿಂದ ಹೋರಾಡಿ ಕೋಟೆಯನ್ನು ಕೈವಶಮಾಡಿಕೊಂಡು ರಣರಂಗದಲ್ಲಿ ಮಡಿದನೆಂದೂ ಈ ಕಾವ್ಯದ ೨೧ ನೆಯ ಸಂಧಿಯಲ್ಲಿ ಹೇಳಲಾಗಿದೆ. ಇದರಿಂದ ಮಹಲಿಂಗಮುನಿವರ್ಯನು ಮುಧೋಳ ಸಂಸ್ಥಾನದ ಮಾಲೋಜಿರಾಜನ ಕಾಲದಲ್ಲಿ ಜೀವಿಸಿದ್ದನೆಂದು ಸ್ಪಷ್ಟವಾಗುತ್ತದೆ.

ಈ ಮಾಲೋಜಿಯು ಕ್ರಿ.ಶ.ಸು.೧೭೭೦ ರಿಂದ ೧೮೦೫ ರ ವರೆಗೆ ಜೀವಿಸಿದ್ದನೆಂದು ನಿರ್ಣಯಿಸಬಹುದಾಗಿದೆ. ೧೭೭೨ ನೆಯ ನವಂಬರ ೧೮ ರಿಂದ ಒಂಬತ್ತು ತಿಂಗಳುಮಾತ್ರ ರಾಜ್ಯವಾಳಿದ ನಾರಾಯಣರಾವ ಪೇಶ್ವೆಯ ಕೊಲೆಯ ಸತ್ಯಸಂಗತಿಯನ್ನು ತಿಳಿದುಕೊಳ್ಳಲು ಪುಣೆಯ ಅರಮನೆಗೆ ಹೋದ ಮಹತ್ವದ ರಾಜಕಾರಣಪಟುಗಳಲ್ಲಿ ಮಾಲೋಜಿಯೂ ಒಬ್ಬನಾಗಿದ್ದನು.[೧] ಆತನು ೧೮೦೫ ರಲ್ಲಿ ಮರಣ ಹೊಂದಿದನು.[೨] ಸು. ೧೭೭೦ ರಿಂದ ೧೮೦೫ ರವರೆಗಿನ ಅವಧಿಯಲ್ಲಿ ಮಹಲಿಂಗ ಜಂಗಮನಾಥನು ಜೀವಿಸಿದ್ದನೆಂದು ಈ ಕಾವ್ಯದೊಳಗಣ ಐತಿಹಾಸಿಕ ಸಂಗತಿಗಳಿಂದ ನಿರ್ಧರಿಸಬಹುದು. ಈ ಕಾಲಾವಧಿಯ ಆಚೆಗೂ ಈಚೆಗೂ ಆತನು ಜೀವಿಸಿರಲಿಲ್ಲ

---

೧ Bhavanrao Pratinidhi, Maloji Ghorpade and other influential persons went to palace to obtain correct news of what happened.

—*New History, of the Marathas Vol.III by G. S. Sardesai, P.27*

೨ In 1805 Maloji died

—*Indian Princes and the Crown P. 250.*

ವೆಂದು ಇದರರ್ಥವಲ್ಲ. ಈಗ ನಮಗೆ ದೊರೆತ ಆಧಾರಗಳಿಂದ ಈ ಮಹಾ ತಪಸ್ವಿಯು ೧೮ ನೆಯ ಶತಮಾನದಲ್ಲಿ ಬಾಳಿ ಬೆಳಗಿದನೆಂದು ತಿಳಿಯಬಹುದಾಗಿದೆ. ಮಹಲಿಂಗಮುನಿನಾಥನ ಸಮಕಾಲೀನರಾದ ದುರುದುಂಡಿ ಶಿವಲಿಂಗಯೋಗಿಗಳು ಟೀಪುಸುಲ್ತಾನನ ಬಂಧನಕ್ಕೊಳಗಾದ ಕಿತ್ತೂರ ಮಲ್ಲಸರ್ಜದೊರೆಯನ್ನು ಬಿಡಿಸಿದ ಉಲ್ಲೇಖವು ದುರುದುಂಡಿ ಜಂಗಮ (ಶಿವಲಿಂಗ) ಲೀಲೆಯಲ್ಲಿ ಬಂದಿದೆ.[೧] ಟೀಪುಸುಲ್ತಾನನು ಜೀವಿಸಿದುದು ಕ್ರಿ. ಶ. ೧೭೯೯ ರವರೆಗೆ. ಹೀಗೆ ಆಂತರಿಕ ಬಾಹ್ಯ ಪ್ರಮಾಣಗಳ ಆಧಾರಗಳಿಂದ ಮಹಲಿಂಗಜಂಗಮನಾಥನು ೧೮ನೆಯ ಶತಮಾನದ ಬಹುಭಾಗದಲ್ಲಿ ಜೀವಿಸಿದ್ದನೆಂದು ನಿರ್ಣಯಿಸಬಹುದು. ಈ ಕಾವ್ಯದಲ್ಲಿ ಇಲ್ಲವೆ ಬೇರೆಡೆ ಎಲ್ಲಿಯೂ ಈ ಜಂಗಮವರ್ಯನು ಭೂಲೋಕಕ್ಕೆ ಅವತರಿಸಿದ ಮಿತಿಯಾಗಲಿ, ಲಿಂಗೈಕ್ಯನಾದ ತಿಥಿಯಾಗಲಿ ಉಪಲಬ್ಧವಾಗಿರುವುದಿಲ್ಲ. ಈತನ ತಂದೆತಾಯಿಗಳಾರೆಂಬುದೂ ಜನ್ಮಸ್ಥಳವಾವುದೆಂಬುದೂ ತಿಳಿಯುವಂತಿಲ್ಲ.

ಹದಿನೈದನೆಯ ಶತಮಾನದಲ್ಲಿ ಮಹಲಿಂಗದೇವನೆಂಬ ಒಬ್ಬ ಮಹಾತಪಸ್ವಿಯಿದ್ದುದು ಇತಿಹಾಸಪ್ರಸಿದ್ಧವಿದೆ. ಆತನನ್ನು ಪುಲಿಗೆರೆಯ ಪುರವರಾಧೀಶ್ವರ, ಅಪೂರ್ವಸ್ವಯಂಭೂಪ್ರಸನ್ನಚೆನ್ನದಕ್ಷಿಣ ಶ್ರೀ ಸೋಮನಾಥದೇವರ ದಿವ್ಯ ಶ್ರೀಪಾದಪದ್ಮಾರಾಧಕ, ತ್ರಿಕಾಂಡನಿಷ್ಠ, ಪರಮ ವೀರಶೈವಾಗಮಾಚಾರ್ಯ ಎಂದು ಕರೆಯಲಾಗಿದೆ.[೨] ಈತನು ಏಕೋತ್ತರಶತಸ್ಥಲ, ಪ್ರಭುದೇವರ ಷಟ್‌ಸ್ಥಲ ಜ್ಞಾನಚಾರಿತ್ರವಚನದ ಟೀಕೆ ಈ ಗ್ರಂಥಗಳನ್ನು ಬರೆದಿದ್ದಾನೆ. ಇವನಿಗೆ ವಾರಾಣಸೀಂದ್ರ ಎಂಬ ಇನ್ನೊಂದು ಹೆಸರಿದ್ದಿತು. ಬಾಗೆಯ ಬಂಕನಾಥನು ಇವನ ಅನಾದಿ ಗುರುಕುಲದಲ್ಲಿ ಓರ್ವನು. ಇವನ ಶಿಷ್ಯ ಕುಮಾರ ಬಂಕನಾಥ; ಅವನ ಕರಜಾತ ಜಕ್ಕಣಾರ್ಯ. ನೂರೊಂದುಜನ ವಿರಕ್ತರಲ್ಲಿ ಮಹಲಿಂಗದೇವನು ಪ್ರಭಾವಶಾಲಿಯಾಗಿ ಪ್ರೌಢದೇವರಾಯನ ಕಾಲದಲ್ಲಿ ನಡೆದ (೧೪೧೯-೧೪೪೬) ವೀರಶೈವಧರ್ಮ, ಸಾಹಿತ್ಯಗಳ ಪುನರುಜ್ಜೀವನಕಾರ್ಯದಲ್ಲಿ ಮಹತ್ವದ ಪಾತ್ರವನ್ನೆಸಗಿದಂತೆ ತಿಳಿದುಬರುತ್ತದೆ. ಈ ಮಹಲಿಂಗದೇವನ ಗದ್ದುಗೆ ಮಹಲಿಂಗಪುರದಲ್ಲಿರುವುದಾಗಿ ಪ್ರತೀತಿಯಿದೆ.[೩] ಬಾಗೆಯ ಬಂಕನಾಥನ ಸಮಾಧಿ ರಾಯಬಾಗದಲ್ಲಿದೆ. ಇದರಿಂದ ಹದಿನೈದನೆಯ ಶತಮಾನದ ಈ ಮಹಲಿಂಗದೇವನ ಕಾರ್ಯರಂಗವು ಮಹಲಿಂಗಪುರ, ರಾಯಬಾಗ ಮೊದಲಾದ ಪ್ರದೇಶಗಳನ್ನೊಳ

---

೧ ದು. ಜಂ. ಲೀ. ಸಂ. ೧೧. ೨ ಕ. ಚ. ಭಾ. ೨, ಪು. ೫೦

೩ ೧೯೪೩ನೆಯ ನವ್ಹಂಬರ ೧೦, ೧೧, ೧೨ ರಂದು ಮುಧೋಳದಲ್ಲಿ ನೆರವೇರಿದ ಅಖಿಲ ಭಾರತ ಶಿವಾನುಭವ ಸಮ್ಮೇಲನದ ವರದಿ.

ಗೊಂಡ ಮುದುವೊಳಲ ನಾಡಾಗಿರಬಹುದೆಂದು ಊಹಿಸಿದರೆ ತಪ್ಪಾಗದು. ಮಹ ಲಿಂಗಲೀಲೆಯ ಕಥಾನಾಯಕನಾದ ಮಹಲಿಂಗಜಂಗಮನಾಥನು ಈ ಮಹಲಿಂಗ ದೇವನ ಪರಂಪರೆಯಲ್ಲಿ ಬಂದ ವಿರಕ್ತಜಂಗಮನಾಗಿರಬಹುದೇ ? 'ಈತನೇ ಸಪ್ತ ಶತವರ್ಷ ಪರಿಯಂತರಂ ಬಾಳ್ದಸವು ಮಹಿಮಾಂಕನು'[೧] ಎಂಬ ವರ್ಣನೆಯಿಂದ ಈ ಮಹಲಿಂಗಜಂಗಮನಾಥನು ಏಳುನೂರು ವರ್ಷ ಬಾಳಿರುವನೆಂದು ತಿಳಿದು ಬರುತ್ತದೆ. ಹದಿನೈದನೆಯ ಶತಮಾನದ ಮಹಾತಪಸ್ವಿ ಮಹಲಿಂಗದೇವನ ಪರಂಪ ರೆಯಲ್ಲಿ ಈ ಮಹಲಿಂಗದೇವನು ಬಂದುದರಿಂದ ಜನತೆಯಲ್ಲಿ ಇಂತಹ ಪ್ರತೀತಿ ಯುಂಟಾಗಿರಬಹುದೇ ? ಕೊನೆಯ ನಿರ್ಣಯಕ್ಕೆ ಆಧಾರಗಳಿನ್ನೂ ಸಾಲದಾಗಿವೆ.

ಮಹಲಿಂಗಜಂಗಮನಾಥ ಮತ್ತು ಬಸವಕವಿ ಇವರ ಕಾಲಾವಧಿಯ ನಡುವೆ ಸುಮಾರು ಅರ್ಧಶತಮಾನದ ಅಂತರವಿದ್ದಂತೆ ತೋರುತ್ತದೆ. ಕವಿಯೂ ಕಥಾ ನಾಯಕನೂ ಇಬ್ಬರೂ ಮುದುವೊಳಲ ನಾಡಿನವರೇ. ಆದುದರಿಂದ ಮಹಲಿಂಗ ಜಂಗಮನಾಥನ ಅನೇಕ ಪವಾಡಗಳನ್ನು ಕವಿಯು ಜನರ ಬಾಯಿಂದ ಕೇಳಿ ಕೊಂಡಿರುವುದರಲ್ಲಿ ಸಂದೇಹವಿಲ್ಲ. ಆತನು ಚಿಕ್ಕವನಿರುವಾಗ ಮಹಲಿಂಗ ಮುನಿನಾಥನನ್ನು ಕಂಡಿರುವ ಸಂಭವವೂ ಉಂಟು. ಮಹಲಿಂಗಮುನಿನಾಥನು ನಿರಾಭಾರಿ ಜಂಗಮನಾಗಿ ಮಹಾತಪಸ್ಸನ್ನು ಆಚರಿಸಿ ಭಕ್ತರನ್ನು ಉದ್ಧರಿಸಿ ಪವಾಡಗಳನ್ನು ತೋರಿದುದೂ ಘೋರ್ಪಡೆಯ ವಂಶದ ಮಾಲೋಜಿರಾಜನು ಆತನ ಭಕ್ತನಾಗಿ ಮಹಲಿಂಗಪುರದ ಭೂಮಿಯನ್ನು ಆತನಿಗೆ ದಾನವಾಗಿ ಅರ್ಪಿಸಿದುದೂ ಜನತೆಯ ಮನಸ್ಸಿನಲ್ಲಿ ಸ್ಥಿರವಾದ ಪ್ರಭಾವವನ್ನು ಬೀರಿದ್ದುವು. ಬಸವಕವಿಯು ಈ ಕಥೆಗಳನ್ನು ಒಳ್ಳೇ ಭಕ್ತಿಯಿಂದ ಕೇಳಿರಬೇಕು. ಮಹಲಿಂಗ ಮುನಿನಾಥನು ಭಕ್ತರ ರೋಗಾದಿಗಳನ್ನು ಪರಿಹರಿಸುತ್ತಿದ್ದ ಸಂಗತಿಯು ಬಸವ ಕವಿಯ ಅಂತರಂಗದ ಆಳವನ್ನು ಮುಟ್ಟಿದಂತಿದೆ. ಈ ಕವಿಯು ಮಾರುತೋಪ ದ್ರವರೋಗಪೀಡಿತನಾಗಿರಲು ಜೀರಕಾಮೃತಮಠಾಧೀಶರು ಮಹಾಲಿಂಗಮುನಿ ನಾಥನ ಚರಿತೆಯನ್ನು ಕಾವ್ಯರೂಪದಿಂದೊರೆಯಬೇಕೆಂದು ಸೂಚಿಸಲು ಆ ರೋಗ ನಿವಾರಣೆಗಾಗಿ ಈತನು ಈ ಕಾವ್ಯವನ್ನು ಭಕ್ತಿಯಿಂದ ರಚಿಸಿರುವನೆಂದು ಹಿಂದೆ ಹೇಳಲಾಗಿದೆ. ರೋಗಪೀಡಿತನಾದ ಕವಿಯ ಮನೆದೆದುರು ಮಹಲಿಂಗಮುನಿನಾಥನು ಭಕ್ತರ ರೋಗನಿವಾರಣೆಮಾಡಿದ ಸಂಗತಿಗಳು ಮೇಲಿಂದ ಮೇಲೆ ಬಂದು ನಿಲ್ಲುವುದು ಸ್ವಾಭಾವಿಕವಾಗಿದೆ. ಇದರಿಂದ ಕವಿಯು ಕೇವಲ ತನ್ನ ರೋಗ ನಿವಾರಣೆಗಾಗಿಯೇ ಈ ಕಾವ್ಯವನ್ನು ರಚಿಸಿರುವನೆಂದು ಅರ್ಥೈಸಲಾಗದು.

೧ ಮ. ಲೀ. ಸಂ. ೧೨, ಪ. ೩೮.

ಮಾರುತೋಪದ್ರವದ ರೋಗಮದು ಬಿಡದೆನ್ನ
ಘೋರಿಸುತ್ತಿರೆ ಕಂಡು ಕಾರುಣ್ಯದೇಳ್ಗೆಯಿಂ
ಜೀರಕಾಮೃತಮಠಾಧೀಶ ಗುರುಕುಲಚಂದ್ರ ಶಿವರುದ್ರಮಾಹೇಶ್ವರಂ
ಮಾರಹರ ಮಹಲಿಂಗಲೀಲೆಯಿಂ ನಿರ್ಮಿಸು ನಿ
ವಾರಿಸುವದೆಂದೆನುತ ಸೂಚಿಸಲು ಭಕ್ತಿಯಿಂ
ಪ್ರಾರಂಭಿಸಿದೆನಿಂದು ಪರಮಭಕ್ತೋತ್ತಮರು ಲಾಲಿಪುದು ಸಂತಸದೊಳು
(ಮ. ಲೀ. ಸಂ. ೧, ಪ. ೨೩)

ಇದೊಂದು ಪದ್ಯದ ಹೊರತು ಕವಿ ಇಡೀ ಕಾವ್ಯದಲ್ಲೆಲ್ಲಿಯೂ ಈ ಪ್ರಸ್ತಾಪವನ್ನೆತ್ತು ವುದಿಲ್ಲ. ಭಕ್ತಿ ಪ್ರಚೋದನೆಯಿಂದ ಕಾವ್ಯವನ್ನು ಪ್ರಾರಂಭಿಸಿದ ಕವಿಯು ಕೊನೆಯ ವರೆಗೂ ಭಕ್ತಿಯನ್ನೇ ಪ್ರಕಟಪಡಿಸಿರುವನು. ಆ ಭಕ್ತಿಗಾಗಿ ರೋಗನಿವಾರಣೆಯ ಕೂಲಿಬೇಡುವ ಕಾರ್ಯಕ್ಕೆ ಆತನು ಕೈಹಾಕಿಲ್ಲ. ಮಯೂರ, ಬಾಣ, ವೆಂಕಟಾ ಧ್ವರಿ, ಜಗನ್ನಾಥ, ಜಯದೇವ ಮೊದಲಾದ ಕವಿಗಳು ಕಾವ್ಯಗಳನ್ನು ರಚಿಸಿ ಶಿವೇತರಕ್ಷತಿಯನ್ನುಂಟುಮಾಡಿಕೊಂಡಿರುವುದು ಸುಪ್ರಸಿದ್ಧವಿದೆ. ಹೀಗೆಯೇ ಬಸವಕವಿಯೂ ತನ್ನ ಭಕ್ತಿಯ ಬಲದಿಂದ ರೋಗನಿವಾರಣೆಯನ್ನುಂಟುಮಾಡಿ ಕೊಂಡಿರಬಹುದು.

## ಕಾವ್ಯವಿಮರ್ಶೆ

'ಮಹಲಿಂಗಲೀಲೆ' ಸೋಲೂರ ಶ್ರೀ ಚೆನವೀರೇಶನ ಸ್ತುತಿಯಿಂದ ಪ್ರಾರಂಭ ವಾಗುತ್ತದೆ. ಭಕ್ತನಾದ ಬಸವಕವಿಯ ದೃಷ್ಟಿಯಲ್ಲಿ ಚೆನವೀರೇಶನೇ 'ಭೋಗಿ ವರಸೂತ್ರಸಮರೂಪ'ನಾಗಿರುವನು. ಗಂಭೀರವಾದ ಶೈಲಿಯಲ್ಲಿ ಆತನ ಸ್ತುತಿ ಪ್ರಾರಂಭವಾಗುತ್ತದೆ.

ಶ್ರೀಗಿರಿಸುತಾಲಪನಪಂಕೇಜದಿನನಾಥ
ಯೋಗಿಜನಮಾನಸಾಲಯ ಗಣಪಗುಹತಾತ

ಎಂಬ ವರ್ಣನೆಯಲ್ಲಿ ಕವಿಯ ಗುರುಭಕ್ತಿಯೂ ಆತನ ಗಂಭೀರಶೈಲಿಯೂ ಸ್ಪಷ್ಟ ವಾಗಿ ಪ್ರಕಟವಾಗಿವೆ. ಶಿವ, ಪಾರ್ವತಿ, ವಿಘ್ನೇಶ, ಷಣ್ಮುಖ, ಶರಣವೃಷಭೇಶ್ವರ, ಚೆನ್ನಬಸವೇಶ್ವರ, ವೀರೇಶ್ವರ, ಪ್ರಭುರಾಯ, ಭೃಂಗೀಶ ಮೊದಲಾದವರನ್ನು ಕವಿಯು ಬಹು ಸುಂದರವಾಗಿ ಬಣ್ಣಿಸುತ್ತಾನೆ. ಸಂಪ್ರದಾಯಕ್ಕನುಗುಣವಾಗಿ ಕುಕ ವಿನಿಂದೆಯನ್ನೂ ಮಾಡುತ್ತಾನೆ. 'ರೋಗಿ ಪರಮಾನ್ನಮಂ, ಗೂಗೆ ದಿವಸೇಂದ್ರನಂ,

ಸತ್ಕಾವ್ಯದರ್ಥಗಳ ಪೂಗಮಂ ಬಲ್ಲರೇಸೆಪ್ರಬುಧವರಾಸಸರ್ ?' ಎಂದು ಜರೆದು, ಮತ್ಕಾವ್ಯಕನ್ನಿಕೆಯು ರಸಿಕರ ಹೃದಯಮಂಟಪದಲ್ಲಿ ನಚ್ಚಣಿಸದೇನಿರ್ಪಳೇ ? ಎಂದು ಕೇಳುತ್ತಾನೆ. ಕವಿಯು ಕೇವಲ ಒಂದು ಪುರಾಣವನ್ನು ಬರೆಯಬೇಕೆಂಬ ಉದ್ದೇಶವನ್ನಿಟ್ಟುಕೊಳ್ಳದೆ ಕಾವ್ಯವನ್ನೊರೆಯಬೇಕು; ರಸಿಕರ ಮನವನ್ನು ತಣಿಸ ಬೇಕು ಎಂಬ ಧ್ಯೇಯವನ್ನಿಟ್ಟುಕೊಂಡುದು ಗಮನಾರ್ಹವಾಗಿದೆ. ಇದರ ಫಲ ವಾಗಿಯೇ ಮಹಲಿಂಗಲೀಲೆಯೊಂದು ಸತ್ಕಾವ್ಯವಾಗಿ ಪರಿಣಮಿಸಿದೆ. ಚಲಿತಲಂಕಾರ ಗಳ ಜಾತ, ಸ್ಫುರತಿವಿಭ್ರಮದ ಭಾವ, ಲಲಿತಪದಗತಿರೀತಿ, ಶೃಂಗಾರಾದಿ ರಸ ಇವು ತನ್ನ ಕಾವ್ಯದ ಮುಖ್ಯಗುಣಗಳೆಂದು ಕವಿ ಹೇಳುತ್ತಾನೆ.[೧] ಭಾವ, ರಸ, ಅಲಂಕಾರ, ಲಲಿತಪದ ಇವು ಕಾವ್ಯದ ಅಂತರಂಗವೆಂದರಿತ ಬಸವಕವಿಯು ಸತ್ಕವಿಯೆಂಬಲ್ಲಿ ಸಂದೇಹವಿಲ್ಲ.

ಮುನ್ನೀರಿನ ಸಾಮಯಿಕ ವರ್ಣನೆಯಿಂದ ಕಾವ್ಯ ಮುಂದುವರಿಯುತ್ತದೆ. ವಡಬಾಗ್ನಿಯ ಉಲ್ಬಣದ ನಾದದಿಂದ, ತಡಿವಿಡಿದು ತುಂಬಿದ ಪವಳದಿಂದ, ಹಡಗದ ಬೆಡಗಿನಿಂದ ಕಡಲು ಕಡು ರಮ್ಯವಾಗಿದೆ. ಸಾಗರದ ಮಧ್ಯದಲ್ಲಿದ್ದ ಮೇರುಗಿರಿಯ ವರ್ಣನೆಯಲ್ಲಿ ಸುಂದರವಾದ ಕಲ್ಪನೆಯಿದೆ. ಉನ್ನತವಾದ ಮೇರು ಗಿರಿಯ ತಟದ ತಾರಾಳಿಯನ್ನು ಕಂಡು ಅಮರಾಂಗನೆಯರು ಭ್ರಾಂತಿಯಿಂದ ಮುತ್ತೆಂದು ಹಿಡಿಯಹೋದರಂತೆ. ಅಲ್ಲಿ ಅಂಬರಾಂಗನೆಯ ಬೈತಲೆಯೊಳಿಹ ಸೀಮಂತರತ್ನವೆಂಬಂತೆ ಶಿವಪುರವು ಕಣ್ಗೆ ಮಂಗಲಮಯವಾಗಿದೆ. ಪ್ರಾಚೀನ ಕವಿಗಳ ಕಾವ್ಯಶಕ್ತಿಯನ್ನು ವಿಶೇಷವಾಗಿ ಕಾಣುವುದು ವರ್ಣನೆಯಲ್ಲಿ. ಮಹಲಿಂಗ ಲೀಲೆಯ ಇಂತಹ ವರ್ಣನೆಗಳಿಂದ ಬಸವಕವಿಯು ಕಲ್ಪನಾಶಕ್ತಿಯುತನಾದವ ನೆಂಬುದು ಸ್ಪಷ್ಟವಾಗುತ್ತದೆ.

ಶತಕೋಟಿ ಮಿಂಚಿನ ಮಹಾಬೆಳಗಿನಿಂದ ಆದಿಯಲ್ಲಿ ಪರವಸ್ತು ನಂದೀಶನ ಅಂತರಂಗದಲ್ಲಿದ್ದಿತೆಂದೂ ಜಂಗಮವು ಆ ಪರವಸ್ತುವಿನ ಪ್ರಾಣಕ್ಕೆ ಚೇತನವಾಗಿದ್ದಿ ತೆಂದೂ ಆಗ ಪಂಚಭೂತಾದಿ ತತ್ತ್ವಂಗಳು ಮಿಂಚಿರಲಿಲ್ಲವೆಂದೂ ಕವಿ ವೀರಶೈವ ಪರಿಭಾಷೆಯಲ್ಲಿ ಸೃಷ್ಟಿಯ ವ್ಯುತ್ಪತ್ತಿಯನ್ನು ವಿವರಿಸಿರುವನು. ಕರ್ನಾಟಕದಲ್ಲಿ ಖಿಲವಾಗುತ್ತಿರುವ ಶಿವಭಕ್ತಿಯನ್ನು ಉದ್ಧರಿಸಬೇಕೆಂದು ನಾರದನು ಶಿವನಲ್ಲಿ ಪ್ರಾರ್ಥಿಸುವನು. ಆತನ ಪ್ರಾರ್ಥನೆಯಲ್ಲಡಗಿರುವ ಶಿವಭಕ್ತಿಭಾವವನ್ನೂ ಅದನ್ನಭಿ ವ್ಯಕ್ತಪಡಿಸಿರುವ ಕಾವ್ಯದ ಶಬ್ದಸೌಂದರ್ಯವನ್ನೂ ನೋಡಬೇಕು.

೧ ಮ. ಲೀ. ಸಂ. ೧, ಪ. ೩೬

ಹಾರ ಹೀರ ತುಷಾರ ಮಂದಾರ ಸುರಧೇನು
ತಾರಕಾಮೃತ ಕುಂದ ಹರಿಚಂದನೇಂದು ಸುರ
ವಾರಣೋಚ್ಚೈಶ್ರವ ಮರಾಳ ಮರುತಾಹಾರ ವರ ಪರಮ ಸುರದೀರ್ಘಿಕಾ
ಶಾರದಾಂಬುದ ಸೋಮ ತಾರಾಗವರದಾತ
ಸಾರ ಗೌರಶರೀರ ಮಾರಾರಿ ಶರಣೆಂದು
ನಾರದ ಮುನೀಶ್ವರಂ ನಮಿಸಿ ಭಯಭಕ್ತಿಯಿಂ ಕೈಮುಗಿದು ಕೊಂಡಾಡಿದಂ

(ಮ. ಲೀ. ಸಂ. ೨, ಪ. ೨೩)

ಹೀಗೆ ನಾರದನು ಭಕ್ತಿಪುರಸ್ಸರವಾಗಿ ಪ್ರಾರ್ಥಿಸಲು ಪರಶಿವನು ನಿರಘಜಂಗಮ ಲೀಲೆಯನ್ನು ಮೆರೆದು ಭಕ್ತರನ್ನು ಪರಿಪಾಲಿಸಲುದ್ಯುಕ್ತನಾದನು. ನಂದೀಶನ ಹೃತ್ಪಂಕಜ ವಿಕಸನವಾಗಿ ಸೋಮಾರ್ಕಸಂಕಾಶವನ್ನು ನಿಂದಿಸುವ ತೇಜದಿಂದ ನಿಷ್ಕಲಮಹಾತತ್ತ್ವ ಸುಂದರಾಂಗವನಾಂತು ಮುಂದೆ ನಿಂದಿರಲು ಪರಶಿವನು ಆತನಿಗೆ ಮಹಲಿಂಗನೆಂದು ನಾಮಕರಣ ಮಾಡಿ ಭೂಲೋಕಕ್ಕೆ ಕಳುಹುವನು. ಆತನೇ ಅಖಿಳ ದೇಶಗಳನ್ನು ಸಂಚರಿಸುತ್ತ ಪುಣ್ಯಸ್ಥಳಗಳನ್ನು ಸಂದರ್ಶಿಸುತ್ತ ಕರ್ನಾಟಕಕ್ಕೆ ಬರುವನು.

ಇದು ಕವಿಕಲ್ಪಿತಕಥೆಯೆಂದು ಬೇರೆ ಹೇಳಬೇಕಿಲ್ಲ. ಮಹಲಿಂಗಜಂಗಮನ ಜನ್ಮಸ್ಥಳ, ತಂದೆತಾಯಿಗಳು, ಆತನ ಬಾಲ್ಯ, ಪೂರ್ವಾಶ್ರಯ ಇವುಗಳ ಬಗೆಗೆ ಮಹಲಿಂಗಲೀಲೆಯಿಂದ ಆವ ಸಂಗತಿಗಳೂ ತಿಳಿದುಬರುವುದಿಲ್ಲ. ಇತರ ಆಧಾರ ಗಳಿಂದಲೂ ಈ ವಿಷಯವನ್ನು ತಿಳಿದುಕೊಳ್ಳುವುದು ಈಗ ಸಾಧ್ಯವಿಲ್ಲವೆಂಬುದನ್ನು ಹಿಂದೆ ವಿವರಿಸಲಾಗಿದೆ. ಧಪಳಾಪುರದ ಯೋಗಿ ಗುರುಲಿಂಗವರ್ಯರಲ್ಲಿ ಅವರಿಗೆ ಉಪದೇಶವಾದ ವಿಷಯ ಈ ಕಾವ್ಯದಲ್ಲಿ ಉಕ್ತವಾಗಿದೆ. ಮಹ ಲಿಂಗಮುನಿನಾಥನು ಇಷ್ಟಲಿಂಗದ ರಹಸ್ಯವೇನೆಂದು ಕೇಳಿದಾಗ ಗುರುಲಿಂಗ ಶಿವಯೋಗಿಯು 'ಅನ್ನಮೊಳು ರುಚಿಯುನರಸುವುದುಂಟು ಲೋಕದೊಳ್ ನನ್ನಿಯಿಂ ರುಚಿಯೊಳಗೆ ಪರಿಕಿಸುವುದೇನುಂಟು' ಎಂದು ಉತ್ತರಿಸುವನು. ಈ ಮಾರ್ಮಿಕವಾದ ಉತ್ತರ ಮಹಲಿಂಗಮುನಿನಾಥನ ಯೋಗ್ಯತೆಯನ್ನು ಬಿತ್ತರಿ ಸುತ್ತದೆ.

ಗುರೂಪದೇಶವನ್ನು ಹೊಂದಿ ಮಹಲಿಂಗಜಂಗಮನಾಥನು ಸಂಚರಿಸುತ್ತ ಕರ್ನಾಟಕಕ್ಕೆ ಬರುವನು. ಆಗ ಕರ್ನಾಟಕವು

ಲಿಂಗದಿಂ ಕಂಗೊಳಿಪ ಪರಮ ಭವನಂಗಳಿಂ
ತುಂಗ ಫಲಭಾರದಿಂ ಬಗ್ಗುತಿಹ ಬನಗಳಿಂ
ಸಂಗತಾಮಲ ಪುಷ್ಪಪರಿಮಳದ ವನಗಳಿಂ ನಿರ್ಝರದ ಕೊಲ್ಯಂಗಳಿಂ
ಪಿಂಗದಲೆ ನೆರೆ ಪರಿವ ಪರಮ ಪೆರ್ದೊರೆಗಳಿಂ
ಮಂಗಲಮಹಾ ತಪೋಧನರಿರ್ಪ ಗಿರಿಗಳಿಂ
ಭಂಗದಿಂ ಕಂಗೊಳಿಪ ಪದ್ಮಾಕರಂಗಳಿಂದಾ ದೇಶ ಕಣ್ಗೆಸೆದುದು

(ಮ. ಲೀ. ಸಂ. ೪, ಪ. ೧೪)

ಕವಿಯು ಕರ್ನಾಟಕದೇಶದ ವರ್ಣನೆಯನ್ನು ಬಹು ಸುಂದರವಾಗಿ ಮುಂದುವರಿಸುತ್ತಾನೆ. ಅರಗಿಳಿಗಳಿಂ ದಳಿತ ಚೂತ ದ್ರಾಕ್ಷಾರಸ, ಮರುತಹತಿಯಿಂ ಬೀಳ್ದ ಜಂಬು ದಾಳಿಮಗಳ ಘರ್ಷಣದ ಸಾರ, ಧರೆಗೆ ಬಿದ್ದು ಒಡೆದ ತೆಂಗಿನೆಳೆನೀರ್ಗ ಇವು ಸರಸ್ವತಿ, ಭಾಗೀರಥಿ, ಯಮುನೆಯರಂತೆ ಹರಿಯುತ್ತಿದ್ದವಂತೆ. ಆ ದೇಶದ ಆರಾಮಗಳನ್ನೂ, ಅವನ್ನು ಕಾವ ಸತಿಯರನ್ನೂ ಕವಿ ಸ್ವಲ್ಪದರಲ್ಲಿಯೇ ಮನೋಹರವಾಗಿ ಬಣ್ಣಿಸುತ್ತಾನೆ. ಕೊನೆಗೆ

ಎಲ್ಲಿ ನೋಡಿದಡಲ್ಲಿ ಹರ ಧ್ಯಾನಮಂ ಮಾಳ್ಪ
ರೆಲ್ಲಿ ನೋಡಿದಡಲ್ಲಿ ಶಿವಲಿಂಗಮಂ ಭಜಿಪರು....

(ಮ. ಲೀ. ಸಂ. ೪, ಪ. ೨೧)

ಎಂದು ಕವಿ ಮಹಲಿಂಗಜಂಗಮನಾಥನು ಕರ್ನಾಟಕದಲ್ಲಿ ಕಾಲಿಡುವಾಗಲೇ ಆದೇಶವನ್ನು ಬಣ್ಣಿಸಿದುದು ಆಭಾಸವೆನಿಸುತ್ತದೆ. ಏಕೆಂದರೆ ಶಿವಭಕ್ತಿಯು ಪತನಹೊಂದಿದಾಗ ಅದನ್ನು ಉದ್ಧರಿಸಲು ಈ ಮುನಿನಾಥನ ಅವತಾರವಾಗಿದೆ. ಕರ್ನಾಟಕ ದೇಶದ ಈ ವರ್ಣನೆಯನ್ನು ಓದುವಾಗ ನಮಗೆ ಈ ಕಲ್ಪನೆಯೇ ಉಂಟಾಗುವುದಿಲ್ಲ. ವರ್ಣನೆಯ ಭರದಲ್ಲಿ ಕವಿ ಮೂಲೋದ್ದೇಶವನ್ನು ಮರೆತಂತಿದೆ.

ಮಹಲಿಂಗಮುನಿನಾಥನು ಚೆನ್ನಗಿರಿಯಲ್ಲಿ ನಿಂತು ಮಿಂಚುವ ಮಹಾಬೆಳಗಿನೊಳು ಬೆರೆದು ಲಿಂಗಾಂಗಸಾಮರಸ್ಯವನ್ನು ಹೊಂದಿ ಅನೇಕ ಲೀಲೆಗಳನ್ನೆಸಗುವನು. ಆತನೆಸಗಿದ ಲೀಲೆಗಳನ್ನು ಹೀಗೆ ಸಂಗ್ರಹಿಸಬಹುದು:

೧ ನರವಾಲದ ನಾಗಾಖ್ಯ ಮುಪ್ಪಿನಾಂಬೆಯರು ಕೈಕೊಂಡ ವೀರಮಾಹೇಶ್ವರ ವ್ರತವನ್ನು ಪೂರೈಸಿದುದು.

೨ ರುದ್ರಮ್ಮನೆಂಬ ಶರಣೆಗೆ ನೇತ್ರವನ್ನಿತ್ತುದು.

೩ ಮುನಿನಾಥನ ಕೀರ್ತಿಯನ್ನು ಕೇಳಿ ಮೋದಪುರದ ಮಾಲೋಜಿ ರಾಜನು ನರಗಟ್ಟಿಗೆ ವೈಭವದಿಂದ ಬರುತ್ತಿರಲು ಮಹಲಿಂಗನೆಂಬ ಬಾಲಕನು ಆ ಅರಸನ ಆನೆಯ ಸೊಂಡೆಗೆ ಸಿಲುಕಿ ಸಾಯಲು ಆ ಮಗುವಿಗೆ ಪ್ರಾಣವನ್ನಿತ್ತುದು.

೪ ಮಾಲೋಜಿಯು ದಾನವಾಗಿತ್ತ ನರಗಟ್ಟಿಯನ್ನು ನಿಷ್ಕಾಮಭಾವನೆ ಯಿಂದ ಸ್ವೀಕರಿಸಿ ಅದನ್ನು ವರಗಟ್ಟಿಯನ್ನಾಗಿ ಮಾಡಿದುದು.

೫ ಮಹಲಿಂಗಪುರ (ಚೆನ್ನಗಿರಿ) ದ ಪಶ್ಚಿಮಭಾಗದಲ್ಲಿ ಬಸವತೀರ್ಥವನ್ನು ನಿರ್ಮಿಸಿದುದು.

೬ ಸುಟರಟ್ಟಿಯ ಶಿವಭಕ್ತ ಗಂಗಾಖ್ಯನು ನೆರವೇರಿಸಿದ ಗಣಾರಾಧನೆಯಲ್ಲಿ ಶಾಕ-ಪಾಕಾದಿಗಳನ್ನು ವೃದ್ಧಿಗೊಳಿಸಿದುದು.

೭ ಮುಂಡಾಸದ ಸಂಗನಬಸವನಿಗೆ ನೇತ್ರವನ್ನಿತ್ತುದು.

೮ ಮಾಲೋಜಿಯ ಸಹಜಾತನಾದ ಸಕರೋಜಿರಾಜನಿಗೆ ಶ್ರೀಹರಿಯ ರೂಪವನ್ನು ತೋರಿದುದು.

೯ ಮಾಲೋಜಿಯ ಮಗನಾದ ಗೋವಿಂದರಾಜನ ಮಲರೋಗ ನಿವಾರಣೆ ಮಾಡಿದುದು.

೧೦ ಮಾಲೋಜಿಯ ಮತ್ತೋರ್ವ ಮಗನಾದ ಕೇದಾರಭಾವನಿಗೆ ರಾಣಿ ಯರು ದಾಯಾದ್ಯತನದಿಂದ ವಿಷಪ್ರಾಶನ ಮಾಡಿಸಲು ಮುನಿಪತಿಯು ಆತನನ್ನು ಆ ವಿಷದ ಬಾಧೆಯಿಂದ ಉಳಿಸಿ ಉದ್ಧರಿಸಿದುದು.

೧೧ ಗೋವಿಂದರಾಜನ ಮಗನಾದ ನಾರಾಯಣನು ಬಾಲಗ್ರಹಪೀಡಿತ ನಾಗಿರಲು ಆತನನ್ನು ಉದ್ಧರಿಸಿದುದು.

೧೨ ಮಾಲೋಜಿರಾಜನ ಸ್ವರ್ಗಗಾಮಿನಿಯೆಂಬ ಕುದುರೆ ಸಾಯಲು ಅದನ್ನು ಉಳಿಸಿದುದು.

೧೩ ಪತ್ರಿಪರಗಣೆಗಾಗಿ ನಡೆದ ಯುದ್ಧದಲ್ಲಿ ಮುನಿಪತಿಯು ಮಾಲೋಜಿ ರಾಜನಿಗೆ ದರ್ಶನವಿತ್ತುದು.

೧೪ ಆನೆಕಾಲಭೂಪತಿಯ ರಾಜ್ಯದಿಂದ ಬ್ರಹ್ಮಹತ್ಯದ್ರೋಹವನ್ನು ನೆಲೆ ಗೆಡಿಸಿದುದು.

೧೫ ಆನೆಕಾಲಭೂಪತಿಯ ರಾಜ್ಯದಲ್ಲಿ ಬಸವಪುರವನ್ನು ಸ್ಥಾಪಿಸಿ ಆ ಬಸವ ಪುರದ ಶರಣಬಸವೇಶನ ಧರ್ಮಪತ್ನಿಯು ಬಾವಿಯಲ್ಲಿ ಬಿದ್ದಾಗ ತಾನೇ ಬಂದು ಆಕೆಯ ಪ್ರಾಣವನ್ನು ಉಳಿಸಿದುದು.

೧೬ ಚೆನ್ನಗಿರಿ ಲಿಂಗದ ಮೇಲೆ ಧರಿಸಿದ ವಸ್ತ್ರಗಳನ್ನು ಕದ್ದೊಯ್ಯುತ್ತಿರುವ ಕಳ್ಳನಿಗೆ ಕೃಪೆದೋರಿದುದು.

೧೭ ಮಕ್ಕಳಿಲ್ಲದ ಅರುವತ್ತುವರ್ಷದ ವೃದ್ಧೆ ಮಹಲಿಂಗಮುನಿನಾಥನನ್ನು ಕುರಿತು ವ್ರತವನಾಚರಿಸಿ ಮಗನನ್ನು ಪಡೆದುದು.

೧೮ ಸಿದ್ಧಾಯಿಯೆಂಬ ಶರಣೆಗೆ ಜಡೆಯನ್ನಿತ್ತುದು.

೧೯ ಚೆನ್ನಗಿರಿಲಿಂಗದಲ್ಲಿ ಸಮಾಧಿನಿಂದುದು.

ಈ ಲೀಲೆಗಳ ಕಾವ್ಯಮಯ ವಿವರಣೆಯೇ ಮಹಲಿಂಗಲೀಲೆ. ಒಂದೊಂದು ಲೀಲೆಯನ್ನೂ ಕವಿ ಸುಂದರವಾದ ಕಥೆಯನ್ನು ಪ್ರಾರಂಭಿಸಿ ಮುಕ್ತಾಯಗೊಳಿಸಿ ದಂತೆ ವಿವರಿಸುವನು. ಕಾವ್ಯರೂಪದಿಂದ ಈ ಲೀಲೆಗಳನ್ನು ಬಣ್ಣಿಸುತ್ತಿರುವುದರಿಂದ ಕವಿಯು ಕಥೆಯಲ್ಲಿ ಸಹಜವಾಗಿಯೇ ಬರುವ ಕೆಳಗಣ ವರ್ಣನೆಗಳನ್ನು ವಿವರಿಸಿರು ವನು.

೧ ಕರ್ನಾಟಕದೇಶದ ವರ್ಣನೆ.

೨ ರಾತ್ರಿಯ ವರ್ಣನೆ.

೩ ಸೂರ್ಯೋದಯದ ವರ್ಣನೆ.

೪ ಮೆರೆವಣಿಗೆಯ ವರ್ಣನೆ.

೫ ಬಸವತೀರ್ಥದಿಂದ ನೀರು ತರುವ ನೀರೆಯರ ವರ್ಣನೆ.

೬ ಯುದ್ಧದ ವರ್ಣನೆ.

ಈ ವರ್ಣನೆಗಳನ್ನು ಕವಿಯು ಔಚಿತ್ಯವರಿತು ಸುಂದರವಾಗಿ ವಿವರಿಸಿರುವನು. ಅಲ್ಲಿ ಆತನ ಕಾವ್ಯಶಕ್ತಿ ಸ್ಪಷ್ಟವಾಗಿ ಕಾಣುತ್ತದೆ. ರಾತ್ರಿಯನ್ನು

ಕುಮುದಕ್ಕೆ ಮುದವೇರಿ ಕಮಲಂಗಳಿದೆಯಾರಿ
ತಿಮಿರಾಳಿ ತಲೆದೋರೆ ಪಕ್ಷಿಗಳು ನೆರೆಸಾರೆ

(ಮ. ಲೀ. ಸಂ. ೫, ಪ ೧೬)

ಎಂದು ಬಣ್ಣಿಸಿದರೆ ಸೂರ್ಯೋದಯವನ್ನು

....ಕತ್ತಲೆಯು ಜಾರಿತ್ತು ಮುಂಬೆಳಗು
ತೋರಿತ್ತು ತಂಗಾಳಿ ಬೀರಿತ್ತು....

( ಮ. ಲೀ. ಸಂ. ೫, ಪ. ೨೨ )

ಎಂದು ಸಹಜ ಸುಂದರ ರೀತಿಯಲ್ಲಿಯೇ ವರ್ಣಿಸುವನು.

ಕಂಕಣ ಸುಕೇಶಬಂಧನದ ಕರಿಗಮನೆಯರು ಸೋಪಾನಗಳನ್ನೇರಿ ಬಿಂಕದಿಂದ ಬರುತ್ತಿರುವುದನ್ನು ನೋಡಿರಿ.

ಬಡ ನಡುವು ಬಳ್ಳುಕಿರೆ ಬಟ್ಟಮೊಲೆಯುದುರುತಿರೆ
ನಿಡುಜಡೆಯು ಬೆನ್ನೊಳಗೆಯಾಡುತಿರೆ ಕಡೆಗಣ್ಣ
ಕುಡಿಮಿಂಚ ಸೊಡರು ಬಿತ್ತರಲಾಗ ಕಾಲುಂಗುರಗಳೊದರುತಿರೆ ನಿರಿಗಳಂ
ಅಡಿಗಡಿಗೆ ಬೆಡಗಿನಿಂದೊದೆವುತ್ತ
ಕೊಡಮುಡಿಯ ಭಾರದಿಂ ಕೊರಳು ಕೊಂಕುತ್ತಿರಲು

(ಮ. ಲೀ. ಸಂ. ೧೨, ಪ. ೧೨)

ಆ ಪೌರ ಜಡಜಾಕ್ಷಿಯರುಎಡೆಯಾಡುತ್ತಿದ್ದರಂತೆ. ಇಲ್ಲಿ ಕವಿಯ ನಿರೀಕ್ಷಣಾ ಶಕ್ತಿ ರಸಿಕರನ್ನು ನಿಜವಾಗಿಯೂ ಆನಂದಪಡಿಸುತ್ತದೆ. ನೀರೆಯರು 'ನಿರಿಗಳನ್ನು ಅಡಿಗಡಿಗೆ ಬೆಡಗಿನಿಂದ ಒದೆವುತ್ತಿದ್ದರಂತೆ !' ಕೊಡಮುಡಿಯ ಭಾರದಿಂ ಕೊರಳು ಕೊಂಕುತ್ತಿದ್ದಿತಂತೆ ! ಇದಲ್ಲವೇ ಸೂಕ್ಷ್ಮನಿರೀಕ್ಷಣೆ ? ಇಂತಹ ವರ್ಣನೆಗಳಿಂದಲೂ ಕವಿಸಹಜವಾದ ನಿರೂಪಣೆಗಳಿಂದಲೂ ಮೇಲೆ ನಿರ್ದೇಶಿಸಿದ ಲೀಲೆಗಳು ಮನೋಜ್ಞವಾಗಿವೆ. ಭಕ್ತರ ಭಕ್ತಿಯನ್ನೂ ರಸಿಕರ ರಸಿಕತೆಯನ್ನೂ ಜಾಗ್ರತಗೊಳಿಸಿ ಮಹಲಿಂಗಮುನಿನಾಥನ ಪ್ರಶಾಂತವಾದ ದಿವ್ಯ ವ್ಯಕ್ತಿತ್ವವನ್ನು ಸಂದರ್ಶನ ಮಾಡಿಸಿ ಆತನ

ಘನವಾದ ಉಪದೇಶವನ್ನು ಕಿವಿಯಾರೆ ಕೇಳಿಸಿ ಮಹಲಿಂಗಲೀಲೆ ಕೃತಕೃತ್ಯವಾಗುತ್ತದೆ.

ಈ ಕಾವ್ಯದಲ್ಲಿ ಇನ್ನೂ ಒಂದು ಕಾರ್ಯವಾಗಿದೆ. ಇಹಲೋಕದಲ್ಲಿ ಲೀಲೆಗಳನ್ನೆಸಗುತ್ತಿರುವ ಮಹಲಿಂಗಜಂಗಮನ ಸಾಧನಸಂಪತ್ತಿಯೆಂದರೆ ಅಷ್ಟಾವರಣ. ಪರಮಯೋಗಿಯಾದ ಈತನು ರೋಗನಿವಾರಣೆ ಮಾಡುವಲ್ಲಿ ಹಾಗೂ ಅದ್ಭುತ ಕಾರ್ಯವನ್ನೆಸಗುವಲ್ಲಿ ಅಷ್ಟಾವರಣವನ್ನಾಶ್ರಯಿಸಿ ಧ್ಯಾನಾಸಕ್ತನಾಗುತ್ತಿದ್ದನು. ಭಕ್ತರು ಅಚ್ಚರಿದಳೆದು ಅದರಂತಸ್ಥವನ್ನು ಕೇಳಿದಾಗ ಅಷ್ಟಾವರಣದ ಮಹತಿಯನ್ನು ವಿವರಿಸುತ್ತಿದ್ದನು. ಹೀಗೆ ಮಾಲೋಜಿರಾಜ, ಗೋವಿಂದರಾಜ ಮೊದಲಾದವರ ಬಿನ್ನಹವನ್ನು ಮನ್ನಿಸಿ ಮುನಿನಾಥನು ಅಷ್ಟಾವರಣದ ಮಹತಿಯನ್ನು ವಿವರಿಸಿರುವನು. ಕಾವ್ಯದ ಬಹುಭಾಗವನ್ನು ಈ ವಿವರಣೆಯೇ ವ್ಯಾಪಿಸಿದೆ. ಆದರೆ ಈ ವಿವರಣೆ ಹಲವು ಕಾವ್ಯಗಳಲ್ಲಿ ಬರುವಂತೆ ತರ್ಕಮಯವಾಗಿಲ್ಲ; ಅಲ್ಲಿ ಕವಿಯ ಪಾಂಡಿತ್ಯಪ್ರದರ್ಶನವಿಲ್ಲ. ಹಿಂದೆ ಅಷ್ಟಾವರಣವನ್ನಾಶ್ರಯಿಸಿ ಪುನೀತರಾದ ಪುರಾತನರ ಹಾಗೂ ನೂತನ ಪುರಾತನರ ಕಥೆಗಳನ್ನು ಕಾವ್ಯಮಯವಾಗಿ ವಿವರಿಸಿ ಮೂಲ ಕಥೆಗೆ ಮೆರಗು ತಂದಿರುವನು.

ಆನೆಯ ಸೊಂಡಿಗೆ ಸಿಲುಕಿ ಮಡಿದ ಮಹಲಿಂಗನೆಂಬ ಬಾಲಕನ ತಾಯಿಯ ಅಳುವನ್ನೂ ಗೋವಿಂದರಾಜನ ಮಗನು ಮಡಿದಾಗ ಆತನ ಹೆಂಡತಿಯ ದುಃಖವನ್ನೂ ಸ್ವರ್ಗಗಾಮಿನಿಯೆಂಬ ಕುದುರೆ ಸತ್ತಾಗ ಮಾಲೋಜಿಮಹಾರಾಜನ ಶೋಕವನ್ನೂ ಬಣ್ಣಿಸುವಲ್ಲಿ ಕವಿ ಕರುಣರಸವನ್ನು ಹರಿಸಿರುವನು. ರೋಗಪೀಡಿತರೆಲ್ಲ ಬಂದು ಮುನಿಪತಿಯ ಪದತಲದಲ್ಲಿ ಮಾಡುವ ಪ್ರಾರ್ಥನೆಗಳೆಲ್ಲವೂ ಅತ್ಯಂತ ಕರುಣಮಯವಾಗಿವೆ. ರೋಗಪೀಡಿತನಾದ ಕವಿಯ ಹೃದಯವೇ ಅಲ್ಲಿ ಬಂದು ದೈನ್ಯದಿಂದ ಪ್ರಾರ್ಥಿಸುವಂತಿದೆ. ಈ ಪ್ರಾರ್ಥನೆಗಳೂ ಅದಕ್ಕೆ ಮಹಲಿಂಗದೇವನು

ಜಗದೊಳಗೆ ಜಡತನುವನಾಂತು ಪುಟ್ಟಿದ ಮೇಲೆ
ಅಗಣಿತಮಹಾದುಃಖಸುಖವೆಲ್ಲ ತನ್ನೊಳಗೆ
ಒಗುಮಿಗಿಯಲುಂ ತೋರುತಲ್ಲಡಗಿ ಪೋಪುದಕೆ ಬರಿದೆ ಬಳಲುವದೇತಕೆ

(ಮ. ಲೀ. ಸಂ. ೭, ಪ. ೨೭)

ಎಂದು ಮುಂತಾಗಿ ಮಾಡುವ ಉಪದೇಶಗಳೂ ಸಹೃದಯರಿಗೆ ದೇಹದ ನಿತ್ಯಾನಿತ್ಯತೆಯ ಅರಿವನ್ನುಂಟುಮಾಡುತ್ತವೆ; ಅವರ ಭಾವವನ್ನು ಪರಿಶುದ್ಧಗೊಳಿಸುತ್ತವೆ.

ಈಕಾವ್ಯ ಕೇವಲ ಉಪದೇಶದ ಮೊತ್ತವಾಗಿಲ್ಲವೆಂಬುದನ್ನೂ ಲಕ್ಷದಲ್ಲಿಡಬೇಕು. ಮೇಗಣ ಸೂತ್ರದ ಹೊರತು ಉಪದೇಶದ ಬೇರೆ ಪ್ರಸ್ತಾಪವೇ ಇಲ್ಲಿ ಬಂದಿರುವುದಿಲ್ಲ. ನಾಲ್ಕಾರುಸಲ ಈ ಸೂತ್ರವೇ ಬೇರೆ ಬೇರೆ ರೂಪದಲ್ಲಿ ಮೈದೋರಿದೆ. ಒಂದೆರಡು ಪದ್ಯಗಳಲ್ಲಿ ಕೊನೆಗೊಳ್ಳುವ ಈ ಅಮರವಾಣಿಗಳು ಸಹೃದಯರ ಹೃದಯವನ್ನು ಮುಟ್ಟುತ್ತವೆ.

## ಮಹಲಿಂಗಮುನಿನಾಥನ ವ್ಯಕ್ತಿತ್ವ

ಮಹಲಿಂಗಮುನಿನಾಥನು ಪವಾಡಪುರುಷನೆಂಬ ಕಲ್ಪನೆ ಈ ಕಾವ್ಯದಲ್ಲೆಲ್ಲ ತಲೆದೋರಿದೆ. ನಂದಿನಾಥನ ಅಂತರಂಗದಲ್ಲಿದ್ದ ತೇಜದೊಬ್ಬುಳಿಯು ಸಾಕಾರವಾಗಿ ನಿಂತಿರಲು ಆತನಿಗೆ ಮಹಲಿಂಗನೆಂದು ನಾಮಕರಣ ಮಾಡಿ 'ದಾನವ ನರಾನಿಮಿಷರೆನ್ನಾಜ್ಞೆಯೊಳಗಿಹರು, ನಾನು ನಿನ್ನಾಜ್ಞೆಯೊಳಗಿಹೆ'ನೆಂದು ಶಿವನು ಅಭಯವಿತ್ತು ಆತನನ್ನು ಕೈಲಾಸದಿಂದ ಭೂಲೋಕಕ್ಕೆ ಕಳುಹಿದನೆಂದು ಕವಿ ವರ್ಣಿಸುತ್ತಾನೆ. ಮಹಲಿಂಗಜಂಗಮನು ಜನ್ಮಾಧಾರಭ್ಯ ಅಸಾಧಾರಣ ಪುರುಷನಾಗಿದ್ದನೆಂಬುದೇ ಇದರರ್ಥ. ಮಹಲಿಂಗಮುನಿನಾಥನು ತನ್ನ ದೀಕ್ಷಾಗುರುವಾದ ಯೋಗಿಗುರುಲಿಂಗಾರ್ಯನನ್ನು 'ಲೋಕದಲಿ ಖುಲ್ಲರಿಂ ಕೊರತೆಗಳು ಬಾರದಂತೆ ಪಾಲಿಪುದು' ಎಂದು ಪ್ರಾರ್ಥಿಸಲು ಆತನು :

ಕತ್ತಲೆಗೆ ದಿನಪ ಮುಂಗಾಣದಿರೆ ಸತ್ಪ್ರಭೆಯ
ಬಿತ್ತರದಿ ತೋರ್ಪರಾರ್ಮರುತನುಬ್ಬಸದಳಿಯೆ
ಒತ್ತರಿಸಿ ವ್ಯಜನವಾತದಿ ಬೀಸಿ ತಾಪಮಂ ಪರಿಹರಿಪರಾರಿಳೆಯೊಳು
ಕೃತ್ರಿಮದ ಗರಳದಿಂ ಖಗನಾಥನಸುವಳಿಯೆ
ಮತ್ತಿರದೆ ಮಂತ್ರಿಸುವರಾರಿನ್ನು ಮಹಲಿಂಗ
ಮೃತ್ಯುಹರ ಲೋಕಪಾವನಶೀಲ ನಿಮ್ಮ ನುಡಿ ಕೌತುಕವು ಭಾವಿಸುವಡೆ

(ಮ. ಲೀ. ಸಂ. ೪, ಪ. ೧೦)

ಎಂದು ಕೊಟ್ಟ ಉತ್ತರವು ಮುನಿನಾಥನ ಯೋಗ್ಯತೆಯನ್ನು ಎತ್ತಿ ತೋರಿಸುತ್ತದೆ. ಆತನು ಪರಮ ವೈರಾಗ್ಯಮೂರ್ತಿ; ಮಹಾ ತಪಸ್ವಿ.

ಪಂಚೇಂದ್ರಿವಿಷಯಗಳನತಿಗಳೆದು ಶೀಘ್ರದಿಂ
ಮುಂಚುವ ದಶೇಂದ್ರಿಯದ ಸಂಚಲವ ನೆರೆ ಮುರಿದು
ಸಂಚಿತುಪಕಾಂಕ್ಷೆಗಳನೀಡಾಡಿ ಶ್ರೀಯೋಗಿ ಗುರುನಾಥನಂ ಧ್ಯಾನಿಸಿ

ಮಿಂಚುತಿಹ ಮಲತ್ರಯವ ಮುನ್ನವೇ ಕೀಳ್ಪಡಿಸಿ
ಸಂಚಿತಾಗಾಮಿ ಪ್ರಾರಬ್ಧಗಳ ಕಡೆನೂಂಕಿ
ಮಿಂಚುವ ಮಹಾಬೆಳಗಿನೊಳು ಬೆರೆದು ಮಹಲಿಂಗಮುನಿನಾಥನಿರುತಿರ್ದನು

(ಮ. ಲೀ. ಸಂ. ೪, ಪ. ೩೫)

ಮಹಲಿಂಗಮುನಿವರ್ಯನು ಪರಮ ಯೋಗಿಯೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಆತನ ಶಿವಯೋಗಸಾಧನೆಯನ್ನು ನೋಡಿರಿ :

ಮೂಲತತ್ತ್ವಾಧಾರವನು ಬಲಿದು ಒಳಗಿರ್ಪ
ಕೀಲಕುಂಡಲಯೆಂಬ ಸರ್ಪನ ಮಹಾಮುಖವ
ಮೇಲಕೆಬ್ಬಿಸಿ ಪರಮ ಷಟ್‌ಚಕ್ರಗಳ ಸೇರಿ ಆನಂದಚಿನಿವಾಲುಮಂ
ಲೋಲಜಿಹ್ವಾಗ್ರದಿಂದೀಂಟಿ ಪರವಶನಾಗಿ
ಬಾಲೇಂದು ರವಿ ಕೋಟಿ ಮನ್ಮನೀಜಾಲೆಯಂ
ಲೀಲೆಯಿಂದೊಡಗೂಡಬೇಕೆಂಬವ್ರೋಲಿರ್ದನಾ ಮಹಿಮನು

(ಮ. ಲೀ. ಸಂ. ೪, ಪ. ೩೬)

ಇಂತಹ ಯೋಗಸಾಧನೆಯಿಂದಲೇ ಆತನು ಲಿಂಗಾಂಗಸಾಮರಸ್ಯ ಹೊಂದಿರುವನು.

ತನುಧರ್ಮಗಳ ಮೀರಿ ತಾಮಸವ ನೆರೆ ತೂರಿ
ಮನದ ಮಾಯವ ಮೀರಿ ಮಲತ್ರಯಂಗಳ ಕೇರಿ
ಜನನಮರಣವ ಮೆಟ್ಟಿ ಕಾಲಕರ್ಮವ ಕುಟ್ಟಿ ಕಾಮಾದಿವರ್ಗಂಗಳ
ಘನತೆಗಳ ಜರಿವುತ್ತ ವರ್ಗಗಳ ಮುರಿವುತ್ತ
ಮಿನುಪ ಮಹಲಿಂಗಾಂಗಸಮರಸದ ಸದ್ಭಾವ
ಘನಕೆ ಘನವಾದ ಚಿನ್ಮಯ....

(ಮ. ಲೀ. ಸಂ. ೫, ಪ. ೨೬)

ಮೊದಲೇ ಬೆಳಗಿನೊಬ್ಬುಳಿಯಾದ ಮಹಲಿಂಗಮುನಿನಾಥನು ಶಿವಯೋಗಸಾಧನೆಯಿಂದ ಮಹಾಬೆಳಗಿನಲ್ಲಿ ಬೆರೆದು ಬೇರಿಲ್ಲದಿರುವ ಸ್ಥಿತಿಯನ್ನು ಪಡೆದಿರುವನು. ಬೇಕು-ಬೇಡಗಳ ಸೀಮೆಯನ್ನು ಮೀರಿ ದೂರ ದೂರ ಬಹುದೂರ ನಿಂದಿರುವನು. ಮಾಲೋಜಿಮಹರಾಜನು ನರಗಟ್ಟಿಯ ಭೂಭಾಗವನ್ನು ದಾನವಾಗಿ ಸ್ವೀಕರಿಸಿ ಪಾಲಿಸಬೇಕೆಂದು ಪ್ರಾರ್ಥಿಸಲು ಮಹಲಿಂಗಜಂಗಮನಿತ್ತ ಉತ್ತರವು ಆತನ ವ್ಯಕ್ತಿತ್ವವನು ಕನ್ನಡಿಸುತ್ತದೆ.

ಜನನಮರಣಕ್ಕಸಮು ಜನ್ಮದಾಗರವೆನಿಪ
ಕನಕಕಾಂತಾಕರ್ಮ್ಭೂಮಿಗಳ ಘನತೆಯನು
ಕನಸಿನೊಳಗೊರ್ಮೆ ತಾ ನೆನೆಸದಿಹ ಜಂಗಮಕೆ ಸನುಮತಿಯು ತಾನಿಲ್ಲವು
(ಮ. ಲೀ. ಸಂ. ೮, ಪ. ೭)

ನಾಮರೂಪಕ್ರೀಯ ಸೀಮೆ ಹಂಗಿಗನಲ್ಲ
ತಾಮಸದ ಗುಣಿಯಲ್ಲಿ ಸ್ವಾಮಿ ತಾನಲ್ಲಸಮ
ಹೇಮ ಭೂಮ್ಯಾದಿಗಳು ಬೇಕುಬೇಡೆಂಬಾಸೆ ಮುನ್ನಿಲ್ಲ ಜಂಗಮದೊಳು
(ಮ. ಲೀ. ಸಂ. ೮, ಪ. ೮)

ಇಂತಹ ಲಿಂಗಾಂಗಸಾಮರಸ್ಯಸ್ಥಿತಿಯಲ್ಲಿಯೇ ಪರಮವೈರಾಗ್ಯಮೂರ್ತಿಯಾಗಿ ಸಂಚರಿಸಿ ಲೀಲೆಗಳನ್ನೆಸಗಿ ಭಕ್ತರನ್ನು ಉದ್ಧರಿಸಿರುವನು. ಆತನ ಉಪದೇಶಗಳು ಪರಮಾಮೃತದಿಂದ ತುಂಬಿ ತುಳುಕುತ್ತವೆ. ಸಹೃದಯರ ಹೃದಯವನ್ನು ಮುಟ್ಟುತ್ತವೆ. ಮಕ್ಕಳನ್ನು ಕಳೆದುಕೊಂಡವರಿಗೆ ಮಾಡುವ ಉಪದೇಶ ಎಷ್ಟು ತತ್ತ್ವಮಯವಾಗಿದೆ; ಜೊತೆಗೆ ಸಹಜವೂ ಆಗಿದೆಯೆಂಬುದನ್ನು ನೋಡಬೇಕು.

ಎಷ್ಟು ಜನ್ಮಾಂತರದಿ ಸುತನಾದನೋ ನಿನ್ನ
ಎಷ್ಟು ಜನ್ಮಾಂತರದಿ ಸಹಜಾತನಾದನೋ
ಎಷ್ಟು ಜನ್ಮಾಂತರದಿ ಪಿತನಾಗಿ ನಿನಗೆ ಸಂಭವಿಸಿದನೊ ಭೂತಳದೊಳು
ಎಷ್ಟು ಜನ್ಮಾಂತರದಿ ಬಳಲಿಸಿದನೋ ನಿನ್ನ
ಎಷ್ಟು ಜನ್ಮಾಂತರದಿ ಅನ್ಯರಿಗೆ ಜನಿಸಿದನೊ
ಸೃಷ್ಟೀಶಲೀಲೆ ಬಲ್ಲವರಾರು ಜಗದೊಳಗೆ ಗಾಸಿಯಾಗದಿರೆಂದನು
( ಮ. ಲೀ. ಸಂ. ೭, ಪ. ೨೮)

ಮಲಹರನ ಮಾಯವಳಿದವರಾರು ಜಗದೊಳಗೆ
ಅಳಿದನೆಂದಳುವುದಿದೆ ಮಾಯೆಯಿಂದ ಬಿಡು ಮನದಿ
ತಿಳಿದು ನೋಡಿದರೊಳಗೆ ಅಳಿವರಾರ್ ಉಳಿವರಾರ್ ಬರಿದೆ ಶೋಕಿಪುದಲ್ಲಲಾ
(ಮ. ಲೀ. ಸಂ. ೭, ಪ. ೨೬)

ಇವು ಅಮೃತೋಕ್ತಿಗಳು. ಮರಣದಿಂದ ಅಳುವವರಿಗೆ ಈ ನುಡಿಗಳು ಸಮಾಧಾನವೀಯಬಲ್ಲುವೆಂಬಲ್ಲಿ ಸಂದೇಹವಿಲ್ಲ.

ಮಹಲಿಂಗಜಂಗಮನಾಥನ ವ್ಯಕ್ತಿತ್ವದಲ್ಲಿ ಅಸಾಧಾರಣತೆಯಿದೆ. ಅವನ ನುಡಿಯಲ್ಲಿ ಬ್ರಹ್ಮತೇಜವಿದೆ; ನಡೆಯಲ್ಲಿ ವಿಶ್ವನೀತಿಯಿದೆ. ಆತನಿಗೆ ತಾನೆಂಬ ಅಹಂಕಾರದ ಸೋಂಕಿಲ್ಲ; ನೀನುನಾನೆಂಬ ಭೇದಭಾವನೆಯಿಲ್ಲ. ಅವನ ಮನದ ಘನತೆ ಹೃದಯದ ವೈಶಾಲ್ಯ ಅಪ್ರತಿಮವಾಗಿವೆ. ಐಕ್ಯಸ್ಥಲದಲ್ಲಿ ನಿಂತ ಈ ಮಹಾ ಮಹಿಮನನ್ನು ಬಣ್ಣಿಸಲು ಶಬ್ದಗಳೇ ಸಾಲವು. ಮಾಡಿದೆನೆಂಬುದು ಮನದಲ್ಲಿ ಹೊಳೆಯದ ಮಹಾಯೋಗಿಯಾತನು ! ಮಹಾಲಿಂಗತಂದೆ ಆತನು ಮನದಲ್ಲಿ ನೆನೆಯದ ಮುನ್ನ ಆತನಿಗೆ ಬೇಡಿದುದನ್ನು ಈವನು. ಮಹಲಿಂಗಮುನಿನಾಥನು ತೋರಿಸಿದ ಪವಾಡಗಳೆಲ್ಲ ಹೀಗೆಯೇ ಲಿಂಗದ ಲೀಲೆಯಾಗಿ ನೆರವೇರಿವೆ. ಜನತೆಯ ಬಾಯಲ್ಲಿ, ಕವಿಯ ಕಲ್ಪನೆಯಲ್ಲಿ ಮಹಾಪುರುಷರ ಅಸಾಮಾನ್ಯಕಾರ್ಯಗಳು ಹೆಚ್ಚು ಬಣ್ಣತಳೆದು ಪವಾಡಗಳಾಗಿ ಪರಿಣಮಿಸುತ್ತವೆ. ಮಹಲಿಂಗಜಂಗಮನಾಥನ ಲೀಲೆಗಳೂ ಇದಕ್ಕೆ ಅಪವಾದವಾಗಿಲ್ಲ. ಆ ಲೀಲೆಗಳನ್ನು ಇಂದು ನಾವು ನಂಬದಿರಬಹುದು. ಆದರೆ, ಅಂದಿನ ಕಾಲದ ಭಕ್ತವೃಂದ ಅವನ್ನು ನಂಬಿದ್ದಿತೆಂದೂ ಇಂದಿಗೂ ನಂಬತಕ್ಕವರುಂಟೆಂದೂ ನಂಬಿದರೆ ಸಾಕು. ಆದರೆ ಆ ಲೀಲೆಗಳನ್ನು ಎಸಗಿದ ಮುನಿನಾಥನು ಅಸಾಧಾರಣ ವ್ಯಕ್ತಿತ್ವವನ್ನು ಪಡೆದಿದ್ದನೆಂದು ನಂಬಲು ಯಾವ ಅಭ್ಯಂತರವೂ ಇಲ್ಲ.

## ಕಾವ್ಯಶೈಲಿ

ಕತ್ತಲೆಗೆ ದಿನಪ ಮುಂಗಾಣದಿರೆ ಸತ್ಪ್ರಭೆಯ
ಬಿತ್ತರದಿ ತೋರ್ಪರಾರ್ ಮರುತನುಬ್ಬಸದಳೆಯೆ
ಒತ್ತರದಿ ವ್ಯಜನವಾತದಿ ಬೀಸಿ ತಾಪಮಂ ಪರಿಹರಿಪರಾರಿಳೆಯೊಳು
ಕೃತ್ರಿಮದ ಗರಳದಿಂ ಖಗನಾಥನಸುವಳಿಯೆ
ಮತ್ತಿರದೆ ಮಂತ್ರಿಸುವರಾರ್....

(ಮ. ಲೀ. ಸಂ. ೪, ಪ. ೧೦)

ಇಂಗದಿರ ಬಿಸುಗೈಯ ತಳೆದೊಡಂ ಪಗಲೆರೆಯ
ತಂಗದಿರನಾದೊಡಂ ಧಗಧಗಿಸಿ ಪಜ್ಜಳಿಪ
ಇಂಗಳವು ಕಡುತಂಪನಾಂತೊಡಂ ಸುಧೆಯು ಬಿಸಮಾದೊಡಂ
ಮುನ್ನೀರುತಾ

ಇಂಗಿದೊಡೆ ಬೆಟ್ಟ ಮಿಂದುವಾದೊಡಂ ಮುಗಿಲಿಳಿಗೆ
ತೆಂಗಳಿಸಿ ಬೀಳ್ದೊಡಂ ನುಡಿದ ನುಡಿ ಹಿಡಿದ ವ್ರತ
ಹಿಂಗದಿಹುದು....

(ಮ. ಲೀ. ಸಂ. ೫, ಪ. ೧೧)

ಹರಭಕ್ತದ್ರೋಹಕ್ಕೆ ಹರಣಕೊಡುವುದೆ ಧರ್ಮ

(ಮ. ಲೀ. ಸಂ. ೭, ಪ. ೨೫)

ಜ್ವರತಪ್ತ ಸುಧೆಯ ಸವಿ ಬಲ್ಲನೇ ಮಂಡೂಕ
ನರಿವುದೇ ಕ್ಷೀರಾಬ್ಧಿಘನತೆಯಂ....

(ಮ. ಲೀ. ಸಂ. ೮, ಪ. ೩)

ಇಂತಹ ನುಡಿಗಳು ಸತ್ಕವಿಯ ಶುಭಹಸ್ತದಿಂದ ಮಾತ್ರ ಹೊರಹೊಮ್ಮಬಲ್ಲುವೆಂದು ಎಂತಹ ವಿಮರ್ಶಕನಾದರೂ ಒಪ್ಪಬಹುದಾಗಿದೆ. ಮಹಲಿಂಗಲೀಲೆ ಇಂತಹ ನುಡಿಗಡಣದಿಂದ ತುಂಬಿತುಳುಕುತ್ತಿದೆ. ಅಂತೆಯೇ ಇದನ್ನೊಂದು ಸತ್ಕಾವ್ಯವೆಂದು ಕರೆಯುವುದು. ಇದನ್ನೊರೆದ ಬಸವಕವಿಯು ಸತ್ಕವಿಯೆಂಬುದಕ್ಕೆ ಸಂದೇಹವಿಲ್ಲ. ಸತ್ಕವಿಯ ಸಮುಚಿತವಾದ ಶೈಲಿಯನ್ನು ಇಲ್ಲಿ ಕಾಣಬಹುದು. ಪದಗಳು ಲಾಸ್ಯ ವಾಡುತ್ತ ಬರುತ್ತವೆ.

ವ್ಯೋಮಗಂಗಾ ಜಟಾಧಾರನಂ ಶೂರನಂ
ಸಾಮಜಾಸುರಗರ್ವನಾಶನಂ ಈಶನಂ

(ಸಂ. ೧, ಪ. ೨)

ವಿನುತಗುಣಮಾತೆಯಂ ಲೋಕವಿಖ್ಯಾತೆಯಂ

(ಸಂ. ೧, ಪ. ೩)

ತಾರಕಾಸುರಗರ್ವಹಾರನಂ ಶೂರನಂ

(ಸಂ. ೧, ಪ. ೫)

ನಿಗಮಜಾಲ ತುರಂಗ ನೀಲಕಾಯಕುರಂಗ

(ಸಂ. ೬, ಪ. ೧)

ಭದ್ರಗುಣಗಣಭರಿತೆ ಭೂನುತಾಮಲಚರಿತೆ

(ಸಂ. ೬, ಪ. ೩)

## ಮಂಗಲಗುಣಾವರಣ ಮದನ ಮದಸಂಹರಣ

ಮಹಲಿಂಗಲೀಲೆಯಲ್ಲಿ ಇಂತಹ ಪದಲಾಲಿತ್ಯವನ್ನು ಹೆಜ್ಜೆಹೆಜ್ಜೆಗೂ ಕಾಣುತ್ತೇವೆ. ವಿರೂಪಾಕ್ಷಪಂಡಿತ, ಲಕ್ಷ್ಮೀಶರಂತೆ ಬಸವಕವಿಗೆ ಪದಲಾಲಿತ್ಯ ಬಹುಸಹಜವಾಗಿದೆ. ಸುಂದರವೂ ಎನಿಸಿದೆ.

ಬಸವಕವಿಯ ಶೈಲಿ ಅತ್ಯಂತ ಬಂಧುರವಾದುದು. ಈತನು ಹತ್ತೊಂಬತ್ತನೆಯ ಶತಮಾನದ ಕವಿಯಾದರೂ ಅವನ ಶೈಲಿಯಲ್ಲಿ ಪುರಾತನ ಕವಿಗಳ ಬಿಗುವನ್ನು ಕಾಣುತ್ತೇವೆ. ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಕವಿಯು ಪಾಂಡಿತ್ಯವನ್ನು ಗಳಿಸಿಕೊಂಡಿರುವುದರಿಂದ ಅವನ ಶೈಲಿಯಲ್ಲಿ ಮಾರ್ಗದೇಸಿಗಳ ಸಮನ್ವಯವನ್ನು ಕಾಣುತ್ತೇವೆ. ಪ್ರತಿಸಂಧಿಯ ಆರಂಭದ ಪದ್ಯಗಳನ್ನೂ ಅಲ್ಲಲ್ಲಿ ಬರುವ ಇನ್ನೂ ಅನೇಕ ಪದ್ಯಗಳನ್ನೂ ಓದಿದರೆ ಅವನ ಶೈಲಿಯ ಬಿಗುವಿನ ಕಲ್ಪನೆ ಬರುತ್ತದೆ.

ಮಹಲಿಂಗಮಹಿಮಕ್ಷೀರಾಬ್ಧಿಚಂದ್ರಮ ಬಂದ
ಮಹಲಿಂಗಪದಪದ್ಮಮತ್ತ ಮಧುಕರ ಬಂದ
ಮಹಲಿಂಗನಂಘ್ರಿವನಸಖಚಂದ್ರಚಂದ್ರಿಕೆಯ ಚಕ್ರಮಾನಸ ಬಂದನು

(ಮ. ಲೀ. ಸಂ. ೭, ಪ. ೧೫)

ಈ ಕವಿಯ ಭಾವನೆ ಕಲ್ಪನೆ ಆಲೋಚನೆಗಳು ಚಿತ್ತಾಕರ್ಷಕವಾಗಿವೆ. ಅವನ್ನು ಅಭಿವ್ಯಕ್ತಗೊಳಿಸುವ ಪದಬಂಧವೂ ಸುಂದರವಾಗಿದೆ; ಬಂಧುರವಾಗಿದೆ. ಮಹಲಿಂಗನೆಂಬ ಅಭಿದಾನದ ಮಗನು ಮಾಲೋಜಿಯ ಆನೆಯ ಸೊಂಡೆಯಲ್ಲಿ ಸಿಲುಕಿ ಮಡಿದಾಗ ತಾಯಿ ಗಂಗವ್ವೆಯ ಅಳುವಿನಲ್ಲಿ ಪ್ರಕಟವಾದ ಶೋಕದ ಭಾವನೆಗಳು, ಯಾರ ಹೃದಯವನ್ನಾದರೂ ಸೆಳೆದು ಕರುಣರಸವನ್ನು ಹುಟ್ಟಿಸಬಲ್ಲುವು.

ಮಹಲಿಂಗಮುನಿವರನ ಅಭಿದಾನಮಂ
ಹರುಷದಿಂದಿಟ್ಟಿರ್ದೆಗಡ ಮಗನೆ ಧರಣಿಪನ
ಕರಿಯ ಶುಂಡಾಲಕ್ಕೆ ಗುರಿಯಾಗಿ ನೀ ನಿನ್ನ
ಹರಣಮಂಗಳೆದರಿನ್ನಯ ಪ್ರಾಣ ಸೈರಿಪುದೆ ?....

ಗಂಡನಿಲ್ಲದ ಬಾಲೆ ರಂಡಿತನದಿಂದಾನು
ಖಂಡ ಶರ್ಕರೆ ಪಾಲು ಕೊಂಡು ಕುಡಿಸಿರ್ದೆ ಗಡ....
(ಮ. ಲೀ. ಸಂ. ೭, ಪ. ೨೨)

'ರಂಡಿತನದಿಂದ' ಮಗುವನ್ನು ಬೆಳೆಸಿದೆನೆಂದು ಹೇಳುವಲ್ಲಿ ಕವಿಯ ದೇಸಿಯ ಬೆಡಗನ್ನು ನೋಡಬೇಕು.

ಭೂತಳದ ನರರಿಗೆ ಪರಮಾತ್ಮನ ಅರಿವು ಅಗಮ್ಯವಾದುದೆಂಬುದನ್ನು ಕವಿ ಭಾವಪ್ರಪೂರ್ಣವಾಗಿ ಹೇಳುವುದನ್ನು ಕೇಳಿರಿ.

ಜ್ವರತಪ್ತ ಸುಧೆಯ ಸವಿ ಬಲ್ಲನೇ ಮಂಡೂಕ
ನರಿವುದೇ ಕ್ಷೀರಾಬ್ಧಿ ಘನತೆಯಂ ಕೌಶಿಕವು
ತರಣಿಕಿರಣಪ್ರಭೆಯ ಬಲ್ಲುದೇ ಜಾತ್ಯಂಧ ಮೌಕ್ತಿಕದ ದರ್ಪಣವನು
ಪರಿಕಿಸಲು ತಿಳಿವನೇ ಬಧಿರ ಸಂಗೀತದಾ
ಪರಿಯ ನೆರೆಬಲ್ಲನೇನದರಂತೆ ಭೂತಳದ
ನರರಿಂಗೆ ಪರಮಾತ್ಮ ನಿನ್ನಿರವದರಿದಪುದೆ ಮಹಲಿಂಗ ಮುನಿಚಂದ್ರಮ.
(ಮ. ಲೀ. ಸಂ. ೮, ಪ. ೩)

ಸುಂದರವಾದ ಕಲ್ಪನೆಗಳಿಗೆ ಈ ಕಾವ್ಯ ಆಗರವಾಗಿದೆ.

ಹರಿಯುಂಗಸಂಗಮಂ ಬಿಟ್ಟಲ್ಲಿ ಸಿರಿ ಬಂದು
ಸ್ಥಿರಗೊಂಡಿರಲು ಕೇಳಿ ಹರಸಂಜಿ ಗಿರಿಜೆಯಂ
ಎರವಿಲ್ಲದೆಡದೊಡೆಯೊಳಗೆ ತಳೆಯೆ ವಿಧಿ ಬೆದರಿ ನಿಜಪತ್ನಿ ಶಾರದೆಯನು
ವರಲಪನಕಂಜದೊಳು ಬಚ್ಚಿಡಲು ಸುರಪಾಲ
ಪರಿಕಿಸುತ ವೈಗಂಗಳಿಂ ಶಚಿಯ ಕಾದಿರ್ದ
ಶರಜನ್ಮ ಲಗ್ನಮಂ ಬಿಟ್ಟಿರ್ದನಾ ಭಯದೊಳೇನೆಂಬೆನಚ್ಚರಿಯನು
( ಮ. ಲೀ. ಸಂ. ೧೦, ಪ. ೧೨)

ಮಹಲಿಂಗಪುರದಲ್ಲಿ ಲಕ್ಷ್ಮಿ ನೆಲೆಸಿದುದನ್ನು ಕವಿ ಹರಿಯುಂಗಸಂಗಮಂ ಬಿಟ್ಟಲ್ಲಿ ಸಿರಿ ಬಂದು ಸ್ಥಿರಗೊಂಡಳೆಂದು ವರ್ಣಿಸುತ್ತಾನೆ. ಆಗ ಹರ ಬ್ರಹ್ಮ ಸುರಪಾಲ ಮೊದಲಾದವರೆಲ್ಲ ಅಂಜಿ ತಮ್ಮ ಹೆಂಡಿರನ್ನು ಕಣ್ಣರಿಕೆಯಲ್ಲಿಟ್ಟುದಾಗಿ ಹೇಳುವನು. ಕವಿಯ ಕಲ್ಪನೆ ಬಹು ಸುಂದರವಾಗಿದೆ. ಹೀಗೆ ಈ ಕವಿಯ ಕಲ್ಪನಾವೈಖರಿ ಆತನ ಮಹಲಿಂಗಲೀಲೆಯಲ್ಲಿ ಸಾವಿರಮುಖದಿಂದ ಪ್ರಕಟವಾಗಿದೆ.

ಬಸವಕವಿಯ ಕಾವ್ಯ ಅರ್ಥಪೂರ್ಣವಾದುದು. ಆತನು ಕೇವಲ ಭಾವನೆಗಳನ್ನು ಹರಿಸಿಬಿಡುವ ಕವಿಯಲ್ಲ. ಮಾತು ಮಥಿಸಿದಂತೆ ಅರ್ಥ ಹೊರಡುತ್ತದೆ ಆತನ ಕಾವ್ಯದಲ್ಲಿ.

ಹರಭಕ್ತದ್ರೋಹಕ್ಕೆ ಹರಣ ಕೊಡುವುದೆ ಧರ್ಮ
........
ಮುಕ್ತಿಕಾಂತನ ಕರವ ಪರಮ ಸಂತಸದಿಂದೆ
ಭಕ್ತಿಭಾಮಿನಿ ಪಿಡಿದಳೆಂಬಂತೆ

(ಮ. ಲೀ. ಸಂ. ೧೨, ಪ. ೨೬)

ವಾರಶಿಲಿರಂಜನೆಯು ವರ ಮರೀಚಿಯ ನಿಳವು
ಸಾರ ಸುರಚಾಪದಾಕಾರ ಖುಲ್ಲರ ಸ್ನೇಹ
ಭೂರಿ ಸ್ವಪ್ನದಿ ಕಂಡ ಸಿರಿ ಹುಲ್ಲಿನುರಿ ಭರದಿ ಬರುತಿರ್ಪ ಹಳ್ಳಭರವು
ವಾರಿಜಾಕ್ಷಿಯರ ಸವಿನೋಟ ಸಮ್ಮೋಹನವು
ಧಾರುಣೀಶ್ವರಭಕ್ತಿ ನಿಜವಲ್ಲ

(ಮ. ಲೀ. ಸಂ. ೮, ಪ. ೧೪)

ಹೀಗೆ ಅರ್ಥಭಾರದಿಂದ ಬಳಕುವ ಅನುಭವದ ನುಡಿಗಳಿಂದ ಮಹಲಿಂಗಲೀಲೆ ಸುಂದರವಾಗಿದೆ.

ಬೇರೆ ಬೇರೆ ಭಾವನೆ ಕಲ್ಪನೆ ಆಲೋಚನೆಗಳಿಗೆ ತಕ್ಕಂತೆ ಕವಿಯ ಶೈಲಿ ಬದಲಾಗುವುದನ್ನು ನೋಡಬೇಕು. ಅಂತೆಯೇ ಈ ಶೈಲಿಯನ್ನು ಸತ್ಕವಿಯ ಸಮುಚಿತವಾದ ಶೈಲಿಯೆಂದು ಕರೆದಿರುವುದು.

ಅಲಂಕಾರಗಳಲ್ಲಿ ಯಮಕ, ಉಪಮೆ, ಉತ್ಪ್ರೇಕ್ಷೆಗಳು ಬಹುಲವಾಗಿಯೂ ಶ್ಲೇಷ ವಿರೋಧಾಭಾಸ ಮೊದಲಾದುವು ವಿರಳವಾಗಿಯೂ ಪ್ರಯೋಗವಾಗಿವೆ. ಬಸವಕವಿಯ ಶಬ್ದಾಲಂಕಾರದ ಸೊಬಗು ಸ್ತೋತ್ರಾರ್ಹವಾಗಿದೆಯೆಂದು ಹಿಂದೆ ಒಂದು ಸಂದರ್ಭದಲ್ಲಿ ಹೇಳಲಾಗಿದೆ.

ನಿರುಪಮ ನಿರಾಲಂಬ ನಿರಘಜಂಗಮರಾಯ

(ಮ. ಲೀ. ಸಂ. ೮, ಪ. ೫)

ಹೇಮಗಿರಿಧಾಮ ಮಂಜುಲನಾಮ ನಿಷ್ಕಾಮ
ರಾಮಗಲಪ್ರೇಮ ನಿಸ್ಸೀಮ

ನಿಗಮಜಾಲತುರಂಗ ನೀಲಕಾಯಕುರಂಗ
ಮೃಗಲಕ್ಷಣಪತಂಗ ಪರಮ ದಿವ್ಯರಥಾಂಗ

(ಮ. ಲೀ. ಸಂ. ೬. ಪ. ೧)

ಹೀಗೆ ಕವಿ ನಾದಲೋಲನಾಗಿ ಹಾಡುತ್ತಿರುವುದನ್ನು ಎಷ್ಟು ಕೇಳಿದರೂ ತೃಪ್ತಿಯಾಗುವಂತಿಲ್ಲ. ಇಂತಹ ಶಬ್ದಾಲಂಕಾರಗಳಲ್ಲಿಯೂ ಕವಿ ವೈವಿಧ್ಯವನ್ನು ತಂದಿರುವುದರಿಂದ ಬೇಸರಿಕೆಯುಂಟಾಗುವುದಿಲ್ಲ.

ಈ ಶಬ್ದಾಲಂಕಾರಗಳ ಜೊತೆಗೆ ಕವಿಯ ಉಪಮೆ ಉತ್ಪ್ರೇಕ್ಷೆಗಳೂ ತುಂಬಾ ಗಮನಾರ್ಹವಾಗಿವೆ. ಮಾಲೋಜಿರಾಜನು ಮಹಲಿಂಗಮುನಿನಾಥನ ಕೈಹಿಡಿದು ಕರೆದುಕೊಂಡು ಹೋದುದನ್ನು 'ಮುಕ್ತಿಕಾಂತನ ಕರವ ಭಕ್ತಿಭಾಮಿನಿ ಪಿಡಿದಳೆ'ಂಬ ಉಪಮೆಯಿಂದ ಬಣ್ಣಿಸುತ್ತಾನೆ. ಈ ಉಪಮೆ ಅರ್ಥಪೂರ್ಣವಾಗಿದೆಯೆಂದು ಹಿಂದೆ ವಿವರಿಸಲಾಗಿದೆ. 'ಪಾಪಿಗಳ ಕಣ್ಣಿಂಗೆ ಪರುಷ ಕಲ್ಲಾದಂತೆ' ತನ್ನ ರಾಜ್ಯದಲ್ಲಿರ್ದ ಮುನಿಚಂದ್ರಮನನ್ನು ಕಾಣದಾದೆನೆಂದು ಮಾಲೋಜಿಯು ಹೇಳುತ್ತಾನೆ. ಇಲ್ಲಿಯೂ ಉಪಮೆಯ ಸೌಂದರ್ಯವನ್ನು ನೋಡಬೇಕು. ಪೂರ್ವಪುರುಷನಿದ ಸನ್ಮಾನಿಸಿದನದರಂತೆ ಬೇರ್ವರಿದು ನೆಲಸಿರ್ಪುದೆಂಬದಮಂ ಬಿಡದೆ ಸರ್ವರಿಗೆ ತೋರ್ಪಂತೆ ಪೂರ್ವದಿಕ್ಕಿನಲ್ಲಿ ಲಿಂಗಮುದ್ರೆಯ ಕಲ್ಲನ್ನು ಸ್ಥಾಪಿಸಿದರಂತೆ. ಉತ್ಪ್ರೇಕ್ಷೆ ಇಲ್ಲಿ ಸೊಗಸಾಗಿಲ್ಲವೇ ? ಸಾರ್ಥಕವಾಗಿಲ್ಲವೇ ! ಹೀಗೆ ಮಹಲಿಂಗ ಲೀಲೆಯಲ್ಲಿ ಬರುವ ಅನೇಕ ಉಪಮೆ ಉತ್ಪ್ರೇಕ್ಷೆಗಳ ಕಾವ್ಯಸೌಂದರ್ಯವನ್ನು ವಿವರಿಸಬಹುದು.

ಬಸವಕವಿಯ ಪದಪ್ರಯೋಗದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳುವುದವಶ್ಯವಿದೆ. ಅಪೂರ್ವವಾದ ಕೆಲವು ಕನ್ನಡ ಶಬ್ದಗಳನ್ನು ಕವಿ ಬಳಸುತ್ತಾನೆ. ಚಿನಿವಾಲು (ಸಂ. ೪, ಪ. ೩೬), ಕೂನಿಡು (ಸಂ. ೨, ಪ. ೨೫) ಬಾಚಿದಪ್ಪು (ಸಂ. ೨, ಪ. ೨೧), ತಗರದೇರ (ಸಂ. ೨, ಪ. ೧೩), ತಿರಿಕಲ್ಲು (ಸಂ. ೨, ಪ. ೮), ಮಡಗು (ಸಂ. ೨, ಪ. ೨೮), ಕವಲ (ಸಂ. ೧೦, ಪ. ೩), ಜಗದಚ್ಚಿ (ಸಂ. ೧೧, ಪ. ೨೮), ಗೊತ್ತಾಳಿ (ಸಂ. ಪ. ). ಇಂತಹ ಅನೇಕ ಪ್ರಯೋಗಗಳಲ್ಲಿ ಕೆಲವನ್ನು ಮಾತ್ರ ಉದಹರಿಸಲಾಗಿದೆ. ಈ ಪ್ರಯೋಗಗಳ ಸೌಂದರ್ಯವನ್ನೂ ಮಹತಿಯನ್ನೂ ಕಾವ್ಯವನ್ನೋದಿಯೇ ತಿಳಿದುಕೊಳ್ಳಬೇಕು. ಜಗದಚ್ಚಿ, ಗೊತ್ತಾಳಿಯಂತಹ ಶಬ್ದಗಳು ಕವಿಯ ಶಬ್ದನಿರ್ಮಾಣಶಕ್ತಿಯನ್ನು

ಸೂಚಿಸುತ್ತವೆ. ಇಂತಹ ಅಚ್ಚಗನ್ನಡ ಶಬ್ದಗಳ ಬಳಕೆ ಈ ಕಾವ್ಯಕ್ಕೆ ದೇಸಿಯ ಬೆಡಗನ್ನು ತಂದಿದ್ದರೆ ಅಪೂರ್ವವಾದ ಸಂಸ್ಕೃತಶಬ್ದಗಳ ಪ್ರಯೋಗ ಅದಕ್ಕೆ ಮಾರ್ಗದ ಮೆರುಗನಿತ್ತಿದೆ. ಲಪನ, ಭೇನ, ಆಖುಪತಿ, ರಾಮುಕಂಧರ, ಗೂಢಪದಕಂಕಣ, ಮಾಪಸುಕುಮಾರಹರ ಇಂತಹ ಅನೇಕ ಸಂಸ್ಕೃತ ಪ್ರಯೋಗ ಗಳನ್ನು ಇಲ್ಲಿ ಉದಾಹರಿಸಬಹುದು.

ಈ ಪಂಡಿತಕವಿಯ ಶೈಲಿಯಲ್ಲಿಯೂ ಹಲವೆಡೆ ಎದೆರಂಗಮುಂಟಪ, ಸೂಚಿಸ ದಲಾ, ತನ್ನ ತಲೆಯೊಳಗಿನ್ನ, ಮಾಡ್ದೊಡಂ ಎಂಬ ಕೆಲವು ಪ್ರಯೋಗದೋಷ ಗಳು ನುಸುಳಿರುವುದನ್ನು ಕಾಣುತ್ತೇವೆ. ನಡೆವರೆಡಹದೆ ಕುಳಿತರೆಡಹುವರೆ ?

ಒಟ್ಟಿನಲ್ಲಿ ಈ ಕಾವ್ಯವನ್ನೋದಿದರೆ ಸುಸಂಸ್ಕೃತಶೈಲಿಯ ಅನುಭವವಾಗು ತ್ತದೆ. ಕನ್ನಡ ಸಂಸ್ಕೃತ ಭಾಷೆಗಳ ಮೇಗಣ ಕವಿಯ ಪ್ರಭುತ್ವ ಸ್ಪಷ್ಟವಾಗುತ್ತದೆ; ಆತನ ಪಾಂಡಿತ್ಯದ ಅರಿವಾಗುತ್ತದೆ.

**

## ಕಥನ ಕಲೆ

ಮಹಲಿಂಗಲೀಲೆಯೊಂದು ಕಥಾಕುಸುಮಗುಚ್ಛವಾಗಿದೆ. ಈ ಕಾವ್ಯದ ವೈಶಿಷ್ಟ್ಯವಡಗಿರುವುದೇ ಇಲ್ಲಿ. ಮುಖ್ಯವಾಗಿ ಮಹಲಿಂಗಜಂಗಮನ ಕಥೆ ಮತ್ತು ಆತನ ಅಷ್ಟಾದಶ ಲೀಲೆಗಳ ಕಥೆ ಈ ಕಾವ್ಯದಲ್ಲಿ ಬಂದಿರುವುದು ನಿಜ. ಮುನಿನಾಥನ ಈ ಅಷ್ಟಾದಶಲೀಲೆಗಳನ್ನು ಕವಿ ವಿವರಿಸುವಾಗ ಸಾದೃಶ್ಯರೂಪದಿಂದ ಅನೇಕ ಉಪಕಥೆಗಳನ್ನು ಹೇಳಿರುವನು. ಇದಲ್ಲದೆ ಅಷ್ಟಾವರಣಗಳ ಮಹತಿಯನ್ನು ಕವಿಯು ಕಥೆಗಳ ಮುಖಾಂತರವಾಗಿಯೇ ವಿವರಿಸಿರುವನು.

### ಈ ಕಾವ್ಯದಲ್ಲಿ ಕೆಳಗೆ ಕಾಣಿಸಿದ ಉಪಕಥೆಗಳು ಬಂದಿವೆ

ರುದ್ರಿಯಕ್ಕನಿಗೆ ನೇತ್ರವನ್ನಿತ್ತಸಂದರ್ಭದಲ್ಲಿ :

೧ ವಿಷ್ಣು ಶಿವನಿಗೆ ನೇತ್ರವನ್ನರ್ಪಿಸಿದ ಕಥೆ
೨ ಕಾಳಿದಾಸನ ಕಥೆ
೩ ಕಣ್ಣಪ್ಪನ ಕಥೆ
೪ ಸೌಂದರನಂಬಿಯ ಕಥೆ

## ಮಹಲಿಂಗಪುರವಿರಚನೆಯ ಸಂದರ್ಭದಲ್ಲಿ :

೫ ಸಿದ್ಧರಾಮೇಶನ ಕಥೆ
೬ ಮುಗ್ಧಸಂಗಮನ ಕಥೆ
೭ ಲದ್ದಿ ಸೋಮನ ಕಥೆ

## ಬಸವತೀರ್ಥವಿರಚನೆಯ ಪ್ರಸಂಗದಲ್ಲಿ :

೮ ಭಗೀರಥನ ಕಥೆ
೯ ಉರುಲಿಂಗದೇವನ ಶಿಷ್ಯನ ಕಥೆ

## ರಾಮಲಿಂಗ ಸ್ಥಾಪನೆಯ ಸಂದರ್ಭದಲ್ಲಿ :

೧೦ ಸಿಂಧುರಾಸುರನ ಕಥೆ
೧೧ ದೀಪದ ಕಲಿಯರ ಕಥೆ
೧೨ ಕೆಂಭಾವಿ ಭೋಗಣ್ಣನ ಕಥೆ

## ಗಂಗಾಖ್ಯನ ಗಣಾರಾಧನೆಯ ಪ್ರಸಂಗದಲ್ಲಿ :

೧೩ ಮೋಳಿಗೆಯ ಮಾರಯ್ಯನ ಕಥೆ

## ಪಾದೋದಕ ಮಹಿಮೆಯನ್ನು ವಿವರಿಸುವಲ್ಲಿ :

೧೪ ಸಿದ್ಧರಸ ಸರಸಿಯ ಕಥೆಗಳು
೧೫ ನಕ್ಕ ನೈನಾರರ ಕಥೆ
೧೬ ಕೆರೆಯ ಪದ್ಮರಸರ ಕಥೆ
೧೭ ಮಾರಯ್ಯನವರ ಕಥೆ
೧೮ ಮಡಿವಳ ಮಾಚಿದೇವರ ಕಥೆ
೧೯ ಮಾದಾರ ಧೂಳಯ್ಯನ ಕಥೆ
೨೦ ಹರಳಯ್ಯ ಮಧುವರಸರ ಕಥೆ
೨೧ ಸನ್ಯಾಸಿ ಮಂಚಣ್ಣನ ಕಥೆ
೨೨ ಓರ್ವ ಪತಿವ್ರತೆಯ ಕಥೆ

## ಭಸಿತದ ಮಹಿಮೆಯನ್ನು ವಿವರಿಸುವಲ್ಲಿ :

೨೩ ಮೀನುಗಾರ ಕಣ್ಣಪ್ಪನ ಕಥೆ
೨೪ ಹರಿಗೆ ಶಿವನು ಭಸಿತವನ್ನಿತ್ತ ಕಥೆ
೨೫ ಗೌತಮ ಶಾಪಗ್ರಸ್ತರಾದ ದೇವತೆಗಳ ಕಥೆ
೨೬ ಅಹೋಬಲನ ಕಥೆ
೨೭ ಉಪಮನ್ಯುವಿನ ಕಥೆ
೨೮ ವ್ಯಭಿಚಾರಿ ಬ್ರಾಹ್ಮಣನ ಕಥೆ
೨೯ ಓಹಿಲಯ್ಯನ ಕಥೆ
೩೦ ವ್ಯಾಸಮುನಿಯ ಕಥೆ
೩೧ ಶುಕಮುನಿಯ ಕಥೆ
೩೨ ಹರಿಯು ತಲೆಯೊಡೆದುಕೊಂಡ ಕಥೆ
೩೩ ಬಸವಣ್ಣನವರ ಸುಧಾಪಾತ್ರೆಗಳಪವಾಡ

## ಲಿಂಗದ ಮಹಿಮೆಯನ್ನು ಬಣ್ಣಿಸುವಲ್ಲಿ :

೩೪ ವಿಷ್ಣು ಲಿಂಗಸ್ಥಾಪನೆ ಮಾಡಿದ ಕಥೆ
೩೫ ದಾಶರಥನು ಕಾಲಿಯಲ್ಲಿ ಲಿಂಗ ಸ್ಥಾಪನೆ ಮಾಡಿದ ಕಥೆ
೩೬ ಹನುಮಂತ-ವೀರಭದ್ರರ ಕಥೆ
೩೭ ದ್ರೋಣನ ಕಥೆ
೩೮ ಸೌಂದರನಂಬಿಯ ಕಥೆ
೩೯ ಚಂಡೇಶ್ವರನ ಕಥೆ
೪೦ ಗೊಲ್ಲಾಳನ ಕಥೆ
೪೧ ಮಲ್ಲಿಸೆಟ್ಟಿಯ ಕಥೆ
೪೨ ಲುಬ್ಧಕನ ಲಿಂಗಪೂಜೆಯ ಕಥೆ
೪೩ ಬೇಟೆಯ ಧೀವರನ ಕಥೆ

೪೪ ಚೋಳಭೂಪತಿಯು ಶಿವಭಕ್ತನಿಂದ ಲಿಂಗದ ಡೊಂಕನ್ನು ತಿದ್ದಿಸಿದ ಕಥೆ
೪೫ ಕೊಡಗೂಸು ಚೆನ್ನಕ್ಕನ ಕಥೆ
೪೬ ಮಲುಹಣನ ಕಥೆ
೪೭ ಚೋಳಿಯಕ್ಕನ ಕಥೆ
೪೮ ವಿಟಶ್ವೇತನ ಕಥೆ
೪೯ ವಾಯಸವು ಲಿಂಗಪೂಜೆ ಮಾಡಿದ ಕಥೆ
೫೦ ರಘುರಾಜನು ತ್ರಿಕೋಟಿಲಿಂಗಗಳನ್ನು ಸ್ಥಾಪಿಸಿದ ಕಥೆ
೫೧ ಕೊಟ್ಟಾರ ಬಾಚಯ್ಯನ ಕಥೆ
೫೨ ಧರ್ಮರಾಜನು ಲಿಂಗಸ್ಥಾಪನೆ ಮಾಡಿದ ಕಥೆ
೫೩ ಧೂಪದ ಮಾಚಿದೇವಯ್ಯನ ಕಥೆ
೫೪ ಮಾಚಿದೇವಯ್ಯನ ಕಥೆ
೫೫ ಘಟ್ಟಿವಾಳಯ್ಯನ ಕಥೆ
೫೬ ಮಾರಿಗೊಂಡನ ಕಥೆ
೫೭ ಸತ್ಯಣ್ಣನ ಕಥೆ
೫೮ ಕಮಲಾಯಿಯ ಕಥೆ
೫೯ ಸೂಳೆ ನಂಬೆಕ್ಕನ ಕಥೆ
೬೦ ನೀಲಲೋಚನೆಯ ಕಥೆ

## ಜಂಗಮ ಮಹಿಮೆಯನ್ನು ಬಿತ್ತರಿಸುವಲ್ಲಿ :

೬೧ ಇಳೆಯಾಂಡ ಗುಡಿಮಾರನ ಕಥೆ
೬೨ ಸಿರಿಯಾಳ ಚಂಗಳೆಯರ ಕಥೆ
೬೩ ನಂಬಿಯಕ್ಕನ ಕಥೆ
೬೪ ಕಾರಿಕಾಲವ್ವೆಯ ಕಥೆ
೬೫ ವೈಜವ್ವೆಯ ಕಥೆ
೬೬ ಶೂಲದ ಬೊಮ್ಮಿತಂದೆಗಳ ಕಥೆ
೬೭ ಕೈಕೂಲಿ ಚಾಮಯ್ಯನ ಕಥೆ
೬೮ ಮೊನೆಧರ ಚೋಳರಾಜನ ಕಥೆ
೬೯ ಸೂರಸಾನಿಯ ಕಥೆ
೭೦ ಸೋಮಸೀಮಾರರ ಕಥೆ
೭೧ ಸಾಮವೇದಿಯ ಕಥೆ
೭೨ ಪಗಲ್ಪೋಳನ ಕಥೆ
೭೩ ದಾಸಿಮಯ್ಯನ ಕಥೆ
೭೪ ಐಸರನ ಕಥೆ
೭೫ ನಿರ್ಲಜ್ಜೆ ಶಾಂತಯ್ಯಗಳ ಕಥೆ
೭೬ ಅಮರನೀತಿಯ ಕಥೆ
೭೭ ಸಿಂಧುಬಲ್ಲಾಳನ ಕಥೆ
೭೮ ಇಃಪ್ಪಗೆಯಾಂಡರ ಕಥೆ
೭೯ ಸಿರಿವಂತ ಭೂಪಾಲನ ಕಥೆ
೮೦ ದಸರಯ್ಯ ಮೋಟಮಲ್ಲರ ಕಥೆ
೮೧ ಬಸವೇಶ್ವರನ ಚರಿತೆ
೮೨ ಹುಲಿಯು ಹಾಲನ್ನು ಬೇಡಿದ ಜಂಗಮನ ಕಥೆ
೮೩ ಶಿವನಾಗಮಯ್ಯಗಳ ಕಥೆ
೮೪ ಕಿನ್ನರಿ ಬೊಮ್ಮಯ್ಯನ ಕಥೆ
೮೫ ಮೋದಾರ ಕೇತಯ್ಯನ ಕಥೆ

## ಮಂತ್ರಮಹಿಮೆಯನ್ನು ಹೇಳುವಲ್ಲಿ :

೮೬ ದಾಶಾರ್ಹನ ಕಥೆ
೮೭ ಚೊಕ್ಕಳದ ಮಾರಯ್ಯನ ಕಥೆ
೮೮ ತಿರುಬೆಟ್ಟನ ಕಥೆ
೮೯ ಸೊಡ್ಡಳ ಬಾಚರಸನ ಕಥೆ
೯೦ ಅಜಗಣ್ಣ ತಂದೆಗಳ ಕಥೆ
೯೧ ಸಾನಂದ ಗಣನಾಥನ ಕಥೆ
೯೨ ಪಂಚಾಕ್ಷರಿಯ ಮುರುಘನ ಕಥೆ
೯೩ ಶರಣಜೀವನೆಂಬ ಮಂತ್ರಿವರನ ಕಥೆ
೯೪ ಬಂಕಯ್ಯನ ಕಥೆ
೯೫ ತಿರುಕೊಳವಿನಾಚಿಯ ಕಥೆ
೯೬ ಮಂತ್ರಜಾತಯ್ಯನ ಕಥೆ

## ರುದ್ರಾಕ್ಷಿಯ ಮಹಿಮೆಯನ್ನು ವಿವರಿಸುವಲ್ಲಿ :

೯೭ ವಾರಣಾಶಿಯ ಶೂದ್ರನ ಕಥೆ
೯೮ ಮಹನಂದಿಯ ಕಥೆ

೯೯ ಬೇಡ-ನಾಯಿ-ಹಂದಿಗಳ ಕಥೆ ೧೦೦ ಕತ್ತೆಯ ಕಥೆ
೧೦೧ ವ್ಯಭಿಚಾರಿಯ ಕಥೆ ೧೦೨ ಕೇರಳಾಧಿಪನ ಪಟ್ಟದ ರಾಣಿಯ ಕಥೆ

ಪ್ರಸಾದ ಮಹಿಮೆಯನ್ನು ವರ್ಣಿಸುವಲ್ಲಿ :

೧೦೩ ಫಣಿರಾಜನ ಕಥೆ ೧೦೪ ದೂರ್ವಾಸನ ಕಥೆ
೧೦೫ ಮೀನಗಾರನ ಕಥೆ ೧೦೬ ಶೂರಕನ ಕಥೆ
೧೦೭ ರೇವಣಸಿದ್ಧೇಶ್ವರನ ಕಥೆ ೧೦೮ ಚೋಳಕ್ಕನ ಕಥೆ
೧೦೯ ಕರಿಕಾಲ ಚೋಳನ ಕಥೆ ೧೧೦ ಬಿಬ್ಬಿ ಬಾಚರಸನ ಕಥೆ
೧೧೧ ಬಿಜ್ಜಳನ ಪ್ರಸಂಗ ೧೧೨ ಕಕ್ಕಯ್ಯನವರ ಪ್ರಸಂಗ

ಪಂಚಾಕ್ಷರೀ ಮಂತ್ರಮಹಿಮೆಯನ್ನು ಹೇಳುವಲ್ಲಿ :

೧೧೩ ವಜ್ರಬಾಹುವಿನ ಕಥೆ


ಮೂಲಕಥೆ, ಲೀಲೆಗಳಕಥೆ, ಹಾಗು ಉಪಕಥೆ ಇವೆಲ್ಲ ಒಟ್ಟುಗೂಡಿ ಮಹಲಿಂಗ ಲೀಲೆಯಲ್ಲಿ ಸುಮಾರು ೧೩೨ ಕಥೆಗಳು ಬಂದಿವೆ. ಇಲ್ಲಿ ೧೧೩ ರಷ್ಟು ಉಪ ಕಥೆಗಳು ಬಂದಿದ್ದರೂ ಕವಿ ಅವನ್ನು ಕಾವ್ಯದ ಕಥಾವಸ್ತುವಿನಲ್ಲಿ ಬಹುಜಾಣ್ಮೆಯಿಂದ ಸೇರಿಸಿರುವನು. ಮಹಲಿಂಗಮುನಿನಾಥನು ಕೆಲವು ಅಸಾಧಾರಣ ಲೀಲೆಗಳನ್ನೆಸ ಗಿದ ಪ್ರಸಂಗದಲ್ಲಿ ಭಕ್ತರಿಗೆ ತತ್ಸದೃಶವಾದ ಹಿಂದಣ ಕಥೆಗಳು ನೆನಪಾಗುವುದು ಸ್ವಾಭಾವಿಕ. ಒಂದರಿಂದ ಹನ್ನೆರಡರವರೆಗಿನ ಕಥೆಗಳನ್ನು ಇಂತಹ ಸಹಜವಾದ ಪ್ರಸಂಗದಲ್ಲಿ ಹೇಳಲಾಗಿದೆ. ಮಹಲಿಂಗಮುನಿನಾಥನು ಯಾವ ಲೀಲೆಗಳನ್ನೇ ಎಸಗಲಿ ಆತ್ಮಧ್ಯಾನ ಅಷ್ಟಾವರಣಗಳೇ ಆತನ ಸಾಧನಗಳು. ಮಾಲೋಜಿ, ಸಕ ರೋಜಿ ಮೊದಲಾದ ಭಕ್ತರ ಪ್ರಾರ್ಥನೆಯ ಮೇರೆಗೆ ಮಹಲಿಂಗಮುನಿನಾಥನು ಈ ಅಷ್ಟಾವರಣಗಳ ಮಹತಿಯನ್ನು ಸುಮಾರು ನೂರುಕಥೆಗಳಿಂದ ವಿವರಿಸಿರು ವನು. ಹೀಗೆ ಮೂಲಕಥೆ ಮತ್ತು ಅದಕ್ಕೆ ಸಂಬಂಧಿಸಿದ ಹದಿನೆಂಟು ಕಥೆಗಳಲ್ಲಿ ಈ ಕಥೆಗಳನ್ನು ಸೇರಿಸುವಲ್ಲಿ ಕವಿಯು ನಿಜವಾಗಿಯೂ ಜಾಣ್ಮೆಯನ್ನು ತೋರಿಸಿ ದ್ದಾನೆ. ಯಾವುದೊಂದು ಕಥೆಯೂ ಅಪ್ರಸ್ತುತವೆನಿಸದಂತೆ ಅದನ್ನು ತಂದಿರು ವನು.

ಇನ್ನು ಈ ಕಥೆಗಳನ್ನು ಹೇಳುವ ರೀತಿಯು ಸುಂದರವಾಗಿದೆ. ಆಯಾ ಪ್ರಸಂಗಕ್ಕೆ ತಕ್ಕಂತೆ ಕಥೆಗಳನ್ನು ಹಿಗ್ಗಿಸಿ ಇಲ್ಲವೆ ಸಂಗ್ರಹಿಸಿ ಹೇಳವ ಕಲೆ ಅತ್ಯಂತ ಪ್ರಶಂಸನೀಯವಾಗಿದೆ. ಬಸವಣ್ಣನವರಿಗೆ ಸಂಬಂಧಿಸಿದ ಕಥೆಗಳನ್ನು ಸ್ವಲ್ಪ ವಿಸ್ತರಿಸಿ ಹೇಳಿದರೆ ಕಾಳಿದಾಸನ ಕಥೆಯನ್ನು ಒಂದೆರಡು ಪದ್ಯಗಳಲ್ಲಿ ಮುಗಿಸಿ

ಬಿಡುತ್ತಾನೆ. ಕವಿಯು ಸಿದ್ಧರಾಮನ ಕಥೆಯನ್ನು ಹೇಳಿರುವಲ್ಲಿ ಆತನ ಕಥನ ಕಲೆಯ ಸೊಗಸನ್ನು ನೋಡಬೇಕು. ಮುಗ್ಧಸಂಗಾರ್ಯನ ವಿಷಯವಾಗಿ ಒಂದು ಕಾವ್ಯವನ್ನೇ ಬರೆದ ಕವಿ ಆತನ ಕಥೆಯನ್ನು ಈ ಕಾವ್ಯದೊಳಗೆ ಒಂದು ಪದ್ಯದಲ್ಲಿ ಹೇಳಿ ಮುಗಿಸುತ್ತಾನೆ. ನೂರಾರು ಉಪಕಥೆಗಳನ್ನು ಹೇಳಿದ್ದರೂ ಅವುಗಳನ್ನು ಹದವರಿತು ಹೇಳುತ್ತಿರುವುದರಿಂದ ಮೂಲಕಥೆ ಎಲ್ಲಿಯೂ ಮರೆಯಾಗುವಂತಿಲ್ಲ. ಈ ಕಥೆಗಳನ್ನು ಹೇಳುತ್ತಿರುವ ಮಹಲಿಂಗಮುನಿನಾಥನ ವ್ಯಕ್ತಿತ್ವದ ದೇವಮಂದಿರ ದಲ್ಲಿ ಕವಿ ಈ ಉಪಕಥೆಗಳ ವಿಗ್ರಹಗಳನ್ನು ಕೆತ್ತಿರುವನು. ಬಿಡಿಬಿಡಿಯಾಗಿ ಪ್ರತಿಯೊಂದು ಕಥೆಯೂ ಸುಂದರವಾಗಿ ಇಡಿಯಲ್ಲಿ ಕಾವ್ಯಸೌಂದರ್ಯವನ್ನು ಹೆಚ್ಚಿಸಿವೆ. ಇವುಗಳಲ್ಲಿ ನಂದಿಗ್ರಾಮದ ಮಹನಂದಿಯ ಕಥೆಯು ವಸ್ತುವಿನ ದೃಷ್ಟಿಯಿಂದಲೂ ನಿರೂಪಣೆಯ ದೃಷ್ಟಿಯಿಂದಲೂ ಶ್ರೇಷ್ಠಕಥೆಗಳ ಮಾಲಿಕೆಯಲ್ಲಿ ಸೇರಲರ್ಹವಾಗಿದೆ. ಸಿದ್ಧರಾಮನ ಕಥೆ ಸರಸವಾಗಿ ನಿರೂಪಿತವಾಗಿದ್ದರೆ, ರೇವಣ ಸಿದ್ಧೇಶ್ವರ, ಕೆಂಭಾವಿಭೋಗಣ್ಣನವರ ಕಥೆಗಳನ್ನು ಭವ್ಯವಾಗಿ ಬಣ್ಣಿಸಲಾಗಿದೆ. ಇವೆಲ್ಲ ಕಥೆಗಳಲ್ಲಿ ಭಕ್ತಿರಸ ಹರಿಯುತ್ತಿದ್ದರೂ ಮಿಕ್ಕ ರಸಗಳೂ ಒಂದು ಭಕ್ತಿಗೆ ಬಣ್ಣವೇರಿದೆ. ಮಹಲಿಂಗಲೀಲೆಯಲ್ಲಿ ಕವಿಯ ಕಥನಕಲೆ ಅದ್ಭುತಶಕ್ತಿಯನ್ನು ಸಾಧಿಸಿದೆ. ಮಹಲಿಂಗಮುನಿನಾಥನ ದರ್ಶನಮಾಡಿಸಿ ಅನೇಕ ಪುರಾತನರ ಹಾಗೂ ನೂತನ ಪುರಾತನರ ಕಥೆಗಳಿಂದ ಸಹೃದಯರ ಹೃದಯವನ್ನು ಪರಿಶುದ್ಧಗೊಳಿಸಿ ಈ ಕಾವ್ಯ ಭಕ್ತಿಯ ಬೀಜವನ್ನು ಬಿತ್ತುತ್ತದೆ. ಈ ಕಥೆಗಳಲ್ಲಿ ಕಂಡುಬರುವ ಕಲೆಯನ್ನೂ ಅವುಗಳ ವ್ಯಾಪ್ತಿಯನ್ನೂ ನೋಡಿದರೆ ಬಸವಕವಿಯ ಶಕ್ತಿ, ಅಭ್ಯಾಸ ಗಳ ಕಲ್ಪನೆಯಾಗುತ್ತದೆ. ಅವನಿಗೆ ಕಥನಕವಿಗಳ ಮಾಲಿಕೆಯಲ್ಲಿ ಉತ್ತಮವಾದ ಸ್ಥಾನವನ್ನು ಕಲ್ಪಿಸಿಕೊಡುತ್ತವೆ.

**

## ಕನ್ನಡಸಾಹಿತ್ಯದಲ್ಲಿ ಬಸವಕವಿಯ ಸ್ಥಾನ

ಬಸವಕವಿಯು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿದ್ದನೆಂದು ಹಿಂದೆ ಹೇಳಲಾಗಿದೆ. ಕನ್ನಡಸಾಹಿತ್ಯದಲ್ಲಿ ಈ ಕವಿಯ ಸ್ಥಾನವಾವುದೆಂಬುದನ್ನು ವಿಚಾರಿಸುವಾಗ ಯುಗಧರ್ಮದ ವಿಷಯವನ್ನು ವಿವೇಚಿಸುವುದು ಅವಶ್ಯವೆನಿಸಿದೆ. ವಿಜಯನಗರ ಸಾಮ್ರಾಜ್ಯವೂ ಕೆಳದಿ ಬೀಳಗಿಯಂತಹ ಮಾಂಡಲಿಕ ರಾಜ್ಯಗಳೂ ಮುಳುಗಿ ಪೇಶ್ವೆಯರ ಪ್ರಾಬಲ್ಯ ಹೆಚ್ಚಾದಾಗ ಕನ್ನಡ ಸಾಹಿತ್ಯದ ದಾರುಣಸ್ಥಿತಿ ಯನ್ನು ಬಣ್ಣಿಸುವುದು ಅಸಾಧ್ಯವೆಂದೇ ಹೇಳಬೇಕಾಗುತ್ತದೆ. ಕರ್ನಾಟಕದ

ಬಹುಭಾಗವು ಪೇಶ್ವೆಯರ ಆಳಿಕೆಗೆ ಒಳಗಾಗಿ ಜನತೆಗೆ ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಅರಿವಿಲ್ಲದಂತಾಯಿತು. ಪರಕೀಯರ ಅನುಕರಣ ಹೆಚ್ಚಾಗಿ ಕನ್ನಡಿಗರು ಅಂಕಿತಕ್ಕಾಗಿ ಸಹ ಅನ್ಯಭಾಷೆಯ (ಮರಾಠಿ)ನ್ನು ಉಪಯೋಗಿಸತೊಡಗಿದರು. ಆ ಕಾಲದ ದಬ್ಬಾಳಿಕೆ, ಕೊಲೆ, ಸುಲಿಗೆಗಳ ಮಧ್ಯದಲ್ಲಿ ನೆಮ್ಮದಿಯಿಲ್ಲದ ಕನ್ನಡ ನಾಡಿನಲ್ಲಿ ಸಾಹಿತ್ಯ ಹುಟ್ಟುವುದೂ ಅಭಿವೃದ್ಧಿಹೊಂದುವುದೂ ಕಠಕಷ್ಟವಾಗಿದ್ದಿತು. ಮೈಸೂರೊಡೆಯರ ಆಶ್ರಯದಲ್ಲಿ ಕನ್ನಡಸಾಹಿತ್ಯ ಚೇತರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರೂ ಒಟ್ಟಿನಲ್ಲಿ ಕನ್ನಡಸಾಹಿತ್ಯಚರಿತ್ರೆಯಲ್ಲಿ ಈ ಯುಗವನ್ನು ಕಗ್ಗತ್ತಲೆಯ ಕಾಲವೆಂದೇ ಕರೆಯಬೇಕಾಗುತ್ತದೆ.

ಈ ಕಗ್ಗತ್ತಲೆಯಲ್ಲಿಯೇ ಕೆಲವು ಕವಿಗಳು ಜನಿಸಿ ನಮ್ಮ ಸಾಹಿತ್ಯಪರಂಪರೆಯನ್ನು ಮುಂದುವರಿಸಲು ಹೆಣಗಿರುವರು. ಕ್ರಿ. ಶ. ೧೭೯೪-೧೮೬೮ ರ ವರೆಗೆ ಆಳಿದ ಮುಮ್ಮಡಿಕೃಷ್ಣರಾಜರು ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಪಂಡಿತರಾಗಿ ಸುಮಾರು ೫೦ ರಷ್ಟು ಗ್ರಂಥಗಳನ್ನು ಬರೆದಿರುವರು. ಅಳಿಯ ಲಿಂಗರಾಜರೂ (೧೮೨೩-೧೮೭೪) ೪೭ ರಷ್ಟು ಗ್ರಂಥಗಳನ್ನು ರಚಿಸಿದುದು ಸುಪ್ರಸಿದ್ಧವಿದೆ. ಈ ಕಾಲದಲ್ಲಿ ಒಡೆದು ಕಾಣುವ ವ್ಯಕ್ತಿಗಳೆಂದರೆ ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಮತ್ತು ನಂದಳಿಕೆ ಲಕ್ಷ್ಮೀನಾರಣಪ್ಪ (ಮುದ್ದಣ). ಸಂಸ್ಕೃತಗ್ರಂಥಗಳನ್ನು ಕನ್ನಡಿಸುವುದೊಂದು ಈ ಯುಗದ ವೈಶಿಷ್ಟ್ಯವಾಗಿದ್ದಿತು. ಶಾಕುಂತಲ, ಮುದ್ರಾಮಂಜೂಷದಂತಹ ಗ್ರಂಥಗಳನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು ಸ್ವತಂತ್ರಗ್ರಂಥಗಳೂ ಕೂಡ ಮೂಲ ಸಂಸ್ಕೃತಗ್ರಂಥಗಳಿಂದ ಸ್ಫುರಣಗೊಂಡ ಕಾಲವದು. ನಾಡಿನ ಜನತೆಯಲ್ಲಿ ಶಕ್ತಿಗುಂದಿದ ಕಾಲದಲ್ಲಿ ಹೀಗಾಗುವುದು ಸಹಜವಾಗಿದೆ. ಬಸವ ಕವಿಯು ಬಾಳಿ ಬೆಳಗಿದುದು ಈ ಹಿನ್ನಲೆಯಲ್ಲಿ. ಆತನು ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಪಾಂಡಿತ್ಯ ಗಳಿಸಿದ್ದರೂ ಸಂಸ್ಕೃತ ಗ್ರಂಥಗಳನ್ನು ಅನುವಾದಿಸುವ ಕಾರ್ಯಕ್ಕೆ ಕೈಹಾಕಲಿಲ್ಲ. ಶಕ್ತಿಯುತನಾದ ಕವಿಯಾಗಿ ಸುಂದರವಾದ ಶೈಲಿಯಿಂದ ಈ ನಾಡಿನಲ್ಲಿ ಬಾಳಿ ಭಕ್ತರನ್ನುದ್ಧರಿಸಿದ ಪುಣ್ಯ ಪುರುಷರ ಜೀವನಚರಿತೆಯನ್ನು ಸ್ವತಂತ್ರಕಾವ್ಯದಲ್ಲಿ ಪಡಿಮೂಡಿಸಿ ನಮ್ಮಸಾಹಿತ್ಯಪರಂಪರೆಯನ್ನು ಮುಂದುವರಿಸಿರುವನು. ಅವನು ಸಾಂಪ್ರದಾಯಿಕ ಕವಿಯೆಂಬುದು ನಿಜ; ಆದರೆ ಶಕ್ತಿಯುತನಾದ ಸತ್ಕವಿಯಾಗಿರುವನು. ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡವನ್ನುದ್ಧರಿಸಿದ ಪುಣ್ಯಕವಿಗಳಲ್ಲಿ ಈತನೂ ಒಬ್ಬನೆಂಬುದರಲ್ಲಿ ಆವ ಸಂದೇಹವೂ ಇಲ್ಲ.

**

# ಕೊನೆಯ ಮಾತು

ಮಹಲಿಂಗಲೀಲೆಯ ಸಂಪಾದನೆಯ ಕಾರ್ಯವನ್ನು ಎರಡು ಹಸ್ತಪ್ರತಿಗಳ ಆಧಾರದಿಂದ ಮಾಡಲಾಗಿದೆ. ಕವಿ ಇತ್ತೀಚಿನವನಾದರೂ ಒಳ್ಳೆಯ ಶುದ್ಧವಾದ ಪ್ರತಿಯನ್ನು ದೊರಕಿಸುವುದು ಸಾಧ್ಯವಾಗಲಿಲ್ಲ. ಅಶುದ್ಧಪ್ರತಿಗಳೂ ಹೆಚ್ಚಾಗಿ ದೊರೆಯಲಿಲ್ಲ. ಆದುದರಿಂದ ತೀರ ಅಶುದ್ಧವಾದ ಎರಡೇ ಎರಡು ಪ್ರತಿಗಳ ಆಧಾರದಿಂದ ಈ ಗ್ರಂಥವನ್ನು ಸಂಪಾದಿಸಲಾಗಿದೆ. ಎಡೆವಾಯ್ದು ಬಂದ ತಪ್ಪನ್ನು ಸಹೃದಯರು ಸಹಾನುಭೂತಿಯಿಂದ ತಿದ್ದಿಕೊಳ್ಳಬೇಕೆಂದು ಪ್ರಾರ್ಥನೆ.

ಧಾರವಾಡದ ಮುರಘಾಮಠವನ್ನು ಆಧುನಿಕ "ಅನುಭವಮಂಟಪ"ವೆಂದು ಕರೆದರೆ ಅತಿಶಯೋಕ್ತಿಯಲ್ಲ. ಪರಮ ತಪಸ್ವಿಗಳಾದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಮೃತ್ಯುಂಜಯ ಮಹಾಸ್ವಾಮಿಗಳವರ ಆಶೀರ್ವಾದ ಆಶ್ರಯಗಳಿಂದ ಕನ್ನಡಸಾಹಿತ್ಯದ ಉತ್ತಮೋತ್ತಮ ಕೃತಿಗಳು ಬೆಳಕುಕಾಣಹತ್ತಿವೆ. ಪ್ರಸ್ತುತ ಗ್ರಂಥವೂ ಶ್ರೀಗಳವರ ಅಪ್ಪಣೆ, ಆಶೀರ್ವಾದಗಳಿಂದಲೇ ಪ್ರಕಟವಾಗುತ್ತಿದೆ. ಈ ಮಂಗಲ ಕಾರ್ಯಕ್ಕೆ ಪ್ರೇರಣೆಯನ್ನಿತ್ತು ಆಶೀರ್ವದಿಸಿದ ಶ್ರೀಗಳವರ ದಿವ್ಯ ಸನ್ನಿಧಿಗೆ ಭಕ್ತಿಪುರಸ್ಸರ ಪ್ರಣತಿಗಳು.

ಧಾರವಾಡದ ಸರಕಾರಿ ಟ್ರೇನಿಂಗ ಕಾಲೇಜದ ಪ್ರ್ಯಾಕ್ಟೀಸಿಂಗಸ್ಕೂಲಿನ ನಿವೃತ್ತ ಹೆಡ್‌ಮಾಸ್ತರರಾದ ಶ್ರೀ ಕೆ. ಎಸ್. ಪಾಟೀಲರು ಅಂದವಾದ ಅಕ್ಷರ ಗಳಿಂದ ಪ್ರಾಚೀನ ಕಾವ್ಯಗಳ ಅಚ್ಚಿನ ಪ್ರತಿಗಳನ್ನು ಸಿದ್ಧಪಡಿಸುವಲ್ಲಿ ಸುಪ್ರಸಿದ್ಧ ರಾಗಿರುವರು. ಈ ಕಾವ್ಯದ ಅಚ್ಚಿನಪ್ರತಿ ಸಿದ್ಧಪಡಿಸುವಲ್ಲಿಯೂ ಬೇರೆ ದೃಷ್ಟಿ ಯಿಂದಲೂ ಅವರು ನೀಡಿದ ಸಹಾಯಕ್ಕಾಗಿ ಅವರನ್ನು ಆದರದಿಂದ ಸ್ಮರಿಸುತ್ತೇನೆ. ಅಲ್ಪಾವಧಿಯಲ್ಲಿಯೇ ಆಸ್ಥೆವಹಿಸಿ ಮುದ್ರಣಕಾರ್ಯವನ್ನು ಶ್ರದ್ಧೆಯಿಂದ ನೆರವೇರಿ ಸಿದ ಧಾರವಾಡದ ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯರಾದ ಶ್ರೀ ಬಿಳಗಿ ಬಂಧು ಗಳಿಗೆ ಕೃತಜ್ಞತೆಗಳು.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಫೆಬ್ರುವರಿ ೭, ೧೯೫೪

ಆರ್. ಸಿ. ಹಿರೇಮಠ

ಮುಧೋಳ ಸರಕಾರದ ನಾರಾಯಣರಾವ ಘೋರ್ಪಡೆಯವರು ಕೊಟ್ಟ
‘ ಮಹಾಲಿಂಗೇಶ್ವರ ಸ್ವಾಮೀಚೇ ಸೇವೇಸ್ ’ ಎಂಬ ಸನದು

ಈ ಸನದುಗಳು ಮಹಲಿಂಗ ಮುನಿನಾಥನು ಅತ್ಯಂತ ಪ್ರಭಾವಶಾಲಿಯಾಗಿದ್ದನೆಂಬುದರ ಕುರುಹುಗಳಾಗಿವೆ. ವಿಜಾಪುರದ ಇಬ್ರಾಹಿಮ ಬಾದಶಹನು ಕ್ರಿ. ಶ. ೧೭೫೦ ರಲ್ಲಿ ಮಹಲಿಂಗಮುನಿನಾಥನಿಗೆ ಹಾಕಿಕೊಟ್ಟ ಸನದೊಂದಿದೆ. ಕ್ರಿ. ಶ. ೧೭೯೩ ರಲ್ಲಿ ಮುಧೋಳ ಘೋರ್ಪಡೆ ಮನೆತನದ ರಾಜನಾದ ನಾರಾಯಣರಾಯನು ಕೊಟ್ಟ ಸನದಿನಲ್ಲಿ ಕೆಲವು ಮಹತ್ವದ ಸಂಗತಿಗಳ ಉಲ್ಲೇಖವಿದೆ. ಇತಿಹಾಸ ಸಮಾಜಶಾಸ್ತ್ರಜಿಜ್ಞಾಸುಗಳ ಅವಗಾಹನೆಗಾಗಿ ಅವನ್ನಿಲ್ಲಿ ವಿವರಿಸಲಾಗಿದೆ.

ಮಹಲಿಂಗಪುರದ ಸರ್ವಹಕ್ಕು, ವೀರಶೈವರ ಲಿಂಗಧಾರಣೆ ಮೊದಲುಮಾಡಿ ಅಂತ್ಯದ ವರೆಗೆ ಆಗುವ ಎಲ್ಲ ಸಂಸ್ಕಾರಗಳನ್ನು ಮಾಡುವ ಹಕ್ಕು, ಸರ್ವರ ದೀಕ್ಷಾಮೋಕ್ಷ ಕಾರ್ಯದ ಹಕ್ಕು, ತಪ್ಪು ಮಾಡಿದವರಿಂದ ಅಪರಾಧದ ಕಾಣಿಕೆಯನ್ನು ಪಡೆಯುವ ಹಕ್ಕು, ನಷ್ಟಸಂತತಿಯಾದವರ ಆಸ್ತಿಯನ್ನು ಪಡೆಯುವ ಹಕ್ಕು ಇವೆಲ್ಲ ಮಹಾಲಿಂಗಪುರದ ಮಹಾಲಿಂಗೇಶ್ವರ ಮಠಕ್ಕಿವೆ.

(೨) ಪಂಚಾಚಾರದ ಈ ಹಕ್ಕುಗಳನ್ನು ಮಠದವರು ಕೆಳಗೆ ಕಾಣಿಸಿದಂತೆ ತೆಗೆದ ಕೊಳ್ಳಬೇಕು.

| | |
|---|---|
| ಲಿಂಗಧಾರಣೆಗೆ : | ಗಂಡುಹುಟ್ಟಿದರೆ ೧೦ ದುಡ್ಡು<br>ಹೆಣ್ಣುಹುಟ್ಟಿದರೆ ೫ ದುಡ್ಡು |
| ದೀಕ್ಷಾವಿಧಾನಕ್ಕೆ : | ರೂ. ೧ - ೫ - ೦ |
| ಗುಗ್ಗುಳಕ್ಕೆ : | ೧ ತೆಂಗಿನಕಾಯಿ, ೩೫ ಬಾಳೆಯ ಹಣ್ಣು ರೂ. ೨ - ೧೨ - ೦ |
| ಲಗ್ನಕ್ಕೆ : | ೧ - ೧೦ - ೦ |
| ಪುನರ್ವಿವಾಹಕ್ಕೆ : | ೧ - ೬ - ೦ |
| ಬಿಡುಗಡೆಯ (ಸೋಡ) ಪತ್ರಕ್ಕೆ : | ೧ - ೦ - ೦ |
| ಸಮಾಧಿಗೆ : | ೮ ಮೊಳ ಅರಿವೆ |

ಈ ಸನದು ಮೊದಲಾದವುಗಳ ಆಧಾರದಿಂದ ತಿಳಿದು ಬರುವ ಮಹಲಿಂಗಮುನಿನಾಥನ ಮಠದ ಗುರುಪರಂಪರೆ ಮತ್ತು ಆಯಾಗುರುಗಳ ಕಾಲ.

| | | |
|---|---|---|
| ೧ | ಶ್ರೀ ಮಹಲಿಂಗ ಸ್ವಾಮಿಗಳು | ಕ್ರಿ. ಶ. ಸು. ೧೭೫೦ |
| ೨ | ಶ್ರೀ ಮುರಗಿ ಮಹಾರುದ್ರ ಸ್ವಾಮಿಗಳು | ಕ್ರಿ. ಶ. ಸು. ೧೭೯೩ |
| ೩ | ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು | ಕ್ರಿ. ಶ. ಸು. ೧೮೫೫ |
| ೪ | ಶ್ರೀ ಮಹಾಲಿಂಗ ಸ್ವಾಮಿಗಳು | ಕ್ರಿ. ಶ. ಸು. ೧೮೬೫ |
| ೫ | ಶ್ರೀ ಬಸವಲಿಂಗ ಸ್ವಾಮಿಗಳು | ಕ್ರಿ. ಶ. ಸು. ೧೮೭೪-೧೯೩೬ |
| ೬ | ಶ್ರೀ ಗುರುಲಿಂಗ ಸ್ವಾಮಿಗಳು (ಈಗ ಇರುವವರು) | ಕ್ರಿ. ಶ. ಸು. ೧೯೩೬ ರಿಂದ |

## ‘ ಮಹಲಿಂಗಲೀಲೆ ’ ಯು ಸಂಸ್ಕರಣಕ್ಕಾಗಿ ಬಳಸಿದ ಮಾತೃಕೆಗಳು

| ಮಾತೃಕೆ | | ಸಂಕೇತ |
|---|---|---|
| ೧ | ಕೈಬರೆಹದ ಹಳೆಯ ಕಾಗದದ ಪ್ರತಿ | ಕ. |
| ೨ | ಕೈಬರೆಹದ ಹೊಸ ಕಾಗದದ ಪ್ರತಿ | ಚ. |

## ಪ್ರಸ್ತಾವನೆಯಲ್ಲಿ ಬಂದ ಸಂಕೇತಗಳು

| | |
|---|---|
| ಮ. ಲೀ. | ಮಹಲಿಂಗಲೀಲೆ |
| ದು. ಜಂ. ಲೀ. | ದುರದುಂಡಿ ಜಂಗಮಲೀಲೆ |
| ಕ. ಚ. | ಕರ್ನಾಟಕ ಕವಿಚರಿತೆ |

# ಮಹಲಿಂಗಲೀಲೆ

## ಕಥಾ ಸಾರ

## ಮೊದಲನೆಯ ಸಂಧಿ

ಯೋಗಿಜನರ ಮನಸ್ಸಿನಲ್ಲಿ ವಾಸವಮಾಡಿದವನೂ ಭೋಗಿವರನನ್ನು ಕೊರಳಲ್ಲಿ ಧರಿಸಿದವನೂ ಆದ ಶಿವಸಮರೂಪ ಶ್ರೀ ಚೆನವೀರೇಶನು ಮೂಲೋಕವನ್ನು ಪಾಲಿಸಲಿ. ಗಂಗಾಧರನೂ ಗಜಾಸುರಗರ್ವಹರನೂ ಆದ ಪರಶಿವನನ್ನು ಪ್ರೇಮದಿಂದ ಬಣ್ಣಿಸಿ ಮುಕ್ತಿಯನ್ನು ಪಡೆವೆನು. ಕನಕಮಯಗಾತ್ರೆಯೂ ವಿಬುಧನುತಿಪಾತ್ರೆಯೂ ಆದ ಪಾರ್ವತಿಯನ್ನು ಭಕ್ತಿಯಿಂದ ಪ್ರಾರ್ಥಿಸುವೆನು. ಸಕಲಗಣನಾಯಕನೂ, ಸಿದ್ಧಿಪ್ರದಾಯಕನೂ, ಸುಕರ ವಿದ್ಯಾಧಿಪನೂ ಆದ ಪರಮಶಂಕರಸುತ ( ವಿಘ್ನೇಶ ) ನನ್ನು ಭಕ್ತಿಯಿಂದ ಬಣ್ಣಿಸಿ ಮುಕ್ತಿಯನ್ನು ಪಡೆವೆನು. ತಾರಕಾಸುರಗರ್ವಹಾರನೂ, ಕ್ರೌಂಚಾಚಲವಿದಾರನೂ, ಶ್ರವಣಾನದೀಜಾತನೂ ಆದ ಷಣ್ಮುಖನನ್ನು ಕೀರ್ತಿಸುವೆನು. ಪ್ರಮಥಾಳಿಹರ್ಷಾಬ್ಧಿವರ್ಧನಸುಧಾಕರರೂಪನೂ, ಶರಣಜನದುರಿತಜಲದಾಳಿಝುಂಝಾನಿಲನೂ, ಗುರು

ಲಿಂಗಜಂಗಮದ ಭಕ್ತಿಸಂಪತ್ಕರನೂ ಆದ ಶರಣ ವೃಷಭೇಶ್ವರನ ಪಾದವನ್ನು ಕೀರ್ತಿಸಿ ಪರಮಾರ್ಥವನ್ನು ಪಡೆವೆನು. ಷಟ್‌ಸ್ಥಲಲೋಲನೂ, ಪರಮಪುಣ್ಯ ಪ್ರಕಾಶನೂ ಆದ ಶ್ರೀಚೆನ್ನಬಸವೇಶನಡಿಗೆರಗಿ ಈ ಕಾವ್ಯವನ್ನು ನಿರ್ಮಿಸುವೆನು. ದಕ್ಷಮದಗಜಕುಂಭಹರ್ಯಕ್ಷನೂ, ಕಾಲಾನಲವಿಪಕ್ಷನೂ ಆದ ವೀರೇಶ್ವರನು ನಮ್ಮನ್ನು ರಕ್ಷಿಸಲಿ. ನಿರುಪಮ, ನಿರಾಲಂಬ, ನಿಗಮಾಗಮಾತೀತ, ನಿರವಯ, ನಿಜಾನಂದ, ನಿತ್ಯಚಿತ್ಸುಖದಾತ, ನಿರುಪಾಧಿ, ನಿರ್ಭಯ, ಎಂಬ ವಿಶೇಷಣಗಳುಳ್ಳ ಶ್ರೀ ಪ್ರಭುರಾಯನು ಪರಮಾರ್ಥವನ್ನು ಪಾಲಿಸಲಿ. ನಾಟಕದಲಂಕಾರಲೀಲೆ ಯಿಂದ ಪರಮಾತ್ಮನನ್ನು ಮೆಚ್ಚಿಸಿದ ಭೃಂಗೀಶ, ಅದೇ ಪರಮಾತ್ಮನನ್ನು ತಮ್ಮ ತಮ್ಮ ಭಕ್ತಿವಿಶಿಷ್ಟಕೃತಿಗಳಿಂದ ಮೆಚ್ಚಿಸಿದ ಶ್ರೀಶರಣರು, ಪ್ರಮಥರು ಇವರೆಲ್ಲರನ್ನು ಪ್ರಾರ್ಥಿಸಿ ಮಹಲಿಂಗಲೀಲೆಯನ್ನು ನಿರ್ಮಿಸುವೆನು.

ಶಿವಭಕ್ತಿಗೆ ಪ್ರಾಣನೆನಿಸಿದ ಪರಮಕವಿ ಬಾಣ, ಭವಜಲಧಿದೂರನೆನಿಸಿದ ಕವಿಚಂದ್ರಮಯೂರ, ಕವಿತಾಬ್ಧಿರಾಜನೆನಿಸಿದ ಮಲಯರಾಜ, ಭವಮಾರ್ಗನಾಶ ನಾದ ಅಸಮಕವಿ ಕೇಶಿರಾಜ, ನವಸುಗುಣವಾಸನಾದ ಕಾಳಿದಾಸ ಇವರನ್ನು ಭಕ್ತಿ ಯಿಂದ ಧ್ಯಾನಿಸುವೆನು. ಪರಮಸುಖಧಾಮನಾದ ಪಾಲ್ಕುರಿಕೆ ಸೋಮನಾಥ, ಶರಣಜನಪ್ರೇಮಿಯಾದ ಭೀಮಕವಿ, ಶಿವಸ್ತೋತ್ರಧುರ್ಯನೆನಿಸಿದ ಹರಿಹರಾ ಚಾರ್ಯ, ಶ್ರೀಪಂಡಿತಾರಾಧ್ಯ, ಮಲ್ಹಣಾರ್ಯ, ಪರಮಕವಿ ಭೋಜ, ಹರಕಾವ್ಯ ಜೀವನೆನಿಸಿದ ಷಡ್ವರ್ಣ (ಷಡಕ್ಷರ) ದೇವ ಇವರನ್ನು ಭಜಿಸಿ ಈ ಕಾರ್ಯವನ್ನು ನೆರವೇರಿಸುವೆನು.

ಗುರುಕುಲಾಂಬೋಧಿವರ್ಧನಚಂದ್ರನೂ, ಪರಮಪಾವನಶೀಲನೂ ಆದ ವೋದಪುರದ ವದ್ದಾನಿ ಮಡಿವಳ ತಂದೆ ಈ ಕೃತಿಯನ್ನು ಪಾಲಿಸಲಿ. ಬ್ರಹ್ಮಾಂಡದಲ್ಲಿ ಸಂಪೂಜ್ಯನೆನಿಸಿದ ಕಂತುಮದಮರ್ದನ ಮಹಾಲಿಂಗಜಂಗಮದ ಅನಂತ ಮಹಿಮೆಯ ಪೇಳ್ವುದೆನಗೆ ಅರಿದು; ಬಲ್ಲನಿತು ಪೇಳುವೆನು. ಸಕಲ ಭಕ್ತೋತ್ತಮರು ಇದನ್ನು ಲಾಲಿಸಬೇಕು. " ಪರಮಕವಿಪಾದಪಂಕೇಜ ಷಟ್ಪದನೆನಿಸುವ ಶಿವಭಕ್ತ ಬಸವಕುಮಾರನೇ ಕೇಳು ನಿಮ್ಮ ಪಿತಾಮಹರೆಲ್ಲ ಕರ್ನಾಟಶಾಸ್ತ್ರಕೋವಿದರೆನಿಸಿ ಮೆರೆದರು. ಆ ಸುಕುಲಾಬ್ಧಿಚಂದ್ರನಂತಿದ್ದ ನೀನು ಸಂತೋಷದಿಂದ ಮಹಲಿಂಗಲೀಲೆಯನ್ನು ಪೇಳ್ದು ಪಾಲಿಸುವುದು. ನಿನಗೆ ಷೋಡ ಶಾಬ್ದದಲ್ಲಿ ಸೋಲೂರ ಶ್ರೀಚೆನ್ನವೀರೇಶ್ವರನ ಕರುಣದಿಂದ ಶಾಸ್ತ್ರಾಂಗನೆಯು ಒಲಿದಿರುವಳು. ಆಕೆ ನಾನಾ ವಚನ ರಚನೆಯನ್ನು ತಿಳಿಸಿ ಕವಿತಾಂಗನೆಯನ್ನು ನಿನ್ನ ಕೈಗಿತ್ತಿಹಳು. ಆ ಕವಿತಾಂಗನೆ ನಿಮ್ಮ ಮುಗ್ಧಭಾವಕ್ಕೆ ಸೋತು ಮೋಹಿ

ಸಿರುವಳು." ಎಂದು ಭಕ್ತಜನ ಕೊಂಡಾಡುತ್ತಿರಲು ಮಹಲಿಂಗಲೀಲೆಯನ್ನು ನಿರ್ಮಿಸಿದೆನು. ಸಂಧಿ ಬಂಧಗಳಲ್ಲಿ ತಪ್ಪಿದ್ದರೆ ನಾನು ನಿಮ್ಮ ಕಂದನೆಂದು ಕಾರುಣ್ಯದಿಂದ ಮಮಕರಿಸಿ ಕರ್ನಾಟಕವಿಪುಂಗವರು ಇದನ್ನು ತಿದ್ದುವುದು. ರಾಮದುರ್ಗದ ವೀರಮಾಹೇಶ್ವರರಾದ ಸಂಗನಬಸವರು ಮಹಲಿಂಗಲೀಲೆಯನ್ನು ಭಾಮಿನೀಷಟ್ಪದಿಯಲ್ಲಿ ರಚಿಸಿರುವರು. ಆ ಮಹಿಮರ ಮಾರ್ಗವನ್ನನುಸರಿಸಿ ವಾರ್ಧಿಕ ಷಟ್ಪದಿಗಳಲ್ಲಿ ಈ ಮಹಲಿಂಗಲೀಲೆಯನ್ನು ರಚಿಸಿರುವೆನು. ಶಿವಭಕ್ತರು ಇದನ್ನು ಲಾಲಿಸಬೇಕು. ಮಾರುತೋಪದ್ರವದ ರೋಗದಿಂದ ನಾನು ಪೀಡಿತನಾಗಿರಲು ಜೀರಕಾವ್ಯತಮಠಾಧೀಶರಾದ ಶಿವರುದ್ರ ಮಾಹೇಶ್ವರರು " ಮಹಲಿಂಗಲೀಲೆಯನ್ನು ನಿರ್ಮಿಸಿದರೆ ಈ ನಿನ್ನ ರೋಗ ನಿವಾರಣೆಯಾಗುವದು." ಎಂದು ಸೂಚಿಸಿದರು. ಭಕ್ತಿಯಿಂದ ನಾನು ಈ ಕಾವ್ಯವನ್ನು ಪ್ರಾರಂಭಿಸಿದೆನು. ಭಕ್ತೋತ್ತಮರು ಲಾಲಿಸುವುದು.

ಜಾರ-ಚೋರರ ಭಯದಿಂದ ಚಂದ್ರನು ತನ್ನ ಕಿರಣ ಪಸರಿಸುವುದನ್ನು ಬಿಡುವನೇ ? ಕತ್ತಲೆ ಗೂಗೆಗಳ ಭಯದಿಂದ ಸೂರ್ಯನು ತನ್ನ ತೇಜ ಬೀರುವದನ್ನು ಬಿಡುವನೇ ? ಕ್ರೂರಮನಸ್ಕರಾದ ಕುಜನರು ಅವಿಚಾರದಿಂದ ನಿಂದಿಸುವರೆಂದು ಕವಿಗಳು ರಸವತ್ಕವಿತೆ ನಿರ್ಮಿಸುವುದನ್ನು ಬಿಡುವರೇ ? ರೋಗಿ ಪರಮಾನ್ನವನ್ನೂ, ಗೂಗೆ ಸೂರ್ಯನನ್ನೂ, ತ್ಯಾಗಿ ರಸಿಕತ್ವವನ್ನೂ, ಕಾಗೆ ಪಕ್ವಫಲಸಾರವನ್ನೂ ಸವಿದು ತಣಿಯಬಲ್ಲುವೇ ? ಸತ್ಕಾವ್ಯದರ್ಥವನ್ನು ಮತಿಹೀನ ಮಾನವರು ಅರಿಯಬಲ್ಲರೇ ? ಚಂದ್ರಕಾಂತ ಶಿಲೆ, ಕಮಲದ ಮೊಗ್ಗೆ, ಚಕೋರಗಳು ಹುಣ್ಣಿವೆಯ ಚಂದ್ರನನ್ನು ಕಂಡು ಅನುಕ್ರಮವಾಗಿ ಕರಗಿ, ಅರಳಿ, ನಲಿದಾಡುವಂತೆ ಉಳಿದ ಕಲ್ಲು, ಪುಷ್ಪ, ಪಕ್ಷಿಗಳು ನಲಿಯದಿದ್ದರೆ ಚಂದ್ರನಿಗದೇನು ಕುಂದೇ ? ದುರ್ಜನರು ಮಾತ್ಸರ್ಯದಿಂದ ಬಂಧುರವಾದ ಸಂಸ್ಕೃತಿಯ ಸವಿಯನ್ನು ತಿಳಿಯದಿದ್ದರೆ ಸತ್ಕವಿಗೇನು ಹಾನಿಯೇ ? ಅಲಂಕಾರಗಳ ಸಮೂಹದಿಂದ ತುಂಬಿ, ಸ್ಮೃತಿವಿಭ್ರಮದ ಭಾವಂಗಳಿಂದೊಡಗೂಡಿ, ಲಲಿತಪದಗತಿರೀತಿವಿಡಿದು, ನಿರಂತರ ಮುಕ್ತಾಸುಮಾಲಂಗಳಿಂದ ಶೃಂಗಾರಾದಿ ರಸಗಳನ್ನು ಬೀರುತ್ತ ಮತ್ಕಾವ್ಯಕನ್ನಿಕೆಯು ಸದ್ರಸಿಕರ ಹೃದಯಮಂಟಪದಲ್ಲಿ ನರ್ತಿಸದಿಹಳೇ ?

ಮಹಾಲಿಂಗಲೀಲೆಗೆ ಮೊದಲು ಮುನ್ನೀರವರ್ಣನೆ— ದೃಢದಿಂದೆ ನಡೆವ ಹಡಗದ ಬೆಡಗು, ಎಡಬಲದೊಳೋಲೈಪ ಮೇಘದ ರಾಗ, ತಡಿವಿಡಿದು ಸಂಚರಿಪ ದಂತಿಯ ಕಾಂತಿ, ಇಡಿಕಿರಿವ ಪೆರ್ದೊರೆ ಇವೇ ಮೊದಲಾದವುಗಳಿಂದ ಕಡಲು ಕಡುರಮ್ಯವಾಗಿಹುದು. 'ಚಂದ್ರ, ಲಕ್ಷ್ಮಿ, ಐರಾವತ ಮೊದಲಾದ ವಸ್ತುನಿಕರವು

ನನ್ನ ದೇಹದಲ್ಲಿ ಜನಿಸಿ, ಸ್ವರ್ಗಾದಿ ಲೋಕಂಗಳಲ್ಲಿ ದೇವ, ದಾನವ ಮಾನವರಿಗೆ ಹಿತಕರವಾಗಿ ಮೆರೆವುದು' ಎಂದು ಉಲಿದು ಪೇಳ್ವಂತೆ ಸಮುದ್ರವು ಭೋರ್ಗರೆಯುತ್ತಿರುವುದು. ಇಂತಹ ಸಾಗರದ ಮಧ್ಯದಲ್ಲಿ ಬಾಲರವಿಯ ಕಾಂತಿಯನ್ನು ಕೀಳ್ಪಡಿಪ ಹೇಮಾದ್ರಿಯು ಮೆರೆಯುತ್ತಿರುವುದು. ಆ ಪರ್ವತದ ತುದಿಯ ತಾರಾಗಣವನ್ನು ಕಂಡು ಅಮರಾಂಗನೆಯರು ಭ್ರಾಂತಿಯಿಂದ ಮುತ್ತೆಂದು ಪಿಡಿವರು.

**

# ಎರಡನೆಯ ಸಂಧಿ

ಇಂತಪ್ಪ ಹೇಮಾದ್ರಿಯಲ್ಲಿ ಅಂಬರಾಂಗನೆಯ ಸೀಮಂತರತ್ನವೆಂಬಂತೆ ಶಿವ ಪುರವು ಕಣ್ಗೆ ಮಂಗಲಕರವಾಗಿರುವುದು. ಆ ಶಿವಪುರದಲ್ಲಿ ಪರಶಿವನ ಮಹಾ ಮಂದಿರವು ಆಗಮಂಗಳ ಮಹಾಭಿತ್ತಿ, ವೇದಗಳ ಬಾಗಿಲು, ಉಪನಿಷತ್ತಿನ ತೆನೆ, ಯೋಗಗಳ ಸೌಧ, ಪುರಾಣಗಳ ಆಳ್ವೇರಿ, ಶ್ರುತಿಗಳ ಧ್ವಜ ಇವುಗಳಿಂದ ಕಣ್ಣಿಗೆ ಶಿವಮಯವಾಗಿರುವದು. ಆ ಮಂದಿರದ ಮಧ್ಯದಲ್ಲಿ ಶಿವನ ಸಭಾಸ್ಥಾನವು ಅನಂತ ಶತಕೋಟಿಸೂರ್ಯಕಾಂತಿಯಿಂದ ಕಂಗೊಳಿಸುವುದು. ಆ ಸಭಾಮಂಟಪದ ಮಧ್ಯಪ್ರದೇಶದಲ್ಲಿ ನಭೇಶಧರನು ಮೂರ್ತಿಸುವ ಪರಮ ಸಿಂಹಾಸನವು ಪ್ರಣಮ ದಾಕಾರದಿಂದ ತನ್ನೊಳಗೆ ಸೂರ್ಯ-ಚಂದ್ರರ ಕಾಂತಿಯನ್ನು ಪ್ರಕಟಿಸುತ್ತ ಸುಂದರ ವಾಗಿರುವುದು. ನಿರುಪಮ, ನಿರಾಧಾರ, ನಿರ್ಗುಣ, ನಿಜಾನಂದ, ನಿರ್ಭೇದ್ಯನೆಂದೆನಿ ಸುವ ಪರಮೇಶನು ಆ ಸಿಂಹಪೀಠದಲ್ಲಿ ಗಿರಿಜಾತೆಯೊಡನೆ ಶೋಭಿಸುತ್ತಿರುವನು. ಆ ಸಭಾಸ್ಥಾನದಲ್ಲಿ ಕುಲಗಿರಿಗಳನ್ನು ಆಣೆಕಲ್ಲಾಗಿ ಆಡುವ, ಆದಿಶೇಷನನ್ನು ಕಟಿ ಸೂತ್ರವನ್ನಾಗಿ ಮಾಡಿಕೊಳ್ಳುವ, ಕಾಲನನ್ನು ಸದೆಯುವ, ಭೂಗಗನಗಳನ್ನು ಕೈತಾಳ ಮಾಡುವ, ಜಲಧಿಗಳನ್ನು ಹೀರುವ, ಕಾಲಾಗ್ನಿಯನ್ನು ತಿಕ್ಕಿ ತಿಲಕ ಮಾಡಿ ಕೊಳ್ಳುವ ತಾರಾಳಿಯನ್ನು ಪೂಮಾಲೆಯಂತೆ ತಲೆಯೊಳಗೆ ಧರಿಸುವ ಮಹಾರುದ್ರ ಪುಂಗವರು ಮೆರೆದಿರ್ದರು. ಅನೇಕ ಮುಖ, ಅನೇಕ ಬಾಹುಗಳುಳ್ಳ ವಿಚಿತ್ರ ತೆರನಾದ ಪ್ರಮಥಾಳಿ, ಲಕ್ಷ್ಮೀಕಾಂತ ಹಾಗು ಬ್ರಹ್ಮಾದಿಗಳು, ಇಂದ್ರರು, ದಿಕ್ಪಾಲ ಕರು ಸೂರ್ಯಚಂದ್ರರು, ಯಕ್ಷ-ರಕ್ಷ-ಗರುಡ-ಗಂಧರ್ವಾದಿಗಳು ಅಲ್ಲಿ ಗಣನೆ ಮೀರಿ ನೆಲೆಸಿದುದನ್ನು ಆವ ಕವಿಯೂ ಬಣ್ಣಿಸಲಾರನು.

" ನಂದಿ ಮೊದಲಾದ ಪ್ರಮಥರೇ ಸುಮ್ಮನಿರಬೇಕು. ಮಹಾರುದ್ರಗಣರೇ ಮೂರ್ತಗೊಳ್ಳಬೇಕು. ಮಹಾಮುನಿಗಳೇ ಮೌನದಿಂದಿರಬೇಕು. " ಎಂದು ನಂದಿ-ಮಹಾಕಾಳರೆಂಬ ವೇತ್ರಧಾರಿಗಳು ಸಭಿಕರಿಗೆ ಕಣ್ಸನ್ನೆಯನ್ನು ಬೀರಿ ಘರ್ಜಿ ಸುವರು.

ಇಂತೆಸೆವ ಸಭಾಮಂಡಲಮಧ್ಯದಲ್ಲಿ ಭ್ರಾಂತಿಹರರೆನಿಸಿದ ಭೃಂಗೀಶ್ವರರು ಭರತಕಟ್ಟಳೆಗಳಿಗನುಸಾರವಾಗಿ ನರ್ತಿಸುತ್ತಿರುವರು. ಆ ಸಮಯದಲ್ಲಿ ಶತಕೋಟಿ

ಸೂರ್ಯರ ಪ್ರಭೆಯಂತೆ ಕಾಂತಿಯುತವಾದ ಕಾಯವುಳ್ಳ, ತ್ರೈಲೋಕ್ಯ ಸಂಚಾರಿಯಾದ ನಾರದಮುನಿಯು ಶಿವನ ಸಭೆಗೆ ಐತರುವನು. ಭಯಭಕ್ತಿಯಿಂದ ನಮಿಸಿ ಕೈಮುಗಿದು ಮಾರಾರಿಯನ್ನು ಕೊಂಡಾಡುವನು. ಮದನಾರಿ ನಾರದ ಮುನಿಯನ್ನು ಮುಂದಕ್ಕೆ ಕರೆದು ವೈದಡವಿ ಬಂದ ಕಾರ್ಯವೇನೆಂದು ಕೇಳು ವನು. ನಾರದನು " ದೇವದೇವಾ, ನಾನು ಕರ್ನಾಟಕ ದೇಶದಿಂದ ಬಂದೆನು. ಆ ನಾಡಿನಲ್ಲಿ ಪೂರ್ಣಾಮಲಜ್ಞಾನಿಗಳು ಕಣ್ಣಿಗೆ ಕಾಣಿಸದಂತಾಗಿರುವರು. ಗುರು ಲಿಂಗಜಂಗಮದ ಭಕ್ತಿ ಅಲ್ಲಿ ಬಾಯಿಬಿಡುತ್ತಿರುವುದು. ಇಳಾಕಾಂತೆ ಮರುಗು ತ್ತಿಹಳು. ಇದನ್ನು ಅವಧರಿಪುದು " ಎಂದು ಬಿನ್ನೈಸುವನು. " ನಿನ್ನ ಬಿನ್ನಪವು ನನಗೆ ನಲವಿತ್ತುದು " ಎಂದು ಪರಶಿವನು ನಾರದನಿಗೆ ನುಡಿದು ನಂದಿ ಮೊದಲಾ ದವರಿಗೆ ಹೀಗೆ ಅಪ್ಪಣೆ ಕೊಡಿಸಿದನು. " ನಾನು ಹಿಂದೆ ಪಂಚವಿಂಶತಿ ಲೀಲೆ ಗಳನ್ನು ಮೆರೆದಂತೆ ಇಂದು ನಾರದನ ಬಿನ್ನಹದಿಂದ ನಿರಘಜಂಗಮಲೀಲೆ ಯೊಂದನ್ನು ತೋರಬೇಕಾಗಿದೆ ". ಶಿವನ ಈ ಮಾತನ್ನು ಕೇಳಿ ಪಾರ್ವತಿಯು ಆ ನಿರಘಜಂಗಮದ ಮಹಿಮೆಯನ್ನು ಸರ್ವರೂ ಅರಿಯುವಂತೆ ನಿರೂಪಿಸಬೇ ಕೆಂದು ಪ್ರಾರ್ಥಿಸಿದಳು.

" ಪೃಥ್ವಿ ಮೊದಲಾದ ಪಂಚಭೂತಗಳು, ಸೋಮ-ರವಿ-ತಾರೆಗಳು, ಹೇಮ-ಗರ್ಭಾದಿ ಸುರ-ಮನು-ಮುನಿಗಳು, ಸಾಗರ-ಸಪ್ತದ್ವೀಪ-ಶೇಷ-ದಿಗ್ಗಜ-ಕುಲಪರ್ವತ ಬ್ರಹ್ಮ-ವಿಷ್ಣು-ರುದ್ರಾದಿಗಳು ಇವೇ ಮೊದಲಾದ ಸಕಲ ಸಚರಾಚರದ ಆಗು-ಹೋಗು, ತಾಗು-ಬಿಗುಹು ಇಲ್ಲದಂದು ಜಂಗಮವು ಎನ್ನ ಪ್ರಾಣಕ್ಕೆ ಚೇತನವಾಗಿ ದ್ದಿತು. ಆಗ ನನಗೆ ಪಂಚವಿಂಶತಿ ಲೀಲೆಗಳಿರಲಿಲ್ಲ. ಪಂಚಮುಖ, ಪಂಚದಶ ನೇತ್ರಗಳಿರಲಿಲ್ಲ. ಶತಕೋಟಿ ಮಿಂಚಿನ ಮಹಾಬೆಳಗಿನಿಂದ ಆದಿಯಲ್ಲಿ ನಾನಿದ್ದೆನು. ಆಗ ಸಂಚಿತಾದಿಗಳೇನೂ ಇಲ್ಲದ ಧರ್ಮರೂಪನಹ ನಂದೀಶನಂತರಂಗವೇ ನನಗೆ ಅಧಿಷ್ಠಾನ. ನಿರಘಜಂಗಮವೇ ಎನಗೆ ಶೂನ್ಯಕಾಯವಾಗಿದ್ದಿತು. ಮುಂದೆ ಬ್ರಹ್ಮಾಂಡಮಂಡಲಗಳನ್ನು ರಚಿಸುವ ಲೀಲೆಗಾಗಿ ನಾನು ಸಾಕಾರನಾದೆನು " ಎಂದು ಶಿವನು ಉಸುರಲು ಆ ನುಡಿಗೆ ಪಾರ್ವತಿಯು " ದೇವದೇವಾ, ವೃಷಭೇಶನ ಅಂತರಂಗದಲ್ಲಿರ್ಪ ಆ ಜಂಗಮವನ್ನು ಕಾಂಬ ಬಗೆಯೆಂತು ? " ಎಂದು ಕೇಳು ವಳು. ಇದು ಲೋಕ ಹಿತಕರವಾದ ಪ್ರಶ್ನೆಯೆಂದು ಶಿವನು ಶ್ರೀನಂದಿಕೇಶನ ವದನಾರವಿಂದವನ್ನು ನೋಡಲು ಆತನ ಹೃದಯವು ಅರಳಿ, ಸೋಮ-ಸೂರ್ಯರ ಪ್ರಕಾಶವನ್ನು ಕಡೆಗಣಿಸುವ ತೇಜದಿಂದ ನಿಷ್ಕಲಮಹಾತತ್ವಜಂಗಮವು ಸುಂದರ ಶರೀರವನಾಂತು ಮುಂದೆ ಬಂದು ನಿಲ್ಲುವದು. ಆ ವೀರಶೈವ ಷಟ್‌ಸ್ಥಲಬ್ರಹ್ಮ

ಜಂಗಮುವನ್ನು ಪರಶಿವನು ಮೈದಡವುತ್ತ "ನಾಮ-ರೂಪ-ಕ್ರಿಯೆಯಿಂದೊಡಗೂಡಿದ ನೀನೇ ನಮ್ಮ ಚೇತನ ಮೂರ್ತಿ" ಎಂದು ಕೊಂಡಾಡಿ ಮುಹಲಿಂಗನೆಂದೆಂಬ ನಾಮಕರಣಂಗೈದು "ಭೂತಳದಿ ನೀ ಹೋಗಿ, ತಾಮಸರ ಪರಿಹರಿಸಿ, ಶಿವಭಕ್ತರನು ಪೊರೆದು ಚರಲೀಲೆಯನ್ನು ನಟಿಸಬೇಕೆ" ಂದು ನುಡಿವನು. "ಅನ್ಯಮತಗಳ ಹಾವಳಿಯಿಂದ ತುಂಬಿದ ಆ ನಾಡಿನಲ್ಲಿ ಗುರು-ಲಿಂಗ-ಜಂಗಮ ಭಕ್ತಿಯನ್ನು ಪ್ರಕಟಿಸು. ದೇವ-ದಾನವ-ಮಾನವರು ಎನ್ನಾಜ್ಞೆಯೊಳಗಿಹರು. ನಾನು ನಿನ್ನಾಜ್ಞೆಯೊಳಗಿರುವೆನು" ಎಂದು ಅಪ್ಪಣೆ ಕೊಡಿಸಿದನು. "ಕರ್ಮದ ಕತ್ತಲೆವಿಡಿದ ಜಗವೆನಗೇಕೆ ಗಂಗಾಧರ, ವೃಷಭನಂತರಂಗವ ಬಿಟ್ಟು ಆ ಕರ್ಮಕಾಂಡದಲ್ಲಿ ಜನಿಸಲಾರೆನು" ಎಂದು ಮುಹಲಿಂಗನು ಪ್ರಾರ್ಥಿಸಲು ಸೂರ್ಯನ ಇದಿರು ಕತ್ತಲೆ, ಸಿಂಹದ ಇದಿರು ಆನೆವಿಂಡು ನಿಲ್ಲದ ಹಾಗೆ ನಿನ್ನಿದಿರು ಆ ಪಾಪಾತ್ಮರು ನಿಲ್ಲಲಾರರು; ತಂತುಪಟದಂತೆ ನಾನು ನಿನಗೆ ಗುರುಲಿಂಗಜಂಗಮವಾಗಿ ಒಲಿದಿರ್ಪೆನು; ಎಂದು ಅಭಯವೀಯಲು ಮುಹಲಿಂಗನು ಪ್ರಮಥರಿಗೆ ಶರಣೆಂದು ಬೀಳ್ಕೊಂಡು ಭೂಲೋಕಕ್ಕೆ ಬರುವನು.

**

# ಮೂರನೆಯ ಸಂಧಿ

ಮಹಲಿಂಗಜಂಗಮನು ಹೇಮಾದ್ರಿಯಿಂದಿಳಿದು ಬರಲು ಭೂಕಾಂತೆ ಪುಲಕಿತೆಯಾದಳು. ಕಲಿಯುಗದ ತಾಮಸವು ಬಿಟ್ಟೋಡಿತ್ತು. ಪರವಾದಿಗಳು ಮೌನದಳೆದರು. ಭಕ್ತಮಾಹೇಶ್ವರಾವಳಿಯ ಮಾನಸದ ವಾಂಛಿತವು ಕೈಸಾರ್ದುದು. ಮಹಲಿಂಗದೇವನು ಗೌಳ, ದ್ರಾವಿಡ ಮೊದಲಾದ ದೇಶಗಳನ್ನು ಸಂಚರಿಸುತ್ತ, ಕಾಶಿ, ರಾಮೇಶ್ವರ, ಅರುಣಾದ್ರಿ, ಶಿವಗಂಗೆ, ಉಳಿವೆ, ಗೋಕರ್ಣ ಮೊದಲಾದ ಕ್ಷೇತ್ರಗಳನ್ನು ನೋಡುತ್ತ, ಗಂಗೆ, ಯಮುನೆ, ಸರಸ್ವತಿ, ತುಂಗಭದ್ರೆ ಮೊದಲಾದ ಅಸಮನದಿಗಳನ್ನು ಪಾವನಂಗೈಯುತ್ತ, ಕೆಲಕಾಲ ಕಳೆದುದಾಯ್ತು. ಹೋದೆಡೆಯಲ್ಲೆಲ್ಲ ಮಹಲಿಂಗದೇವನು ಪರಮ ತೀರ್ಥಂಗಳೊಳ್ ಮಿಂದು, ಜಪತಪಂಗಳನಾಚರಿಸಿ ಸದ್ಭಕ್ತರನ್ನು ಪರಿಪಾಲಿಸುತ್ತಿರ್ದನು. ಅಲ್ಲಲ್ಲಿ ಪರಮ ಶಿವಲಿಂಗಗಳನ್ನು ನೆಲೆಗೊಳಿಸಿ, ಖುಲ್ಲರನ್ನು ನೆಲೆಗೆಡಿಸಿ ಎಲ್ಲಿ ನೋಡಿದಡಲ್ಲಿ ತಾನೆ ತಾನಾಗಿ ಮೆರೆಯುವನು. ಗಾರ್ಘ್ಯತಟಿನೀತಟದಲ್ಲಿ ತಟೇಶ್ವರನೆಂಬ ಲಿಂಗವನ್ನು ಸ್ಥಾಪಿಸುವನು. ಗೋರಕ್ಷಪಟ್ಟಣದ ಜಿನಾಲಯದಲ್ಲಿ ಗೋಳಕೇಶ್ವರಲಿಂಗವನ್ನು ನೆಲೆಗೊಳಿಸುವನು. ಅಲ್ಲಿಂದ ದಂಡಕಾರಣ್ಯಕ್ಕೆ ಬಂದು, ಮುನಿಕುಲಲಲಾಮ ಮಾರ್ಕಂಡೇಯನು ತಪಂಗೈದು ಯಮಬಾಧೆಯನ್ನು ಗೆದ್ದ ತಾಣಮಿದೆಂದು ಅಲ್ಲಿ ನಿಂದು ತಪವನಾಚರಿಸ ತೊಡಗುವನು. ಕಂದಮೂಲಾದಿಗಳನ್ನು ಸೇವಿಸಿ, ತನುಶೋಷಣೆಯ ಪೊಂದಿ ಒಂದು ದಿನ ಮಹಲಿಂಗಜಂಗಮನು ಶಿವಯೋಗನಿದ್ರಾಪರವಶನಾಗಿರಲು ಗಂಗಾಧರನು ಸ್ವಪ್ನದಲ್ಲಿ ತೋರಿ, "ಧವಳಾಪುರದಲ್ಲಿರುವ ಶಿವಯೋಗಿ ಗುರುಲಿಂಗ ಜಗದಾರ್ಯರನ್ನು ಕಂಡು ಅವರ ಕರುಣವಡೆಯಬೇಕೆ"ಂದು ನುಡಿದು ಬಯಲಾಗುವನು. ಆಮೇಲೆ ಮಹಲಿಂಗಜಂಗಮನು ದಂಡಕಾರಣ್ಯದ ಪೂರ್ವ ದಿಗ್ಭಾಗದಲ್ಲಿರುವ ಧವಳಾಪುರೀಕ್ಷೇತ್ರಕ್ಕೈತರುವನು. ಯೋಗಿ ಗುರುಲಿಂಗಜಂಗಮವರ್ಯನು ಶಿವಯೋಗನಿದ್ರಾಸಕ್ತನಾಗಿರಲು ಪರಶಿವನು ಮಹಲಿಂಗಜಂಗಮವೈತರುವುದನ್ನು ಸೂಚಿಸಿ, ಆತನನ್ನು ಪಾಲಿಸಬೇಕೆಂದು ಅಪ್ಪಣೆಕೊಡಿಸಿ ನಿರ್ವಯಲಾಗುವನು. ಆ ಸೂಚನೆಯಂತೆ ತನ್ನಾಶ್ರಮಕ್ಕೈತಂದ ಮಹಲಿಂಗಜಂಗಮನನ್ನು ಗುರುಲಿಂಗಾರ್ಯನು ಬರಮಾಡಿಕೊಂಡು, ಬಾಚಿದಪ್ಪಿ, ಮೃಗಪೀಠದಲ್ಲಿ ಮೂರ್ತಗೊಳಿಸುವನು. ಗುರುಲಿಂಗೇಶನು ಪರಮಾರ್ಥಗೀತೆಗಳನ್ನು ಬಳಿವಿಡಿದು ಪೇಳುತ್ತಿರಲು ಮಹಲಿಂಗದೇವನು ಕೇಳಿ ಆನಂದಭರಿತನಾಗುವನು. ಮಹಲಿಂಗ

ಜಂಗಮನ ಬಿನ್ನಹದ ಮೇರೆಗೆ ಯೋಗಿ ಗುರುಲಿಂಗೇಶನು ಅಷ್ಟಾವರ್ಣಗಳ ಮಹಿಮೆಯನ್ನು ವಿವರಿಸುವನು. “ವಸಿಷ್ಠ, ವಿಶ್ವಾಮಿತ್ರ, ಗೌತಮ, ರೋಮಜ, ವಾಲ್ಮೀಕಿ, ಭಾರದ್ವಜ, ಮಾಂಡವ್ಯ, ವ್ಯಾಸ ಮೊದಲಾದ ಋಷಿಗಳು ಕೀಳುಕುಲದಲ್ಲಿ ಜನಿಸಿದವರಾದರೂ ಪರಬ್ರಹ್ಮೋಪದೇಶದಿಂದ ಮಹಾಮುನಿಗಳೆಂದು ಪರಿಗಣಿತರಾದರು. ಶೈವಸನ್ಮಾರ್ಗದಲ್ಲಿ ನಡೆದು ಹಲವರೂ, ವೀರಶೈವವನ್ನು ಆಚರಿಸಿ ಕೆಲವರೂ ಮುಕ್ತರಾದರು. ಗುರುವಿನಿಂದ ಲಿಂಗವನ್ನು, ಲಿಂಗದಿಂದ ಜಂಗಮವನ್ನು ಅರಿದು ಪರಮಪಾವನರಾಗಬೇಕು” ಎಂದು ಗುರುಲಿಂಗದೇವನು ಬೋಧಿಸುವನು; ಮಹಲಿಂಗದೇವನಿಗೆ ಉಪದೇಶವಿತ್ತು ಕರುಣಪ್ರಸಾದವನ್ನು ಕರುಣಿಸುವನು.

**

*

# ನಾಲ್ಕನೆಯ ಸಂಧಿ

ಮಹಲಿಂಗಜಂಗಮನಾಥನು ಗುರುಲಿಂಗಜಗದಾರ್ಯರಿಂದ ಬ್ರಹ್ಮೋಪದೇಶವನಾಂತು, ಅವರ ಸನ್ನಿಧಿಯಲ್ಲಿ ಕೆಲಕಾಲವಿದ್ದು ಮುಂದೆ ಭೂಪವಿತ್ರವ ಮಾಡಲೋಸುಗ ಸಂಚರಿಪುದೇ ಧರ್ಮವೆಂದು ಗುರುವಿನ ನಿರೂಪ ಕೇಳಿದನು. ಯೋಗಿ ಗುರುನಾಥನು ಮಹಲಿಂಗಜಂಗಮನಾಥನ ವದನಾರವಿಂದವನ್ನು ಕಾರುಣ್ಯದಿಂದ ನೋಡಿ, " ನಾರಿಕೇಳಂಗಳಲ್ಲಿ ಅಮೃತವನ್ನು, ಕ್ಷೀರದಲ್ಲಿ ಮಾಧುರ್ಯವನ್ನು ಸಾರಕಸ್ತೂರಿಯಲ್ಲಿ ಕಂಪನ್ನು ಬೆರೆಸುವರಾರು ? ಮಾರಹರ ಮಹಿಮ, ನಮ್ಮಿಂದ ನೀವು ಬ್ರಹ್ಮೋಪದೇಶ ಪಡೆದಿರೆಂಬ ನುಡಿ ಪುಸಿ, ಶಿವನಾಜ್ಞೆಯಿಂದ ಎಲ್ಲವೂ ಘಟಿಸಿದೆ " ಎಂದು ನುಡಿದನು. " ಎಲ್ಲಿರ್ದಡೀ ಜಂಗಮದ ಚಿತ್ತ ನಿಮ್ಮ ಪಾದ ಪಲ್ಲವದಲ್ಲಿರುವುದು. ಲೋಕದಲ್ಲಿ ಎನ್ನನ್ನು ಪಾಲಿಸುವುದು " ಎಂದು ಮಹಲಿಂಗ ಜಂಗಮನಾಥನು ಪ್ರಾರ್ಥಿಸಲು ಗುರುವರ್ಯನು " ಕತ್ತಲೆಗೆ ಸೂರ್ಯಮುಂಗಾಣದಿರೆ ಬೆಳಕನ್ನು ತೋರಿಸುವರಾರು ? ಮಾರುತನೇ ಆಯಾಸದಿಂದ ಉಬ್ಬಸ ತಳೆದರೆ ಬೀಸಣಿಕೆಯಿಂದ ಬೀಸಿ ತಾಪವನ್ನು ಕಳೆವರಾರು ? ಲೋಕಪಾವನಶೀಲ, ನಿಮ್ಮ ನುಡಿ ಕೌತುಕವು. ಪರಶಿವನು ಪೇಳ್ದಂತೆ ಲೀಲೆಯನ್ನು ನಟಿಸಿ, ಶಿವಭಕ್ತಸಂಜಾತವನ್ನು ಪಾಲಿಸಿ, ಧಾರುಣೀಪತಿಗಳಿಂದ ಸಂಪೂಜ್ಯನಾಗುತ್ತ ಮಹಾಕೀರ್ತಿಶಾಲಿಯಾಗ " ಎಂದು ಪರಸಿ ಬೀಳ್ಕೊಡುವನು. ಆ ಪರಮ ಗುರುವಿನಾಜ್ಞೆಯನಾಂತು ಮಹಲಿಂಗಜಂಗಮನಾಥನು ಸದ್ಭಕ್ತಸಂತತಿಯ ತಾಪತ್ರಯಂಗಳನ್ನು ಹರಿಸುತ್ತ ಚರಿಸುವನು.

ಸಕಲ ಸೌಭಾಗ್ಯಕ್ಕಿದೇ ಜನ್ಮಭೂಮಿಯೆಂಬಂತೆ ಕರ್ನಾಟಕದೇಶವು ಆ ಮಹಾಮಹಿಮನ ಮನಕೆ ಮಂಜುಳವನೀವುದು. ಲಿಂಗದಿಂ ಕಂಗೊಳಿಪ ಭುವನಗಳು, ಫಲಭಾರದಿಂದ ಬಗ್ಗುತಿಹ ಬನಗಳು, ಮಹಾತಪೋಧನರಿರ್ದ ಗಿರಿಗಳು ಇವೇ ಮೊದಲಾದವುಗಳಿಂದ ಆ ದೇಶ ಕಣ್ಗೆಸೆದಿರ್ದುದು. ತನಿವಣ್ಣುಗಳನುಂಡು ಹಾಡುವ ಶುಕಗಳು, ಕೊನರುಗಳ ತಿಂದುಲಿದು ನಲಿಯುತ್ತಿರುವ ಪಿಕಗಳು, ಬನದ ಪೂಗಳನ್ನು ತಿಂದು ಝೇಂಕರಿಪ ಷಟ್ಪದಿಗಳು ಇವುಗಳಿಂದ ಇನಿದಾದ ಶಬ್ದಕ್ಕಿದೇ ಪರಮ ಪಾವನವಾದ ಜನನಧರೆಯಂತೆ ಕೇಳ್ವರ ಕರ್ಣಕಿನಿದೆನಿಸಿ, ಮನಕೆ ಮಂಜುಲವಾಗಿ ಆ ದೇಶದ ಉಪವನಗಳು ಶೋಭಿಸುವವು. ಅಲ್ಲಿ ಗಂಧಶಾಲಿವನಂಗಳಲ್ಲಿ ಗಿಳಿ

ಗಳನ್ನು ಸೋವ ಪಾಮರಿಯರು ಮನೋಜ್ಞವಾಗಿರುವರು. ಮಹಲಿಂಗಜಂಗವು ನಾಥನ ಮಹಿಮೆಯೋ ಎಂಬಂತೆ ಎಲ್ಲಿ ನೋಡಿದಡಲ್ಲಿ ಹರಧ್ಯಾನಮಂ ಮಾಳ್ಪ ಜನರು, ಎಲ್ಲಿ ನೋಡಿದಡಲ್ಲಿ ಶಿವನ ಲೀಲೆಗಳನ್ನು ಭಕ್ತಿಯಿಂದ ಹೇಳುವವರು ಕಂಗೊಳಿಸುವರು. ಸೌಭಾಗ್ಯದಲ್ಲಿ ಸುರಪತ್ನಿಯನ್ನು, ದ್ರವ್ಯದಲ್ಲಿ ಕುಬೇರನನ್ನು, ಸೌಂದರ್ಯದಲ್ಲಿ ಕಾಮನನ್ನು, ದಾನದಲ್ಲಿ ಕರ್ಣನನ್ನು ಏಳಿಪ ಜನರಿಂದ ಆ ದೇಶ ಮೆರೆದಿರುವದು. ಸಕಲ ಸದ್ಗುಣ, ಸಚ್ಛೀಲ, ಸದಾಚಾರ, ಸದ್ವಿದ್ಯೆಗಳುಳ್ಳವರಾಗಿ ಸದ್ಧರ್ಮದಲ್ಲಿ ನಿರತರಾಗಿರುವ ಪುರುಷರು ಹಾಗು ಸ್ತ್ರೀಯರಲ್ಲದೆ ದುಷ್ಟ ಸ್ತ್ರೀಪುರುಷ ರೆಂಬುವರು ಆ ದೇಶದಲ್ಲಿಲ್ಲ. ಇಂತಪ್ಪ ಸೌಭಾಗ್ಯದಿಂದೊಪ್ಪುತಿಹ ದೇಶಕಾಂತೆಯ ಮುಖಕಮಲದಂತೆ ನರವಾಲವೆಂಬ ಸದ್ಗ್ರಾಮವು ಮಹಲಿಂಗಮುನಿ ಚಂದ್ರಮನ ಮನಕೆ ಸಂತಸಮನೀವುದು. ಆ ಪುರದ ಬಹಿರೋಪದೇಶದಲ್ಲಿ ಸೈಪಿಸಾಲಯ ದಂತೆ, ತಾಪಸರ ನೆಲೆವನೆಯಂತೆ ಒಂದು ಪರ್ವತವು ಕಂಗೊಳಿಸಿತು. ಅದು ಬಹು ಮನೋಜ್ಞವಾಗಿದ್ದಿತು. ಅದೇ ಚೆನ್ನಗಿರಿಯೆಂದು ನಿಶ್ಚಯಿಸಿ ಮಹಲಿಂಗ ಜಂಗಮನು ಅಲ್ಲಿ ತಪವನಾಚರಿಸುವನು. ಪಂಚೇಂದ್ರಿಯ ವಿಷಯಗಳನ್ನು ಅತಿಗಳೆ ವನು; ದಶೇಂದ್ರಿಯದ ಸಂಚಲವ ನೆರೆಮುರಿವನು; ಮಲತ್ರಯಗಳನ್ನು ಕೀಳ್ಪಡಿಸಿ ಮಹಾಯೋಗಿಯು ಮಿಂಚುವ ಮಹಾ ಬೆಳಗಿನೊಳು ಬೆರೆಸಿ ಬೇರಿಲ್ಲದಿರು ತಿರ್ದನು.

**

# ಐದನೆಯ ಸಂಧಿ

ಮಹಲಿಂಗಜಂಗಮನಾಥನು ತನ್ನ ತಾನರಿದು ತಪವನಾಚರಿಸುತ್ತ ಚೆನ್ನಗಿರಿ ಮಧ್ಯದಲ್ಲಿ ಶೋಭಾಯಮಾನನಾಗಿರುತ್ತಿದ್ದನು. ಆಗ ಪಾವನಚರಿತನೂ ಸದ್ಧರ್ಮ ರೂಪನೂ ಆದ ನಾಗಾಖ್ಯನೆಂಬ ಸದ್ಭಕ್ತನು ಅಲ್ಲಿರುತ್ತಿದ್ದನು. ಆತಂಗೆ ಮುಪ್ಪಿನ ಮಹಾತಾಯಿ ಎಂಬ ಪುಣ್ಯವತಿ ಸತಿಯಾಗಿದ್ದಳು. ಸತಿಪತಿಗಳೀರ್ವರೂ ಶಿವ ಜಂಗಮದ ಪಾದಾಂಬುಶೇಷವೇ ಪ್ರಾಣವೆಂದು ನಿತ್ಯ ಜಂಗಮಪೂಜೆ, ದಾಸೋಹ ಗಳನ್ನು ಮಾಡುವ ವ್ರತವನ್ನು ಕೈಕೊಂಡಿದ್ದರು. ಪರಮಾತ್ಮನು ಆ ಕಾದಲರ ಭಕ್ತಿಯನ್ನು ಮೂಜಗದಲ್ಲಿ ಮೆರೆಯಬೇಕೆಂದು ನಿಶ್ಚಯಿಸಿ ಅವರಿಗೆ ಶಿವಜಂಗಮವು ದೊರೆಯದಂತೆ ಮಾಡುವನು. ನಾಗಾಖ್ಯನು "ಜಂಗಮವು ದೊರೆಯದಿದ್ದರೆ ಪ್ರಾಣವನ್ನು ಬಿಡುವೆ" ನೆಂದು ಹಂಗುದೊರೆದು ಹುಡುಕಿ, ಅಂತಹ ಮಹಾ ಮೂರ್ತಿಯನ್ನು ಕಾಣದೆ ಮೌನದಿಂದ ಮಂದಿರಕೆ ಬಂದನು. "ನಮ್ಮ ಸತ್ಯ ಸದ್ವರ್ತನೆಗೆ ಕುಂದು ಬಂದಿಹುದು. ಜಂಗಮವು ಅದೇನು ಕಾರಣ ದೊರೆಯದಾ ಗಿಹನು ?" ಎಂದು ಕಾಂತೆ ಚಿಂತಿಸುವಳು. "ಚಂದ್ರನ ಕಿರಣಗಳು ಬಿಸು ಪಾದರೂ ಆಗಬಹುದು, ಸೂರ್ಯನು ತಂಗದಿರನಾದರೂ ಆಗಬಹುದು, ಸುಧೆಯು ವಿಷವಾಗಬಹುದು. ಎಲೆ ಕಾಂತೆ, ನುಡಿದ ನುಡಿ, ಹಿಡಿದ ವ್ರತ ಹಿಂಗದೆ ಇಹುದು; ಮಹಾಪ್ರಮಥರಾಣೆ" ಎಂದು ನಾಗಾಖ್ಯನು ನುಡಿಯುವನು. ಚಿಂತಿಸಿ ಚಿಂತಿಸಿ ಸತಿಪತಿಗಳು ಮಲಗಿರಲು ಪರಶಿವನು ಸ್ವಪ್ನದಲ್ಲಿ ತೋರಿ "ಚಿಂತಿಸದಿರಿ. ನಿಮ್ಮ ಭಕ್ತಿಯನ್ನು ಪರೀಕ್ಷಿಸಬೇಕೆಂದು ನಾನೇ ಕೃತಕವನ್ನು ಮಾಡಿದೆನು. ಶ್ರೀ ಚೆನ್ನ ಗಿರಿಯಲ್ಲಿ ಚಿದ್ರೂಪಮಹಲಿಂಗಮುನಿವರನು ಇರುವನು. ಆತನನ್ನು ಕಾಣ ಬೇಕು" ಎಂದು ಸೂಚಿಸುವನು. ಸತಿಪತಿಗಳ ನೇಮ ಕೈಗೂಡಿತೆಂಬಂತೆ ಮುಂಗೋಳಿ ಕೂಗಿತ್ತು; ಕತ್ತಲೆಯು ಜಾರಿತ್ತು; ಮುಂಬೆಳಗು ತೋರಿತ್ತು.

ಬೆಳಗಿನ ಜಾವದಲ್ಲಿ ಎದ್ದು ಸದ್ಭಕ್ತವೃಂದಕ್ಕೆ ತಾವು ಕಂಡ ಕೌತುಕದ ಕನ ಸನ್ನು ನಿವೇದಿಸುವರು. ಪರಿಜನ, ಪುರಜನ ಮೊದಲಾದ ಸರ್ವಜನ ಮಹಲಿಂಗ ಜಂಗಮನಾಥನು ಅಲ್ಲಿರ್ದುದನ್ನು ಕೇಳಿ ಆಶ್ಚರ್ಯಬಟ್ಟು ಎಲ್ಲರೂ ಹೋಗಿ ಚೆನ್ನ ಗಿರಿಯ ಮೇಲೆ ಅಖಂಡ ಪರಶಿವನ ಘನಕರಂಡವೆಂಬಂತೆ ಥಳಥಳಿಸ ಮುನಿವರ ನನ್ನು ಕಂಡು ಸೈಗೆಡೆದರು.

ಮಹಲಿಂಗದೇವನು ತನುಗುಣಗಳನ್ನು ಮೀರಿ, ತಾಮಸವನ್ನು ತೂರಿ, ಮಲತ್ರಯಂಗಳನ್ನು ಕೀರಿ, ಲಿಂಗಾಂಗಸಾಮರಸ್ಯದ ಸದ್ಭಾವದಲ್ಲಿದ್ದನು. ದಂಪತಿಗಳು ಆತನನ್ನು ಕಂಡು " ಕರ್ಮಹರ ಮಹಲಿಂಗ ಜಂಗಮೋತ್ತಮ ದಯೆಯಿಂದೆ ಪಾಲಿಪುದು " ಎಂದು ಕೊಂಡಾಡಲು ಮಹಾಮುನಿಯು ಕಣ್ದೆರೆದನು. ಮೃದುವಚನದಿಂದ ಮುಂದಕ್ಕೆ ಕರೆದು, ತನ್ನ ಕರಪದ್ಮಗಳನ್ನು ಅವರ ಶಿರದಲ್ಲಿಟ್ಟು " ಶಿವನಾಜ್ಞೆ ನಿಮಗಾದಂತೆ ಲಿಂಗದಲ್ಲಿ ನನಗೂ ಸಹ ಎಲ್ಲವೂ ತೋರಿತ್ತು. ನಿಮ್ಮ ದೃಢನೇಮಗಳು ಸಫಲವಾದಂತೆ ಈ ಜಂಗಮವು ನಿಮಗೆ ಪ್ರಾಪ್ತವಾಗಿರುವದು" ಎಂದು ಸಂತೈಸುವನು. ನಾಗಾಖ್ಯ ಮುಪ್ಪಿನಾಂಬೆಯರು ಆತನ ಅಡಿಗಳಿಗೆ ನಮಿಸಿ ಸಕಲಭಕ್ತವೃಂದದೊಡನೆ ಬಂದು ಪುರವನ್ನು ಶೃಂಗರಿಸುವರು. ಪರಶಿವನು ಹೇಮಗಿರಿಯನ್ನಿಳಿವಂತೆ ಮಹಲಿಂಗಜಂಗಮನಾಥನು ಚೆನ್ನಗಿರಿಯಿಂದಿಳಿದು ಸಂಭ್ರಮದಿಂದ ಆ ಊರಿಗೆ ಬಿಜಯಂಗೈಯುವನು. ಭೇರಿ, ತಮ್ಮಟ, ಕಹಳೆ, ನಿಸ್ಸಾಳಗಳ ಶಬ್ದ ದಿಕ್ತಟವನ್ನು ತುಂಬುವದು. ನೀರೆಯರು ಮಾರಹರನಿಗೆ ಮುತ್ತಿನಾರತಿಗಳನ್ನೆತ್ತುವರು. " ಈತ ನಿರ್ಮಾಯನಂತೆ, ಸಹಜಜಂಗಮನಂತೆ, ಜಗದಾರಾಧ್ಯನಂತೆ " ಎಂದು ಪುರಜನರು ಭಕ್ತಿಯಿಂದ ಸ್ತೋತ್ರ ಮಾಡುವರು. ಇಂತಪ್ಪ ಸಂಭ್ರಮದಲ್ಲಿ ಮಹಲಿಂಗಜಂಗಮನಾಥನು ನಾಗಾಖ್ಯನ ಮನೆಯನ್ನು ಪ್ರವೇಶಿಸುವನು. ಮಣಿಖಚಿತ ಪೀಠದಲ್ಲಿ ಮೌನಿಕುಲಲಲಾಮನನ್ನು ಕುಳ್ಳಿರಿಸಿ ಭಕ್ತಜನ ಪೂಜಿಸುವರು. ಮಹಲಿಂಗಜಂಗಮನಾಥನ ಮಹಿಮೆಯನ್ನು ನಾಗಾಖ್ಯ ಮುಪ್ಪಿನಾಂಬೆಯರು ಕೊಂಡಾಡಿ " ಕರುಣೆಯಿಂದ ತಮ್ಮೆಲ್ಲರನ್ನು ಪಾಲಿಸಬೇಕೆ " ಂದು ಆತನನ್ನು ಪ್ರಾರ್ಥಿಸುವರು. " ಇದೆಲ್ಲ ಪರಶಿವನ ಲೀಲೆ " ಎಂದು ಮಹಲಿಂಗ ಮುನಿವರನು ಚೆನ್ನಗಿರಿಯಾಶ್ರಮದಲ್ಲಿ ಲೀಲೆಯಿಂದಿರುತಿರ್ದನು.

**

# ಆರನೆಯ ಸಂಧಿ

ನರಕಾಲವಾಲದ ಸದ್ಭಕ್ತಜನರನ್ನು ಮಹಲಿಂಗಜಂಗಮನಾಥನು ಪರಿಪಾಲಿಸುತ್ತಿರಲು ಒಂದುದಿನ ರುದ್ರಮ್ಮನೆಂಬ ಶರಣೆ ಅಲ್ಲಿಗೈತರುವಳು. ಅವಳು ಭೂರುದ್ರನಂತಿಹ ಮಹಾಲಿಂಗನ ಪದಕ್ಕೆರಗಿ, "ಪಿಂಗಳ ಜಟಾಪಟಲಸಂಗತ ಮಹಾಮಹಿಮಪುಂಗವನೇ ಎನಗೆ ನೇತ್ರಮನಿತ್ತು ಪಾಲಿಸುವುದೆ" ಂದು ಪ್ರಾರ್ಥಿಸುವಳು. ಮುನಿನಾಥನು ಆ ರುದ್ರಿಯಕ್ಕನ ವದನಾರವಿಂದವನ್ನು ಕರುಣೆಯಿಂದ ನೋಡಿ ರುದ್ರಾಭಿಷೇಕ ಜಲವನ್ನು ಆಕೆಯ ನೇತ್ರಕ್ಕೆ ತಳಿಯುವನು. ಚೆನ್ನೈದಿಲದ ಕುಸುಮವರಳಿದಂತೆ ಆಕೆಯ ಕಣ್ಣರಳುವದು. ರುದ್ರಿಯಕ್ಕನು ಹರ್ಷಜಲಧಿಯಲ್ಲಿ ತೇಲಾಡಿ "ದೇವದೇವೇಶ ಧನ್ಯಳಾದೆನು. ನಿನ್ನ ರುದ್ರಾಭಿಷೇಕ ಜಲಮಹಿಮೆಯನ್ನು ಬಣ್ಣಿಸುವುದಸಾಧ್ಯವೆ" ಂದು ಕೊಂಡಾಡುವಳು. ಸದ್ಭಕ್ತಜನರೆಲ್ಲ ಇದನ್ನು ಕಂಡು "ಹಿಂದೆ ವಿಷ್ಣು ದಾನವರನ್ನು ಸಂಹರಿಸುವುದಕ್ಕಾಗಿ ಪರಶಿವನಿಂದ ಚಕ್ರವನ್ನು ಪಡೆಯಬೇಕೆಂದು ಅಂಬುಜಸಹಸ್ರಗಳ ಗಣನೆಯಿಂದ ಆತನನ್ನು ಪೂಜಿಸುತ್ತಿದ್ದಾಗ ಒಂದು ಕುಸುಮ ಕೊರತೆಯಾಗಲು ಶ್ರೀಹರಿಯು ತನ್ನ ನೇಮ ತಪ್ಪುವದೆಂದು ತನ್ನ ನೇತ್ರಪುಷ್ಪವನ್ನೇ ಕಿತ್ತು ಶಂಕರನಿಗೆ ಧರಿಸಿದನು. ಪರಮಾತ್ಮನು ಅದಕ್ಕೆ ಮೆಚ್ಚಿ ಪಾರುಂಬಳೆಯನಿತ್ತು ನಯನಾಬ್ಜವನ್ನು ಕರುಣಿಸಿದನು. ಇದು ಮುಯ್ಯಕ್ಕೆ ಮುಯ್ಯವಾಗಿದ್ದಿತು. ಆದರೆ, ಮಹಲಿಂಗಜಂಗಮನ ಲೀಲೆ ಇಂತಲ್ಲ ಎಂದು ಜನರು ಅಚ್ಚರಿದಳೆದರು.

ಹಿಂದೆ ತಾವು ಕವಿ ಕಾಳಿದಾಸನ ಕತೆಯನ್ನು ಕೇಳಿಬಲ್ಲವರಾಗಿದ್ದರು. ಆತನು ಅಲಗಿನ ಮಧ್ಯದಲ್ಲಿ ಮೂರ್ತಿಗೊಂಡು ಪರಮಾತ್ಮನನ್ನು ಒಂದೊಂದು ಪದ್ಯದಿಂದ ಸ್ತೋತ್ರಮಾಡುತ್ತ ತಾನು ಕುಳಿತ ನೆಲುವಿನ ಒಂದೊಂದು ಕಾಲನ್ನು ಕತ್ತರಿಸಿದನು. ಹೀಗೆ ಎಂಟು ಪದ್ಯಗಳಿಂದ ಎಂಟೂ ಕಾಲುಗಳನ್ನು ಕೊರೆದು ತಾನು ಕರವಾಳದ ಅಗ್ರದಲ್ಲಿ ಬೀಳುತ್ತಿರಲು ಪರಮಾತ್ಮನು ಮೆಚ್ಚಿ ಆತನ ಮನದಿಚ್ಛೆಯನ್ನು ಪೂರೈಸಿದನು. ಕಾಳಿದಾಸನು ಶಿವಪ್ರಸಾದದಿಂದ ಭೋಜರಾಜನ ಸಭೆಯ ಕವಿಕುಲೋತ್ತಮನೆನಿಸಿದನು.

ಇದಲ್ಲದೆ ಆ ಭಕ್ತಜನರು ಕಣ್ಣಪ್ಪನ ಕಥೆಯನ್ನೂ ಚೆನ್ನಾಗಿ ಅರಿತವರಾಗಿದ್ದರು. ಕಾಳಹಸ್ತಿಯ ಕ್ಷೇತ್ರದಲ್ಲಿ ಕಣ್ಣಪ್ಪನೆಂಬ ಬೇಡನು ವಾಸಿಸುತ್ತಿದ್ದನು.

ಆತನು ಒಂದು ದಿನ ಬೇಟೆಯಾಡಹೊರಟು ಆವ ಮೃಗವನ್ನೂ ಕಾಣದೆ ಕಳವಳಿಸಿ ಬಾಯಾರಿ ಸೂರ್ಯಾಸ್ತಮಯ ಕಾಲದಲ್ಲಿ ಪಕ್ಕಣಕ್ಕೆ ಬಂದು ಮಲಗಿರಲು ಮುಕ್ಕಣ್ಣನು ಕನಸಿನಲ್ಲಿ ಬಂದು ಮುನ್ನ ವಧಿಸಿದ ಮೃಗದ ಮಾಂಸವನ್ನು ತನಗಿತ್ತರೆ ಮೃಗಸಂಕುಲವು ದೊರೆವುದೆಂದು ಸೂಚಿಸಿದನು. ಕಣ್ಣಪ್ಪನು ಬೆಳಗಾದೊಡನೆ ಬೇಟೆಗೆ ಹೋಗಿ ಗುರಿನೋಡಿ ಬಾಣಪ್ರಯೋಗ ಮಾಡಲು ಒಂದು ಮೊಲವು ಬೀಳುವದು. ಅದರ ಮಾಂಸ ಬಗ್ಗದೊವಲಂಗೆ ಬಲು ಮಧುರವೆಂದು ಕಡುಭಕ್ತಿಯಿಂದ ಕೊಂಡು ಮಡುವಿನ ಅಗ್ಗವಣಿಯನ್ನು ಬಾಯೊಳಗೆ ತುಂಬಿಕೊಂಡು ಪತ್ರಪುಷ್ಪಾದಿಗಳನ್ನು ತಲೆಯಲ್ಲಿ ಸಿಕ್ಕಿಸಿಕೊಂಡು ಕಾಳಹಸ್ತೀಶ್ವರನ ಗುಡಿಗೆ ಬರುವನು. ಅಲ್ಲಿ ಪೂಜಾರಿ ಬ್ರಾಹ್ಮಣರು ಮಡಿಯಿಂದ ಮಾಡಿದ ಪೂಜೆಯನ್ನು ಎಡಗಾಲಿನಿಂದ ಕೆಡಿಸಿ, ಮುಕ್ಕಳೋದಕದಿಂದ ಮಜ್ಜನಂಗೈಸಿ, ತಾನು ತಲೆಯೊಳಿಟ್ಟುಕೊಂಡು ಬಂದ ಎಕ್ಕಿ-ಕಕ್ಕಿ ಮೊದಲಾದ ಹೂಗಳನ್ನು ಧರಿಸಿ, ಚಿಕ್ಕ ಮೊಲದಡಗವನ್ನು ಮುಕ್ಕಣ್ಣನಿಗೆ ನೈವೇದ್ಯ ಮಾಡುವನು. ಗೌಳಯತಿ ( ಬ್ರಾಹ್ಮಣಪೂಜಾರಿ ) ಗಳು ಭೀಭತ್ಸ್ಯಕರವಾದ ಆ ಪೂಜೆಯನ್ನು ಕಂಡು ಗರ ಹೊಡೆದಂತಿರುವರು. ಕಾಳಹಸ್ತೀಶ್ವರನು ಕಣ್ಣಪ್ಪನ ಭಕ್ತಿಯನ್ನು ಪ್ರಕಟಿಸಬೇಕೆಂದು ಕಂಬನಿಗರೆಯಲು ಅಂಬಿಕಾವರನಕ್ಷಿ ನೀರಚ್ಚಿಯಾಯ್ತೆಂದು ಅಲಗಿನ ಮೊನೆಯಿಂದ ತನ್ನ ಕಣ್ಣನ್ನು ಕಿತ್ತು ಧರಿಸುವನು. ಬಲದ ನೇತ್ರದಿಂದಲೂ ನೀರುದುರಲು ತನ್ನ ಬಲಗಣ್ಣನ್ನೂ ಅರ್ಪಿಸುವನು. ಕಾಳಹಸ್ತೀಶ್ವರನು ನಿಜರೂಪದೋರಿ, ಅವನಿಗೆ ನೇತ್ರಗಳನಿತ್ತು ಆತನ ಮನದಿಚ್ಛೆಯನ್ನು ಸಲಿಸುವನು. ಇದನ್ನೆಲ್ಲಾ ಕಂಡು ಆ ಪೂಜಾರಿ ಬ್ರಾಹ್ಮಣರು ಆಶ್ಚರ್ಯಬಟ್ಟು, ಮನದ ಸಂದೇಹ ಬಿಟ್ಟು, ಆತನು ಪರಮಭಕ್ತನೆಂದು ಹೊಗಳಿ ಕೈಮುಗಿಯುವರು. “ ಕಾಡೊಡೆಯನಿತ್ತ ಕಂಗಳಿಗೆ ಪ್ರತಿಯಾಗಿ ನಾಡೊಡೆಯನು ಕಂಗಳನ್ನು ಕೊಟ್ಟುದು ಮುಯ್ಯಕ್ಕೆ ಮುಯ್ಯವೇ ಆಯಿತು. ರುದ್ರವ್ವೆಗೆ ಮಹಲಿಂಗಜಂಗಮನಾಥನು ನೇತ್ರವನ್ನಿತ್ತುದು ಹೊಸತಾದುದು ” ಎಂದು ಜನರು ತಮತಮಗೆ ಕೊಂಡಾಡಿ ಕೈಮುಗಿದು ಸೈಗೆಡೆವುತಿರ್ದರು.

**

# ಏಳನೆಯ ಸಂಧಿ

ನರಗಟ್ಟಿಯಲ್ಲಿರ್ದ ಮಹಲಿಂಗಮುನಿನಾಥನ ಕೀರ್ತಿಯು ಸುತ್ತೆಲ್ಲ ಪಸರಿಸಿ ಮೋದಪುರ (ಮುಧೋಳ) ವನ್ನಾಳುತ್ತಿದ್ದ ಮಾಲೋಜಿಭೂಪತಿಯವರಿಗೆ ಬರುವದು. ಆ ಮಹಾಮಹಿಮನ ವಾರ್ತೆಯನ್ನು ಕೇಳಿ " ಪಾಪಿಗಳ ಕಣ್ಣಿಗೆ ಪರುಷ ಕಲ್ಲಾದಂತೆ ನನ್ನ ರಾಜ್ಯದೊಳಗಿದ್ದ ಚರಕುಲಾಂಬುಧಿಚಂದ್ರನ ಚರಣಕಮಲಗಳು ನನಗೆ ಕಾಣದಾಗಿದ್ದುವು. ಆತನ ಚರಣವನ್ನು ಕಾಣದಿರುವುದು ಅನುಚಿತವು " ಎಂದು ಮನದೊಳಗೆ ನಿಶ್ಚಯಿಸಿರಲು ಅಂದಿನ ದಿನವೇ ಆತನಿಗೊಂದು ಕನಸು ಬಿದ್ದು " ನೀನಾಳ್ವ ರಾಜ್ಯದಲ್ಲಿದ್ದ ಮಹಲಿಂಗ ಮುನಿರಾಜನ ಪಾದಕಮಲಗಳನ್ನು ಕಾಣಬೇಕೆ " ಂದು ಪರಶಿವನು ಸೂಚಿಸುವನು. ತನು-ಮನ-ಧನಗಳನ್ನೆಲ್ಲ ಪರಮ ಜಂಗಮನಿಗರ್ಪಿಸಿ ಆತನ ಕರುಣವಡೆಯಬೇಕೆಂದು ತನ್ನ ಚತುರಂಗಬಲದೊಡನೆ ಸಕಲ ಸಂಭ್ರಮದಿಂದ ನರಗಟ್ಟಿಗೈತರುವನು. ಆತನು ಸಂಭ್ರಮದಿಂದ ಬರುತ್ತಿರಲು ಆ ಊರ ಮಹಲಿಂಗಾಖ್ಯನೆಂಬ ಬಾಲಕನು ಅರಸನ ಆನೆಯ ಶುಂಡಾಲಕ್ಕೆ ಸಿಲುಕಿ ಸತ್ತುಹೋಗುವನು. ಅದನ್ನು ಕಂಡು ಅರಸನು ಮರುಗುವನು. ತಾಯಿ ಗಂಗವ್ವೆ ಬಳಲಿ ಬಾಯ್ಬಿಡುವಳು. " ಗಂಡನಿಲ್ಲದ ಬಾಲೆ ಹಾಲು ಸಕ್ಕರೆ ಕೊಂಡು ಕುಡಿಸಿದೆ ಮಗನೆ ಎನಗಾರು ಗತಿಯುಂಟು " ಎಂದು ಹಲುಬುತ್ತ ಮಡಿದ ಮಗನನ್ನು ತಂದು ಮಹಲಿಂಗ ಮುನಿನಾಥನ ಸನ್ನಿಧಿಯಲ್ಲಿರಿಸುವಳು. ಧರಣೀಶ ಮಾಲೋಜಿಯೂ ಅದನ್ನರಿತು ಮುನಿನಾಥನಲ್ಲಿಗೆ ಬಂದು " ಪೂರ್ವಕೃತ ಕರ್ಮದಿಂದ ಈ ಲೋಕಾಪವಾದಕ್ಕೆ ಗುರಿಯಾದೆನು. ಹರಭಕ್ತದ್ರೋಹಕ್ಕೆ ಹರಣ ಕೊಡುವುದೆ ಧರ್ಮ. ಚೋಳಾದಿಗಳ ಧೈರ್ಯ ಎನಗಿಲ್ಲ. ಗುರುವೇ, ಶಿವಭಕ್ತ ಬಾಲಕನ ಅಸುವಿತ್ತು ಕರುಣದಿಂದ ಪೊರೆವುದು " ಎಂದು ಬಿನ್ನೈಸುವನು.

ಅಳಲುತಿಹ ಗಂಗಾಂಬಿಕೆಗೆ ಮುನಿನಾಥನು " ಅಳಲಬೇಡೌ ತಾಯೇ; ಅಳಿದನೆಂದಳುವುದಿದು ಮಾಯೆ; ತಿಳಿದು ನೋಡಿದರೆ ಅಳಿವರಾರು? ಉಳಿವರಾರು? ಮೃಗಜಲ, ಸುರಚಾಪ, ಕಲ್ಲೋಲಮಾಲೆಗಳು ಕಂಡು ಬಯಲಾಗುವಂತೆ ಜಡತನುವಿನ ಮೇಲೆ ಸುಖದುಃಖಗಳು ತೋರಿ ಅಡಗುವವು. ಅದಕ್ಕೆ ಬರಿದೆ ಬಳಲಲಾಗದು. ಎಷ್ಟು ಜನ್ಮಗಳಲ್ಲಿ ನಿನಗೆ ಆತನು ಮಗನಾದನೊ, ಎಷ್ಟು ಜನ್ಮಗಳಲ್ಲಿ

ಸಹಜಾತನಾದನೊ, ಎಷ್ಟು ಜನ್ಮಗಳಲ್ಲಿ ಆತನು ನಿನ್ನನ್ನು ಬಳಲಿಸಿದನೊ ಆರು ಬಲ್ಲರು ? ಸೃಷ್ಟೀಶನ ಲೀಲೆಯನ್ನು ಬಲ್ಲವರಾರು ? ಸುಮ್ಮನೆ ಬಳಲಿ ಗಾಸಿಯಾಗ ಬೇಡ ಎಂದು ಬೋಧಿಸಿ ಶ್ರೀ ವಿಭೂತಿಯನ್ನು ಹಿಡಿದು ಪಂಚಾಕ್ಷರಿಯ ಜಪಿಸುತ್ತ ಬಾಲಕನ ಭಾಳದಲ್ಲಿ ತಳಿಯಲು ನಿದ್ರೆತಿಳಿದೆದ್ದ ವಟುವಿನಂತಾ ಬಾಲನು ಎದ್ದು ಮಹಾಲಿಂಗಜಂಗಮನಾಥನಡಿಗಳ್ಗೆ ನಮಿಸುವನು. ಗಂಗಾಂಬೆ ಹರ್ಷಪುಲಕಿತೆ ಯಾಗಿ ಮಹಾಲಿಂಗನೆಂದು ಹೆಸರಿಟ್ಟುದಕ್ಕೆ ಸಾರ್ಥಕವಾಯಿತೆ ನ್ನುವಳು. ಪೌರಜನರೆಲ್ಲ ಆನಂದಪಡುವರು; ಆಶ್ಚರ್ಯದಳೆವರು. ಮೃತವಾದ ಬಾಲನಿಗೆ ಪ್ರಾಣಕೊಡುವವರಾರು ? ಇದನ್ನು ಕಂಡುದಿಲ್ಲ. ಪೂರ್ವಕೃತಿಯಲ್ಲಿ ಉಕ್ತವಾಗಿ ರುವ ಸೌಂದರನಂಬಿಯ ಕಥೆಯನ್ನು ಮಾತ್ರ ಕಥಿಕರಿಂದ ಕೇಳ್ದು ಬಲ್ಲೆವು.

ಸೌಂದರಗಣಾಧೀಶನು ಸಿತಕಂಠನಾಜ್ಞೆಯಿಂದ ಮರ್ತ್ಯದಲ್ಲಿ ಜನಿಸಿ ಮಹಾ ವೈಭವದಿಂದ ಮೆರೆಯುತ್ತಿದ್ದನು. ನಂಬಿಯಣ್ಣನೆಂಬ ನಾಮವಾಗಿರಲು ಆತನು ಪರಶಿವನನ್ನು ನಂಬಿ, ಪೂಜಿಸಿ, ಆತನಿಂದ ನಿತ್ಯ ಪಡಿಹೊನ್ನುಗಳನ್ನು ಪಡೆಯು ತ್ತಿದ್ದನು. ಕಾಮನ ತಾಪದಿಂದ ಆ ಧನವನ್ನು ರಂಭೆಯರಿಗಿತ್ತು ಸುಖದಿಂದಿರು ತ್ತಿರ್ದನು. ಆ ಊರೊಳಗಣ ಓರ್ವ ಸತಿ ತನ್ನ ಕುವರನಿಗೆ ನಂಬಿಯಣ್ಣನೆಂದು ಹೆಸರಿಟ್ಟಿದ್ದಳು. ಮಗನನ್ನು ಕರೆದುಕೊಂಡು ತಾಯಿ ನೀರಿಗೆ ಹೋಗಿ ಬಟ್ಟೆ ಒಗೆಯುತ್ತಿರಲು ಮಗು ನೀರಲ್ಲಿ ಹೋಗಿ ಮೊಸಳೆಯ ಬಾಯ್ಗೆ ತುತ್ತಾದನು. ತಾಯಿ ನದಿಯ ದಂಡೆಯ ಮೇಲೆ ಕುಳಿತು ಹಲಬುತ್ತೆ " ನಂಬೆಣ್ಣನೆಂಬ ನಾಮವ ನಿಟ್ಟಿರ್ದುದಕ್ಕೆ ನಗೆಗೇಡಾಯ್ತೆಂ"ದು ಒರಲುತ್ತಿರಲು ಆ ಕ್ಷಣದಲ್ಲಿಯೇ ನಂಬಿಯ ಣ್ಣನು ಅಲ್ಲಿಗೆ ಬಂದು ಏಳು ದಿನದಲ್ಲಿ ನಕ್ರನಿಂದ ಆ ಮಗುವನ್ನು ಉಗುಳಿಸಿ ಆತನಿಗೆ ಪ್ರಾಣವನ್ನಿತ್ತನು. ಇಂತಹ ಕಥೆಯನ್ನು ಕೇಳಿ ತಿಳಿದಿದ್ದೆವು. ಮಹಲಿಂಗ ಮುನಿನಾಥನ ಮಹಿಮೆಯಿಂದ ಅದನ್ನು ಈಗ ಪ್ರತ್ಯಕ್ಷ ಕಂಡುದಾಯ್ತು.

**

# ಎಂಟನೆಯ ಸಂಧಿ

ಮಾಲೋಜಿಮಹಾರಾಜನು ಮುನಿಪುಂಗವನನ್ನು ಮನವಾರಿ ಸ್ತೋತ್ರ ಮಾಡುವನು. ಜ್ವರತಪ್ತನಿಗೆ ಸುಧೆಯ ಸವಿ ತಿಳಿಯದು; ಮಂಡೂಕನಿಗೆ ಕ್ಷೀರಾಬ್ಧಿಯ ಘನತೆಯ ಅರಿವಾಗದು. ಅದರಂತೆ ಭೂತಳದ ನರರಿಗೆ ನಿಮ್ಮಿರವು ಅರಿದಾದುದು. ಎಂದು ಮಾಲೋಜಿಯು ಪ್ರಾರ್ಥಿಸುವನು. "ಪರಮಾತ್ಮನ ಸೂಚನೆಯಂತೆ ತಮ್ಮ ದರ್ಶನವಾಗಿದೆ. ಈ ನರಗಟ್ಟಿಯ ಪುರಭೂಮಿಗಳನ್ನು ಕೈಕೊಂಡು ಪದುಳದಿಂದ ಪಾಲಿಸುವುದು" ಎಂದು ಭೂನಾಥನು ಬಿನ್ನಯಿಸುವನು. ಮುನಿನಾಥನು ಆತನ ವದನಾಬ್ಜವನ್ನು ನೋಡಿ ಮುಗುಳ್ನಗೆ ನಕ್ಕು, "ಜನನ ಮರಣಕ್ಕೆ ಜನ್ಮದಾಗರವೆನಿಪ ಕನಕ, ಕಾಂತೆ, ಕರ್ಮಭೂಮಿಗಳನ್ನು ಈ ಜಂಗಮವು ಕನಸಿನಲ್ಲಿಯೂ ಕೂಡ ನೆನೆಯದು. ಆದುದರಿಂದ ನಿಮ್ಮ ಮಾತು ಈ ಜಂಗಮಕೆ ಒಪ್ಪಿಗೆಯಿಲ್ಲ." ಎಂದು ನುಡಿವನು. "ನಾಮ, ರೂಪ, ಕ್ರಿಯೆಯ ಹಂಗಿಗನಾಗದೆ ನಿಷ್ಕಾಮಯುತನಾಗಿ ಪರಮಾನಂದದಿಂದ ಭೂಮಿಯಲ್ಲಿ ಸಂಚರಿಸುತಿಪ್ಪ ಜಂಗಮಕೆ ನರಗಟ್ಟಿ ಪುರವೇತಕೆ ? ನೀನು ವಿಜಯಾಂಗನಾಗು." ಎಂದು ಮುನಿನಾಥನು ಭೂನಾಥನನ್ನು ಹರಸುವನು. ಮಾಲೋಜಿಯು ಕೈಮುಗಿದು "ಗುರುವೆ, ನಿಮ್ಮುತ್ತರಕ್ಕೆ ಪ್ರತ್ಯುತ್ತರವಿಲ್ಲ. ಗುರು-ಲಿಂಗ-ಜಂಗಮಕೆ ತನು-ಮನ-ಧನಗಳನ್ನರ್ಪಿಸಬೇಕೆಂದು ಶಾಸ್ತ್ರನಿಯಮವಿದೆ. ಅದರಿಂದ ಈ ಪುರವನ್ನಂಗೀಕರಿಸಿ ಇದನ್ನು ವರಗಟ್ಟಿಯನ್ನಾಗಿ ಮಾಡಬೇಕೆ"ಂದು ಪ್ರಾರ್ಥಿಸುವನು. ಭೂಪತಿಯ ನುಡಿಗೆ ಮನಮೆಚ್ಚುತ್ತ ಮುನಿನಾಥನು ಆತನ ಮನವನ್ನು ಪರೀಕ್ಷಿಸಬೇಕೆಂದು "ಎಲೈ ದೊರೆಯೇ, ವಾರಶಿಲಿ ರಂಜನೆ, ಮರೀಚಿಯ ನಿಲವು, ಸುರಚಾಪದಾಕಾರ, ಸ್ವಪ್ನದಲ್ಲಿ ಕಂಡ ಸಿರಿ, ಹುಲ್ಲಿನುರಿ, ಭರದಿಂದ ಬರುತ್ತಿರುವ ಹಳ್ಳ, ಧಾರುಣೀಶರ ಭಕ್ತಿ ನಿಜವಲ್ಲವೆಂದು ನೀತಿ ಸಾರುತ್ತಿಹುದು. ಆದುದರಿಂದ ನಿನ್ನ ಬಿನ್ನಹಕ್ಕೆ ಜಂಗಮವು ಸನುಮತಿಸದು." ಎಂದು ನುಡಿವನು. ಆ ನುಡಿಗೇಳಿ ಭೂನಾಥನು "ಎಲೆ ದೇವ, ಕುಂಭಿನಿಯು ಪಾತಾಳಕಿಳಿದರೂ ಇಳಿಯಬಹುದು. ಶಶಿಬಿಂಬ ಶೈತ್ಯವನ್ನುಳಿದು ಬಿಸಿಯಾದರೂ ಆಗಬಹುದು. ಸೂರ್ಯನು ತಂಪಾದರೂ ಆಗಬಹುದು. ನಿಮಗಿತ್ತ ಭಾಷೆ ಹುಸಿಯಾಗದು. ದಾನಪತ್ರವನಿತ್ತಮೇಲೆ ನರಗಟ್ಟಿಯನ್ನು ಮನಸ್ಸಿನಲ್ಲಿ ಮರಿದಾದರೂ ಒಮ್ಮೆ ಮರಳಿ ಬಯಸಿದರೆ ಎನಗೆ ಗೋಹತ್ಯ ಮಾಡಿದ ಪಾಪ ಪ್ರಾಪ್ತವಾಗಲಿ; ಎನ್ನ ರಾಜ್ಯದಲ್ಲಿ ಕಳ್ಳರು ಬಂದು ಕನ್ನಕೊರೆದು

ಚೆನ್ನೆಯರ ವಾಸವನ್ನು ಹೊಕ್ಕು ಚಿನ್ನದಾಭರಣಗಳನ್ನು ಕೊಂಡು ಓಡಲು ಎಚ್ಚತ್ತು ನಾನು ಅವರನ್ನು ಬೆನ್ನಟ್ಟಿ ಬಂದರೆ ಅವರು ನಿನ್ನ ಭೂಮಿಯೊಳಿದ್ದರೆ ಅವರನ್ನು ಮುಟ್ಟದಿಪ್ಪ ಭಾಷೆಯೆನಗಿಹುದು. ಈ ನುಡಿಗೆ ತಪ್ಪಿದರೆ ಘೋರ್ಪಡೆಯ ರಾಯರ ವಂಶಕ್ಕೆ ನಾನು ಬಾಹಿರನು; ಮುನಿವರನೇ ನನ್ನ ಭಕ್ತಿಗ್ರಾಮವನ್ನು ಕೈಕೊಂಡು ಕರುಣದಿಂದ ಪಾಲಿಸುವುದು." ಎಂದು ಪಲವಂದದಿಂದ ಭಯಭಕ್ತಿಪೂರ್ವಕವಾಗಿ ಪ್ರಾರ್ಥಿಸುವನು. ಅದಕ್ಕೆ ಮುನಿನಾಥನು ಮೆಚ್ಚಿ "ಎಲೈ ನರನಾಥನೇ, ನಿನ್ನ ಸಾತ್ವಿಕಭಕ್ತಿಗೆ ಈ ಜಂಗಮದ ಕರಣಗಳು ಕರಗಿದವು. ಇನ್ನು ಸಂದೇಹವಿಲ್ಲ. ಪತ್ತಾರನು ಬಂಗಾರವನ್ನು ಕಾಸಿ ಬಡಿದರೂ ಮತ್ತೆ ಮತ್ತೆ ಅದು ಮಿನುಗುವುದು. ಕಬ್ಬನ್ನು ಕಡಿಖಂಡ ಮಾಡಿ ಸೀಳಿದರೂ, ಗಾಣದೊಳಗಿಕ್ಕಿ ತಿಕ್ಕಿದರೂ ಅದು ಮತ್ತೆ ಸವಿಯನ್ನೇ ಸೂಸುವುದು. ಸದ್ಭಕ್ತರೂ ಅದರಂತೆಯೇ ತಮ್ಮನ್ನು ಕಾಡಿನೋಡಿದರೂ ನಿಜ ಗುಣಾತಿಶಯವನ್ನೇ ತೋರ್ಪಡಿಸುವರು. ನಿನ್ನ ನಿಜಭಕ್ತಿ ಈ ಜಂಗಮಕ್ಕೆ ನಲವಿತ್ತುದು." ಎಂದು ನುಡಿಯಲು ಕಾರ್ಗಾಲದಲ್ಲಿ ಮೇಘವನ್ನು ಕಂಡ ನವಿಲಂತೆ ಮುಧುಳನಗರಾಧಿಪನು ಮುದವೆತ್ತು ಮಂತ್ರಿಯಿಂದ ದಾನಪತ್ರವನ್ನು ಬರೆಯಿಸುವನು. ಸರ್ವಾಂಗಬಂಧುರವಾಗಿದ್ದ ದಾನಪತ್ರವನ್ನು ಕಂಡು ಮಾಲೋಜಿಯು ಮಂತ್ರಿಯನ್ನು ಮನ್ನಿಸುವನು. ಮತ್ತು ಆ ದಾನಪತ್ರವನ್ನು ಸ್ವೀಕರಿಸಬೇಕೆಂದು ಮುನಿಪುಂಗವಗೆ ಕರಕಂಜಗಳ ಮುಗಿದು ಪ್ರಾರ್ಥಿಸುವನು. ಆಗ ಮುನಿನಾಥನು "ಕೊಡುವರಾರು, ಕೊಂಬರಾರು; ಎಲ್ಲವೂ ಮೃಡನಾಜ್ಞೆ" ಎಂದುಕೊಳ್ಳುವನು.

**

# ಒಂಬತ್ತನೆಯ ಸಂಧಿ

"ಮಹಲಿಂಗ ಮುನಿವರನೇ ನಿನ್ನ ಪುರಭೂಮಿ-ಸೀಮೆಗಳು ಮಹಲಿಂಗ ಮಯವಾಗಬೇಕೆಂಬಾಶೆ ಎನಗಿಹುದೆ"ಂದು ಪ್ರಾರ್ಥಿಸಲು ಆತನು ಅದಕ್ಕೊಪ್ಪುವನು. ಲಿಂಗಮುದ್ರೆಯ ಕಲ್ಲುಗಳು ಸಿದ್ಧವಾಗುವವು. ಬಳಿಕ ಭಕ್ತಿ ಭಾಮಿನಿ ಮುಕ್ತಿಕಾಂತನ ಕೈವಿಡಿದಂತೆ ಭೂನಾಥನು ಮುನಿನಾಥನ ಕೈವಿಡಿದು, ಅಂದಳದಲ್ಲಿ ಮೂರ್ತಗೊಳಿಸಿ, ಚತುರಂಗ ಬಲದೊಡನೆ ಮೆರಿವಣಿಗೆಯಲ್ಲಿ ಮುಂದೆ ನಡೆದನು. ಭೇರಿ, ತಮ್ಮಟ, ಕಹಳೆಗಳು ಭೋರ್ಗರೆದವು. ಪೌರಜನರು ಅಂದಳ ಬಳಸಿ ಬಂದರು. ಪೂರ್ವಪುರುಷನು ಈ ದಾನವನ್ನು ಸನ್ಮಾನಿಸಿದನೆಂಬಂತೆ ಮಹಪುರುಷನಾಜ್ಞೆಯಿಂದ ಮಾಲೋಜಿ ಭೂಪಾಲನು ಪೂರ್ವದಿಗ್ಭಾಗದಲ್ಲಿ ಸರ್ವಾಗಮೋಕ್ತ ವಿಧಿಯಿಂದ ಲಿಂಗಮುದ್ರೆಯ ಶಿಲೆಯನ್ನು ಸ್ಥಾಪಿಸಿದನು. ಉತ್ತಮೋತ್ತಮನಿಗೆ ನಾನಿತ್ತ ಶಪಥಗಳ ಉತ್ತರಗಳು ಇದರಂತೆ ನಿಜವೆಂದು ತೋರ್ಪಂತೆ ಉತ್ತರದಿಶಾ ಭಾಗದಲ್ಲಿ, ನಿಶ್ಚಲಮಹಿಮಂಗೆ ಭಕ್ತಿಪೂರ್ವಕವಾಗಿ ಕೊಟ್ಟ ಕಂಚಿನ ಪತ್ರವು ಇದರಂತೆ ನಿಜವೆಂದು ತೋರ್ಪಂತೆ ಪಶ್ಚಿಮದಿಶಾಭಾಗದಲ್ಲಿ, ಮದ್ದಾನಪತ್ರವಿದು ಪಕ್ವದಿದರಂತೆ ನೆಲಸಿಪ್ಪುದೆಂದಿಳೆಗೆ ತೋರ್ಪಂತೆ ದಕ್ಷಿಣದ ಭೂಮಿಯಲ್ಲಿ ಹೀಗೆ ಆ ಪುರದ ಭೂಮಿ-ಸೀಮೆಗಳಿಗೆ ಎಂಟುದಿಕ್ಕುಗಳಲ್ಲಿ ಎಂಟು ಲಿಂಗಮುದ್ರೆಗಳನ್ನು ಸ್ಥಾಪಿಸಿದರು. ಲಿಂಗಸ್ಥಾಪನೆಯ ನಿಮಿತ್ತ ಆರಾಧನೆಯೂ ನಡೆಯುವುದು. ಪರಮಾನ್ನ ಪಾಯಸ ಮೊದಲಾದ ಮೃಷ್ಟಾನ್ನಗಳನ್ನು ಸಿದ್ಧಗೊಳಿಸಿ ನೀಡುವರು. ಆರಾಧನೆ ಮುಗಿದ ಮೇಲೆ ಮುನಿವರನ ಆಶೀರ್ವಾದವನ್ನು ಪಡೆದು ಚತುರಂಗಬಲ ಸಹಿತ ಮಾಲೋಜಿ ತನ್ನ ಪಟ್ಟಣಕ್ಕೆ ಹೋಗುವನು. ತಾಪಸೋತ್ತಮನು ನರ ಮಾಲಮಾಲಕ್ಕೆ ಓಪನೆಂದೆನಿಸಿ ಸದ್ಭಕ್ತ ಸಂಕುಲದ ತಾಪತ್ರಯಗಳನ್ನು ಹರಸುತ್ತ ಮೆರೆದಿರ್ದನು.

**

# ಹತ್ತನೆಯ ಸಂಧಿ

ಮಹಲಿಂಗಮುನಿವರನು ನರಪಾಲಪಾಲನಗರದ ಪುನರ್ನಿರಚನೆಯ ಬಗೆಗೆ ಆಲೋಚಿಸಲು ಆ ಊರ ಸದ್ಭಕ್ತವೃಂದವು ದಿವ್ಯ ಮಂದಿರಗಳನ್ನು ನಿರ್ಮಿಸುವುದು. ಆ ಊರು ಸುಖದ ಸುಗ್ಗಿಗೆ ತವರು ಮನೆಯೆನಿಸಿ ಅತ್ಯಂತ ಕೀರ್ತಿಯುತವಾಯಿತು. ಚೆನ್ನಾಗಿ ರಂಜಿಸಿದುದರಿಂದ ಅದಕ್ಕೆ ಚೆನ್ನಗಿರಿಯೆಂಬ ಹೆಸರಾಯಿತು. ಮಹಲಿಂಗ ಮುನಿವರನ ಆಜ್ಞೆಯಿಂದ ಆ ನಗರವು ಮಹಲಿಂಗಮಯವಾಗಿ ಅನನ್ಯಗುಣದಿಂದ ಶೋಭಿಸಲು ಅದಕ್ಕೆ ಮಹಲಿಂಗಪುರ, ಚೆನ್ನಗಿರಿ ಎಂಬ ಉಭಯ ನಾಮಗಳು ಸಂದುವು. ಭ್ರಮರಕೀಟನ್ಯಾಯದಂತೆ ನರಗಟ್ಟಿಯೆಂಬ ಹೆಸರು ಯಾರಿಗೂ ಅರಿಯದಂತೆ ಮಾಯವಾಯ್ತು. ಲಕ್ಷ್ಮಿಯು ಹರಿಯಂಗಸಂಗವನ್ನು ಬಿಟ್ಟು ಅಲ್ಲಿ ಬಂದು ಸ್ಥಿರಗೊಂಡುದರಿಂದ ಹರನಂಜಿ ಗಿರಿಜೆಯನ್ನು ಎಡದೊಡೆಯಲ್ಲಿ ತಳೆದನಂತೆ. ಬ್ರಹ್ಮನು ಶಾರದೆಯನ್ನು ಮುಖಕಮಲದಲ್ಲಿ ಬಚ್ಚಿಟ್ಟನಂತೆ. ಅಲ್ಲಿರ್ಪ ಭಕ್ತೋತ್ತಮರು ಪರಮ ಪ್ರಮಥಾಳಿಯಾದರು. ಅಲ್ಲಿರ್ಪ ಮಾನವರು ನಿರ್ಜರರಾದರು. ಪಶುಗಳು ಕಾಮಧೇನುಗಳಾದುವು. ಪರಶಿವನ ಪಂಚಮಾಸ್ಯದಿ ಜನಿಸಿರ್ದ ವಾಣಿಜರಿಗೆ ಮಹಲಿಂಗ ಜಂಗಮನಾಥನು ಆ ಊರ ಸೆಟ್ಟಿತನವಿತ್ತನು. ಪಾರ್ವತಿಯ ಗರ್ಭದಲ್ಲಿ ಜನಿಸಿದ ಕುರುಹಿನ ಸೆಟ್ಟಿಗಳಿಗೆ ಗೌಡಿಕೆಯನ್ನೂ, ದೇವಾಂಗನಾನ್ವಯದಿ ಹುಟ್ಟಿರ್ದ ಭಕ್ತನಿಗೆ ಜಾಡಗೌಡಿಕೆಯನ್ನೂ ಹೀಗೆ ಬೇರೆ ಬೇರೆ ವಿಭಾಗದ ಜನರಿಗೆ ಅವರವರ ಕಾಯಕಗಳನ್ನು ಹಂಚಿಕೊಟ್ಟು ಮಹಲಿಂಗ ಮುನಿನಾಥನು ಲಿಂಗಾನಂದದಲ್ಲಿರ್ದನು.

ಇದನ್ನೆಲ್ಲ ಕಂಡ ಅಲ್ಲಿಯ ಭಕ್ತವೃಂದಕ್ಕೆ ಸಿದ್ಧರಾಮೇಶ್ವರನ ನೆನಪಾಗ ತೊಡಗಿತು.

ಸೊನ್ನಲಪುರದಲ್ಲಿ ಸುಗ್ಗಲದೇವಿ, ಮುದ್ದಗೌಡರ ಗರ್ಭದಲ್ಲಿ ಧೂಳಿಮಹಾ ಕಾಳನೆಂಬ ಬಾಲನುದಿಸುವನು. ಬಾಲಲೀಲೆಯ ತಳೆದು ಪಶುಪಾಲನ ಕಾರ್ಯ ದಲ್ಲಿ ನಿರತನಾಗುವನು. ತಾಯಿ ದಿನ ದಿನವೂ ಮಗುವಿಗೆ ಮೊಸರು ಶಾಲ್ಯೋದನ ಗಳ ಬುತ್ತಿಯನ್ನು ಕಟ್ಟಿಕೊಡುತ್ತಿದ್ದಳು. ಒಂದು ದಿನ ಶ್ರೀಶೈಲಮಲ್ಲಿಕಾರ್ಜುನನು ಈತನ ಮಹಿಮೆಯನ್ನು ಮೆರೆಯಬೇಕೆಂದು ವೃದ್ಧ ಜಂಗಮರೂಪದಿಂದ ಆತನು

ಹಸುಕಾಯುವಲ್ಲಿಗೆ ಬಂದು ಅವನೊಡನೆ "ಹಸಿದು ಬೆಂಡಾಗಿರುವೆನು. ನಿನ್ನ ಬುತ್ತಿಯನ್ನಿತ್ತು ಸಂತಸವಡಿಸು" ಎಂದು ನುಡಿಯುವನು. ಮಗು ತಾನುಂಬುದನ್ನು ಬಿಟ್ಟು ತನ್ನ ಬುತ್ತಿಯನ್ನು ಆ ವೃದ್ಧಜಂಗಮನಿಗೆ ಅರ್ಪಿಸುವನು. ವೃದ್ಧನು ಅದನ್ನುಂಡು ತಣಿದು, "ಎಲೆ ಮಗುವೆ ಇಂದುಮೊದಲಾಗಿ ಶ್ರೀಶೈಲವನ್ನು ಬಿಟ್ಟು ನಿನ್ನೊಡನೆ ಈ ಘೋರಾರಣ್ಯದೊಳಗಿದ್ದು ತುರುಗಳನ್ನು ಪಾಲಿಸುವೆನು. ದಿನ ದಿನವೂ ಕಟ್ಟೋಗರವನ್ನು ತಂದುಕೊಟ್ಟು ಉಣಿಸು." ಎಂದು ನುಡಿವನು. ಬಾಲಕನು ಅದಕ್ಕೊಪ್ಪಿ ಮೊದಲಿಗಿಂತ ಮಿಗಿಲಾದ ಅನ್ನವನ್ನು ತರುವೆನೆಂದು ಮುಪ್ಪಿನಯ್ಯನನ್ನು ವಿಪಿನದಲ್ಲಿರಿಸಿ ಮನೆಗೆ ತೆರಳಿದನು. ಷಡ್ರಸ ಪದಾರ್ಥಗಳಿಂದ ಸಿದ್ಧಗೊಳಿಸಿದ ಬುತ್ತಿಯನ್ನು ತೆಗೆದುಕೊಂಡು ಮರಳಿ ಬರುವಷ್ಟರಲ್ಲಿ ಆ ಮಾಯಾ ಜಂಗಮನು ಕಾಣದಾಗಿದ್ದನು. ಸಿದ್ಧರಾಮನು ಬಳಲಿ ಬಾಯಾರಿ ಚೀರಿಡುತ್ತ ಹುಡುಕುತ್ತಿರಲು ಶ್ರೀಶೈಲಯಾತ್ರೆಗೆ ಹೋಗುವ ಜನಸಂದೋಹ ಅಲ್ಲಿಗೆ ಬರುವದು. ಸಿದ್ಧರಾಮನು ಅವರೊಡನೆ ಶ್ರೀಗಿರಿಗೆ ಹೋಗಿ ಅಲ್ಲಿಯ ಮಲ್ಲಿಕಾರ್ಜುನನ ಮೂರ್ತಿಯನ್ನು ಕಂಡು ನಿರಾಶೆಪಟ್ಟು ಬಂದುದಕೆ ಫಲವಾಗಲಿಲ್ಲೆಂದು ಹಂಬಲಿಸುವನು. ಆತನ ಆರ್ತಧ್ವನಿಯನ್ನು ಕೇಳಿ ಶ್ರೀಶೈಲಮಲ್ಲಿಕಾರ್ಜುನನು ತನ್ನ ನಿಜರೂಪದೋರಿ "ಇಂದಿನಿಂದ ನೀನಿರ್ಪ ತಾಣಕ್ಕೆ ನಾನೇ ಬರುವೆ"ನೆಂದು ನುಡಿವನು. ಅದರಂತೆ ಸಿದ್ಧರಾಮನ ಬಳಿವಿಡಿದು ಸೊನ್ನಲಾಪುರಕ್ಕೆ ಬರುವನು. ಸೊಲ್ಲಪಳ್ಳೆಂಬ ಹೆಸರು ಹೋಗಿ ಸಿದ್ಧರಾಮನಿಂದ ಅದು ಸೊನ್ನಲಾಪುರವಾಯ್ತು. ಈ ಪರಮ ಕಥೆಯನ್ನು ಕೇಳಿ ಬಲ್ಲವರಾಗಿದ್ದೆವು. ಅದರಂತೆ ಈ ಮುಹಲಿಂಗಜಂಗಮನಾಥನು ನರವಾಲವಾಲವನ್ನು ಚೆನ್ನಗಿರಿ, ಮುಹಲಿಂಗಪುರವನ್ನಾಗಿ ನಿರ್ಮಿಸಿದನು. ಎಂದು ಭಕ್ತ ಜನರು ಕೊಂಡಾಡಿದರು.

ಮುಗ್ಧಸಂಗಮನೆಂಬ ಗಣನಾಥನು ಶಿವನ ಪೂಜೆಯನ್ನು ಮಾಡುತ್ತ ಕಾಂತಾರದಲ್ಲಿ ಪಶುಪಾಲನಕಾರ್ಯದಲ್ಲಿ ನಿರತನಾಗಿ ಉಪ್ಪರಪಳ್ಳಿಯೆಂಬ ಗ್ರಾಮದಲ್ಲಿದ್ದನು. ಒಂದು ದಿನ ಮುಗ್ಧಸಂಗಮನಾಥನು ದನಕಾಯುತ್ತ ನಿಂತಿರಲು ಶ್ರೀಗಿರಿಗೆ ಹೋಗುವ ಪರಸಿಯು ಅಲ್ಲಿಗೆ ಬಂದಿತು. ಮಲ್ಲಿಕಾರ್ಜುನನ ದರ್ಶನಕ್ಕಾಗಿ ಬಂದೆವೆಂಬ ಪರಸಿಯವರ ಮಾತನ್ನು ಕೇಳಿ, ತಾನು ಇಂದೇ ಶ್ರೀಗಿರಿಗೆ ಹೋಗುವೆನೆಂದು ಹೊರಡುವನು. ಒಂದು ದಿನದಲ್ಲಿ ೬೦ ಗಾವುದ ನಡೆದು ಶ್ರೀಗಿರಿಗೆ ಬಂದು ಮಲ್ಲಿಕಾರ್ಜುನನ ಕೃಪೆಯನ್ನು ಪಡೆದು, ಶ್ರೀಶೈಲದ ಕುರುಹನ್ನು ತೆಗೆದುಕೊಂಡು ಸೂರ್ಯೋದಯವಾಗುವದರೊಳಗಾಗಿ ಊರಿಗೆ ಬಂದನು. ಬರುವಾಗ ಅವನೊಡನೆ ಬೆನ್ನುಹತ್ತಿ ಬಂದ ಲಿಂಗ, ನದಿಗಳನ್ನು ಆತನು ಅಲ್ಲಲ್ಲಿ

ಸ್ಥಾಪಿಸಿ ಉಪುರಕಟ್ಟಿಯನ್ನು ಕೈಲಾಸವೆಂದೆನಿಸುವನು. ಈ ಕಥೆಯನ್ನು ಕೇಳಿ ಬಲ್ಲವರಾಗಿದ್ದೆವು. ಅದರಂತೆ ನಿರಘ ಮಹಲಿಂಗಾಖ್ಯನು ಪರಮನಾಣತಿಯಿಂದ ಈ ಪಟ್ಟಣವನ್ನು ಮೆರೆದನು. ಎಂದು ಅಲ್ಲಿಯ ಜನರು ನುಡಿದರು. ಇದಲ್ಲದೆ ಲದ್ದಿಸೋಮನೆಂಬ ಭಕ್ತನು ಶಿವನಿಗಾಗಿ ಒಂದು ಪಟ್ಟಣವನ್ನು ರಚಿಸಿದ ಕಥೆಯನ್ನೂ ಆ ಸಂದರ್ಭದಲ್ಲಿ ಎತ್ತಿ ಮಾತಾಡತೊಡಗಿದರು.

ಜನತೆ ಹೀಗೆ ಮಾಡುತ್ತಿರುವಾಗ ಮಹಲಿಂಗಾರ್ಯನು ಶಾಸ್ತ್ರಾಗಮ ಪುರಾಣಗಳ ಗೋಷ್ಠಿಯಲ್ಲಿ ನಿರತನಾಗಿ ಸುಖದಿಂದಿರ್ದನು.

**

# ಹನ್ನೊಂದನೆಯ ಸಂಧಿ

ಹೀಗೆ ಪರಮಾನುಭವಗೋಷ್ಠಿಯಲ್ಲಿ ಕಾಲಕಳೆಯುತ್ತ ಮಹಲಿಂಗಮುನಿನಾಥನು ಒಂದು ಕೂಪವನ್ನು ನಿರ್ಮಿಸಬೇಕೆಂದು ನಿಶ್ಚಯಿಸುವನು. ಚೆನ್ನಗಿರಿಯ ಪಶ್ಚಿಮಭಾಗದಲ್ಲಿ ಕೂಪವನ್ನು ನಿರ್ಮಿಸಬೇಕೆಂದು ಭಕ್ತಜನಕ್ಕರುಹಿ ದಾಸಾಖ್ಯನೆಂಬನನ್ನು ಆ ಕಾರ್ಯ ನೋಡುವುದಕ್ಕೆ ನಿಯಮಿಸುವನು. ದಾನಯ್ಯನು ಮಹಲಿಂಗ ಜಂಗಮನು ಅಪ್ಪಣೆಕೊಡಿಸಿದ ಸ್ಥಳದಲ್ಲಿ ಬಾವಿಯನ್ನು ಅಗಿಸುತ್ತಿರುವಾಗ ದೊಡ್ಡ ಕಲ್ಲುಪಡೆ ಹತ್ತುವದು. ಎಷ್ಟು ಪ್ರಯತ್ನಮಾಡಿದರೂ ಆ ಪಡೆ ಅಣುಮಾತ್ರವೂ ಚೂರ್ಣಿಸದೆ ಒಡ್ಡರಿಗೆ ಹಣಿಯದಂತಾಯ್ತು. ದಾನಯ್ಯನು ಮುನಿಪತಿಯ ಬಳಿಗೆ ಬಂದು ಕೈಮುಗಿದು ನಡೆದ ಸಂಗತಿಯನ್ನರುಹುವನು. ಮುನಿನಾಥರು ಆ ನುಡಿ ಕೇಳಿ ಅಲ್ಲಿಗೈತರುವನು. ಆತನು ಬರುವಾಗ ಪದಸೋಂಕಿ ಕುಂಭಿನೀಪತಿ ಪುಳಕ ತಳೆದು ನಲಿಯುದನು. ಮುನಿನಾಥನು ಬಾವಿಯನ್ನು ಅಗಿಯುವ ಸ್ಥಳಕ್ಕೆ ಬಂದು, ಬಸವಾಕ್ಷರವನ್ನು ಮನದಲ್ಲಿ ಜಪಿಸಿ, ಸುರಂಗ ಹೊಡೆಸುವನು. 'ಬ' ಎಂದು ಜಡೆಯಲು ಕಲ್ಲು ಭಾಗವಾಗುವದು. 'ಸ' ಎಂದು ಹೊಡೆಯಲು ಅದು ಸರಿಯುವದು. 'ವ' ಎಂದು ಹಣಿಯಲು ಒಡೆದು ಹೋಳಾಗುವದು. ಹೀಗೆ ಬಾವಿಯನ್ನು ತೋಡುವ ಕಾರ್ಯ ಮುಂದುವರೆದು ಮುಂದುವರೆದು ಯಶಸ್ವಿಯಾಗಿ ಬಾವಿಯಲ್ಲಿ ನೀರು ಬರುವದು. ಅದಕ್ಕೆ ಬಸವತೀರ್ಥವೆಂದು ನಾಮಕರಣ ಮಾಡುವರು. 'ಬ' ಎನಲು ಭವಬಂಧನ ಹರಿದುಹೋಗುವುದು. 'ಸ' ಎನಲು ಶ್ರೀ ಸಂಪದವು ಬಂದೊದಗುವದು. 'ವ' ಎನಲು ವರಭೋಗ ಭರದಿಂದ ಸಿದ್ಧಿಪುದು. 'ತೀ' ಎನಲು ಚಿರತರಾಯುಷ್ಯ ದೊರೆಯುವುದು. 'ರ್ಥ' ಎನಲು ಪರಮಾರ್ಥ ಪದವಿ ಸಮನಿಪುದು. ಎಂದು ಮುನಿನಾಥನು ಬಸವತೀರ್ಥದ ಮಹಿಮೆಯನ್ನು ವಿವರಿಸುವನು. ಮುನಿನಾಥನ ಮಹಿಮೆಗೆ ಜನರು ಆಶ್ಚರ್ಯಪಡುವರು. ಅವರಿಗೆ ಭಗೀರಥನ ಕಥೆ ನೆನಪಾಗುವದು.

ಭರತಕುಲದಲ್ಲಿ ಭಗೀರಥನು ಜನಿಸಿ, ಹನ್ನೆರಡು ವರುಷ ಕಂದಮೂಲವನ್ನು ಸೇವಿಸಿ ತಪವನ್ನಾಚರಿಸಿದನು. ಪರಶಿವನು ಆತನಿಗೆ ಪ್ರತ್ಯಕ್ಷನಾಗಿ ವರವನ್ನು ದಯಪಾಲಿಸಿದನು. ತನ್ನ ಪಿತಾಮಹರೆಲ್ಲ ಕಪಿಲಮುನಿಯಿಂದ ಶಾಪಹತರಾಗಿ ಪಿಶಾಚಿಗಳಾಗಿ ಬಾಧಿಸುತ್ತಿರುವರು. ಅವರನ್ನು ಉದ್ಧರಿಸುವುದಕ್ಕೆ ನಿನ್ನ ಮಸ್ತಕದ

ಗಂಗಾಂಬುವನ್ನು ದಯಪಾಲಿಸಬೇಕೆಂದು ಪ್ರಾರ್ಥಿಸುವನು. ಅದಕ್ಕೊಪ್ಪಿ ಪರಶಿವನು ಒಂದಣು ಶೀಕರವನ್ನು ದಯಪಾಲಿಸಲು ಅದು ಪ್ರಳಯಾಬ್ಧಿಯೆಂಬಂತೆ ಶಿವನ ಜಡೆಯಿಂದಿಳಿದು, ಮೇದಿನಿಯ ಬಳಸಿ, ಭಗೀರಥನ ರಾಜಧಾನಿಗೆ ಬಂದಿತು. ಕಪಿಲಮುನಿಯ ಶಾಪಾಗ್ನಿಯಿಂದ ಬೆಂದ ಭರತವಂಶದ ರಾಯರ ಎಲುವಿನ ಮಾಲೆಯ ಮೇಲೆ ಆ ಪ್ರವಾಹ ಹರಿಯಲು ಅವರಿಗೆಲ್ಲ ನಿಶ್ಶಾಪವಾಗಿ ದಿವ್ಯತನು ಪ್ರಾಪ್ತವಾಗುವುದು. ಈ ಕಥೆಯನ್ನು ಕೇಳಿ ಬಲ್ಲವರಾಗಿದ್ದೆವು. ಇಂದು ಈ ತೀರ್ಥವನ್ನು ರಚಿಸಿ ನಮ್ಮೆಲ್ಲರನ್ನು ಪಾವನ ಮಾಡಿದಿರಿ. ಎಂದು ಆ ಪುರದ ಜನರು ಮುನಿನಾಥನನ್ನು ಕೊಂಡಾಡುವರು.

ಪೂರ್ವದಲ್ಲಿ ಉರುಲಿಂಗದೇವನ ಶಿಷ್ಯನು 'ಆವಜಾವ್' ಎಂಬ ಮಂತ್ರದಿಂದ ಲಿಂಗವನ್ನು ಪೂಜಿಸಿ, ದೊಡ್ಡ ಪಡೆಯನ್ನು ಒಡೆಸಿ, ನೀರನ್ನು ತರಿಸಿ ಮೆರೆದಿದ್ದನಂತೆ. ಅದರಂತೆ ಚೆನ್ನಗಿರಿಯಲ್ಲಿ ಮಹಲಿಂಗಮುನಿವರನು ಬಸವಾಕ್ಷರದ ಮಹಿಮೆಯನ್ನು ತೋರಿಸಿದನು ಎಂದು ಜನರು ಮುನಿನಾಥನ ಮಹಿಮೆಯನ್ನು ಕೊಂಡಾಡಿದರು.

ಒಂದು ದಿನ ಮಹಲಿಂಗಜಂಗಮದೇವನು ಲಿಂಗಪೂಜೆಯನ್ನು ತೀರಿಸಿ ಯೋಗನಿದ್ರಾಮುದ್ರೆಯಿಂದಿರಲು ಆತನಿಗೊಂದು ಸ್ವಪ್ನಬಿದ್ದಿತು. 'ಯೋಗಿವರ್ಯನೇ ರಜತಪುರದ ಭೂಮಿಯಲ್ಲಿ ನಾನು ಬಹುಕಾಲ ಪೂಜಾರ್ಪಣಗಳಿಲ್ಲದೆ ದೇಗುಲವ ಬಿಟ್ಟು ನಿಕ್ಷೇಪದಿಂದಿರುವೆನು; ನನ್ನನ್ನು ಹೊರಗೆ ತೆಗೆದು ಪಾಲಿಸುವುದು ಎಂದು ಶೂನ್ಯಲಿಂಗವು ಹೇಳಿತು. ನನಗೆ ರಾಮಲಿಂಗನೆಂಬ ಹೆಸರಿರುವುದರಿಂದ ಚೆನ್ನಗಿರಿಯ ಭೂಮಧ್ಯದಲ್ಲಿ ರಾಜಿಸುವ ರಾಮಗಿರಿಯಲ್ಲಿ ನನ್ನನ್ನು ಸ್ಥಾಪಿಸಿದರೆ ಸರ್ವಭೂಮಿಯ ಜನಸ್ತೋಮದಿಂದ ಸಂಪೂಜ್ಯನಾಗುವೆನು' ಎಂದು ನುಡಿದು ಆ ಲಿಂಗವು ಬಯಲಾಯಿತು. ಮನಸಿಜಾಂತಕನು ತನ್ನ ಅನನ್ಯ ದಕ್ಷಿಣಭಾಗದ ಮಿಸುಪ ನೇತ್ರವನ್ನು ತೆಗೆದನೆಂಬಂತೆ ಪ್ರಜ್ವಲಿಸಿ ದಿನಪನು ಉದಯಾಚಲದ ತುದಿಯಲ್ಲಿ ಮೆರೆದಿರ್ದನು. ಯೋಗಿವರನು ಆ ಕಾಲದಲ್ಲಿ ನಿತ್ಯ ನಿರುಪಮ ನಿಯೋಗವಿಧಿಗಳ ತೀರಿಸುತ್ತ ಭಕ್ತಮಣಿಗಳಾದ ನಾಗಪತಿ, ತೊಂಡಿಕಟ್ಟೆ ಬಸವಪ್ಪಯ್ಯ, ಎಡವಣ್ಣ ಮೊದಲಾದವರನ್ನು ಕರೆಸಿ ಸ್ವಪ್ನದ ವಿಷಯವನ್ನು ತಿಳಿಸಿದನು. ಭಕ್ತಪುಂಗವರ ಸಂದಣಿಯನ್ನೊಡಗೊಂಡು ಮಹಲಿಂಗ ಮುನಿವರ್ಯನು ರಜತಪುರದತ್ತ ನಡೆಗೊಂಡನು. ಆ ಲಿಂಗವಿರ್ಪ ಸ್ಥಳಕ್ಕೆ ಬಂದು ರಾಮಲಿಂಗವು ಇಲ್ಲಿಹುದು ಎಂದು ನುಡಿಯಲು ಆ ನುಡಿಗೇಳಿ ಮೆಚ್ಚುತ್ತ ರಾಮಲಿಂಗನು ನಲಿದಾಡಿದನು. ಹಿಂದಕ್ಕೆ ಶಿವನು ಸಿಂಧುರಾಸುರನ ಮುಂದಲೆಯಲ್ಲಿ ನೆಲೆಸಿರಲು ನಂದಿನಾಥನು ಬಂದು ಮದ್ದಳೆಯನ್ನು ನುಡಿಸಲು ಅದನ್ನು ಕೇಳಿ ಮುದದಿಂದ ಶಿವನು

ಕುಣಿಯಲು ಅವನ ಕಾಲೊಡಲು ದ್ವಿಭಾಗವಾಗಿ ಬಾಯ್ಬಿಟ್ಟಂತೆ ಮುನಿವರನ ಮುಂದಿರ್ಪ ಭೂಮಿಯಲ್ಲಿ ಆ ಲಿಂಗ ಕುಣಿಯುತಿರಲು ಅವನಿಯು ಇಬ್ಭಾಗವಾಯಿತು. ಜನರು ಒಂದಾಳುದ್ದ ಭೂಮಿಯನ್ನು ಅಗಿದು ಸೋಸಿ ನೋಡಲು ಥಳಥಳಿಸಿ ಬೆಳಗುವ ಲಿಂಗವು ಕಂಗೊಳಿಸಿತು. ಮಹಲಿಂಗಜಂಗಮನ ಕರಪದ್ಮ ಸ್ಪೋಂಕಲು ಆ ಲಿಂಗವು ಘಳಿಲನೇ ಹೊರಹೊಮ್ಮಿ ಬಂದಿತು. ಅಲ್ಲಿಂದ ಮುನಿನಾಥನು ಹೊರಹೊರಡಲು ಆ ಲಿಂಗವು ಆತನ ಬೆಂಬಳಿವಿಡಿದು ಹೊರಳುತ್ತ ಬಂದಿತು. ಚೆನ್ನಗಿರಿಯ ನೆರೆಯ ಪ್ರದೇಶದಲ್ಲಿ ಆ ಲಿಂಗವನ್ನು ಸ್ಥಾಪಿಸಿ ಮುನಿನಾಥನು ಗುಡಿ, ಕೋಟೆ, ಕೊತ್ತಳಗಳನ್ನು ನಿರ್ಮಿಸಿದನು.

ಹಿಂದೆ ದೀಪದಕಲಿಯೆಂಬ ಭಕ್ತನು ಕಾಂತಾರಗಿರಿಯ ಮಧ್ಯದಲ್ಲಿದ್ದ ಪವಿತ್ರವಾದ ದೇವಾಲಯವನ್ನು ತನ್ನ ಪಿತಾಮಹರು ಗಳಿಸಿದ್ದ ದ್ರವ್ಯದಿಂದ ನಿರ್ಮಿಸಿದನು. ಅದರಂತೆ ಮಹಲಿಂಗಮುನಿನಾಥನು ಈ ದೇವಾಲಯವನ್ನು ನಿರ್ಮಿಸಿದನು ಎಂದು ಜನ ಕೊಂಡಾಡಿತು. ರಾಮಲಿಂಗವು ನಡೆದು ಬಂದುದಕ್ಕೆ ಕುರುಹೆಂದು ಅದರ ಹಿಂದಲೆಯು ಈಗಲೂ ನೆಗ್ಗಿರುವುದು. ಇದೆಲ್ಲ ಕೌತುಕವೆಂದು ಜನ ಕೊಂಡಾಡಲು ಬಸವಪೌರಾಣಿಕನು ದೃಷ್ಟಾಂತದ ಕಥೆಗಳನ್ನು ಹೇಳಿದನು.

ಹಿಂದೆ ಕೆಂಭಾವಿಪುರದಲ್ಲಿ ಶೈವಕುಲಸಂಪನ್ನನಾದ ಭೋಗಣ್ಣನೆಂಬ ಭಕ್ತನಿದ್ದನು. ಭಸಿತ, ರುದ್ರಾಕ್ಷಿಗಳನ್ನು ತಳೆದವರು ಯಾವ ಕುಲದವರಾದರೇನು ಅವರು ಲೋಕದಲ್ಲಿ ಎನ್ನ ಬಾಂಧವರೆಂದು ಭಯಭಕ್ತಿಯಿಂದ ಅವರನ್ನು ಆರಾಧಿಸುತ್ತಿದ್ದನು. ಶಿವನೊಬ್ಬನೆ ದೈವ, ಶಿವಭಕ್ತನೇ ಕುಲಜನೆಂಬ ಸಿದ್ಧಾಂತವನ್ನು ತನ್ನ ಹೃದಯಕಮಲದಲ್ಲಿ ಸ್ಥಿರಗೊಳಿಸಿ ಭೋಗಣ್ಣನಿರಲು ಭವನವನ ಭಕ್ತಿಯನ್ನು ಪ್ರಕಟಿಸಬೇಕೆಂದು ಕೈಲಾಸದಿಂದಿಳಿದು ಕೆಂಭಾವಿಗೆ ಕಪಟ ವೇಷದಿಂದ ಬಂದನು. ಭಸಿತ, ರುದ್ರಾಕ್ಷಿಗಳನ್ನು ಅಂಗದಲ್ಲಿ ತಳೆದು ಮಲಿನಾಂಬರಗಳನ್ನು ಸುತ್ತಿಕೊಂಡು ಕೌಪೀನ ಧರಿಸಿ, ನೆರೆಗಂಬಳಿ ಹೊದೆದು ಕೆಂಭಾವಿಯ ಬಾಜಾರದಲ್ಲಿ ಭೋಗಣ್ಣನ ಮನೆಯನ್ನು ಕೇಳುತ್ತ ನಡೆದನು. ಅವನನ್ನು ಕಂಡು ಆ ಪುರದ ವಿಪ್ರೋತ್ತಮರು ಕುಲಭ್ರಷ್ಟರಾಗಿದ್ದರೂ ಅವರು ಭಸಿತ, ರುದ್ರಾಕ್ಷಿಗಳನ್ನು ತಳೆದಿದ್ದರೆ, ಅವರನ್ನು ಶಿವಸ್ವರೂಪರೆಂದು ಕಂಡು, ಭೋಜನಗಳಿಂದ ತಣಿಸಿ, ಭೋಗಣ್ಣನು ಈ ಪುರದಲ್ಲಿ ಹೊಲೆಗಲಸುವನು. ಈ ಭೋಗಣ್ಣ ಕುಲಗೇಡಿ; ಇವನನ್ನು ಕೆಂಭಾವಿಯಿಂದ ಹೊರಹಾಕಬೇಕು ಎಂದು ಎಲ್ಲರೂ ಕೂಡಿ ತಮ್ಮಲ್ಲಿ ಮಾತನಾಡುತ್ತಿರಲು ಆ ಕಪಟ ರೂಪದ ಶಿವನು ಭೋಗಣ್ಣನ ಮನೆಯನ್ನು ಪ್ರವೇಶಿಸಿದನು. ಅದನ್ನು ಕಂಡು ಕೋಪದಿಂದ ಬಂದು ಎಲೆ ಪಾಪಿ ಭೋಗಣ್ಣ ಚಂಡಾಲನೊಳಪೊಕ್ಕನು. ಬ್ರಾಹ್ಮ

ಣೋತ್ತಮರ ಕುಲವನ್ನು ಖಂಡಮಾಡಿದಿ ಎಂದು ಎಲ್ಲ ಬ್ರಾಹ್ಮಣರು ಭೋಗಣ್ಣನ ಮನೆಯನ್ನು ಮುತ್ತಿ ಅಂಡಲೆಯುತಿರಲು ಅತ್ತ ಕಪಟರೂಪಧಾರಿಯಾದ ಜಂಗಮನ ಭಸಿತ, ರುದ್ರಾಕ್ಷಿಗಳನ್ನು ಕಂಡು ಭೂರುದ್ರನೆಂದೆನುತ ಭೋಗಣ್ಣನು ಭಕ್ತಿಯಿಂ ನಮಿಸಿ ಕೈಮುಗಿಯಲು ಶಿವನು ಪ್ರತ್ಯಕ್ಷನಾಗಿ 'ಭೋಗಣ್ಣ, ಇದು ನಿಗಮೋಕ್ತ ಮಾರ್ಗ. ನಿನ್ನ ನಿಷ್ಠೆಯನ್ನು ನೋಡಲು ಶ್ವಪಚಾಕೃತಿಯಿಂದ ಬಂದಿಹೆನು. ಕಾಡುತಿಹ ದ್ವಿಜರಿಗಂಜದಿರು' ಎಂದು ಹೇಳಿ ಶಿವನು ಬಯಲಾದನು. ಭೋಗಣ್ಣನ ಮನೆಯನ್ನು ಹೊಕ್ಕ ಆ ಶ್ವಪಚನನ್ನು ಕಾಣದೆ ಕೋಪೋದ್ರೇಕದಿಂದ ಎಲೇ ಭೋಗಣ್ಣ, ನೀನು ಮೋಸ ಮಾಡಿರುವಿ; ಕೆಂಭಾವಿಯನ್ನು ಬಿಟ್ಟು ಹೊರಟು ಹೋಗು ಎಂದು ಆ ಬ್ರಾಹ್ಮಣರು ಮಾತ್ಸರ್ಯದಿಂದ ಮಾತನಾಡುವರು. ಋಕ್, ಯಜುಸ್, ಸಾಮ, ಅಥರ್ವ ವೇದಿಗಳಿಗೆ ಇದು ಹೊಲ್ಲ; ಎಂದು ಗೋವಿಂದ ಶಾಸ್ತ್ರಿಗಳು, ಶ್ರೀರಾಮಪಂಡಿತರು, ವಸುದೇವವಾಗ್ಮಿ, ನರಸಿಂಹಕೋವಿದ ಮೊದ ಲಾದ ಪರಮ ವೈದಿಕರೆಲ್ಲ ನೆರೆದು ಭೋಗಣ್ಣನನ್ನು ಕೆಂಭಾವಿಯಿಂದ ಹೊರಹಾಕ ಬೇಕೆಂದು ನಿರ್ಣಯಿಸಿ, ಅವನಿಗೆ ಆ ನಿಷ್ಠುರದ ನಿರ್ಣಯವನ್ನು ತಿಳಿಸಿದರು. ಭೋಗಣ್ಣನು ಬೇರೆ ಊರಿಗೆ ಹೊರಟನು. ಕಂಜಾಪ್ತನು ಗೂಗೆಗಳಿಗೆ ಅಂಜುವನೇ? ಯೋಗಿಗಳು ಮದನಾನುರಂಜನೆಗೆ ಕೊರಗುವರೇ ? ಭೋಗಣ್ಣ ಬ್ರಾಹ್ಮಣರ ಈ ಪೊಳ್ಳು ಮಾತಿಗಂಜುವನೇ ? ಎಂದು ಬಸವ ಪೌರಾಣಿಕನು ಭಕ್ತಾಳಿಗೆ ತಿಳಿ ಸಿದನು.

ಸೂರ್ಯಾಸ್ತಮಯ ಕಾಲಕ್ಕೆ ಆ ನಗರವನ್ನು ಬಿಟ್ಟು ಭೋಗಣ್ಣನು ಧೈರ್ಯಸ್ಥನಾಗಿ ನಡೆಯಲು ಅಲ್ಲಿದ್ದ ಮುನ್ನೂರಮೂವತ್ತು ಲಿಂಗಗಳು ದೇಗುಲ ಗಳನ್ನು ಬಿಟ್ಟು ನಿನ್ನನಗಲಿ ಜೀವಿಪರಲ್ಲ ಎಂದು ಆತನ ಬೆನ್ನುಹತ್ತಿ ನಡೆಗೊಂಡುವು. ಬೇಲೂರು ಎಂಬ ಗ್ರಾಮಕ್ಕೆ ಬಂದು ಆ ರಾತ್ರಿ ಅಲ್ಲಿರಬೇಕೆಂದು ಭೋಗಣ್ಣನು ಒಂದು ದೇವಾಲಯವನ್ನು ಪ್ರವೇಶಿಸಲು ಆ ಲಿಂಗಗಳು ಅಲ್ಲಿಗೈತರುವವು. ಲಿಂಗ ಗಳು ನೊಂದವೆಂದು ಭೋಗಣ್ಣನು ಮನನೊಂದು ಕರದಿಂದ ಮೈದಡವಿದನು. ಎನಗಾಗಿ ಭೋಗಣ್ಣನು ಕೆಂಭಾವಿಯನ್ನು ಬಿಟ್ಟು ಬಂದನು. ಅವನನ್ನು ಕಾಣ ಬೇಕು ಎಂದು ಶಿವನು ದಕ್ಷಿಣಾಕ್ಷಿಯನ್ನು ತೆರೆದನೆಂಬಂತೆ ಪೂರ್ವದಿಗಂತದಲ್ಲಿ ರವಿ ಬಿಂಬ ತಲೆದೋರಿತು. ಹೊತ್ತಾರೆ ಎದ್ದು ಅಲ್ಲಿಯ ವಿಪ್ರರು ನಿತ್ಯನೇಮಗಳನ್ನು ತೀರಿಸಬೇಕೆಂದು ದೇವಾಲಯಗಳಲ್ಲಿ ಪ್ರವೇಶಿಸಿ ನೋಡಲು ಅಲ್ಲಿಯ ಪೀಠಗಳು ಶೂನ್ಯವಾಗಿದ್ದುದನ್ನು ಕಂಡು ಭಯಗೊಳ್ಳುವರು. ಗ್ರಹ ಹೊಡೆದವರಂತೆ ಗಾವಿ ಲರು ಭ್ರಮಿಸಿ ಆವಜನ್ಮದ ಕರ್ಮ ಸಿದ್ಧಿಸಿತೋ ಎಂದು ಶಂಕರಶಾಸ್ತ್ರಿಗಳಿಗೆ ತಿಳಿಸು

ವರು. ಭೋಗಣ್ಣನ ಮಹಿಮೆಯನ್ನು ಅರಿಯದ ಅಂಧತನದ ಫಲವೆಂದು ತಿಳಿದು ಆತನಿದ್ದ ಬೇಲೂರಿಗೆ ಬಂದರು. ಅಲ್ಲಿ ಲಿಂಗದ ಮಧ್ಯದಲ್ಲಿ ಕುಳಿತಿರ್ದ ಭೋಗಣ್ಣನನ್ನು ಕಂಡು ಕೈಮುಗಿದು ತಮ್ಮನ್ನು ಪಾಲಿಸಬೇಕೆಂದು ಪ್ರಾರ್ಥಿಸುವರು. ಭೋಗಣ್ಣ ಮರುಮಾತಾಡದೆ ಮರಳಿ ಊರಿಗೆ ಬರಲು ಲಿಂಗಗಳು ಆತನ ಬೆನ್ನು ಹತ್ತಿ ಬಂದುವು. ಮಹಲಿಂಗಮುನಿವರನನ್ನು ಬೆನ್ನುಹತ್ತಿ ಲಿಂಗಬಂದಿತೆಂಬುದಕ್ಕೆ ಇದು ದೃಷ್ಟಾಂತವು ಎಂದು ಬಸವ ಪೌರಾಣಿಕರು ಹೇಳಲು ಕೇಳಿ ಜನ ಸಂತೋಷಭರಿತರಾದರು.

**

# ಹನ್ನೆರಡನೆಯ ಸಂಧಿ

ಮಹಲಿಂಗಜಂಗಮನಾಥನು ಪರಮಾನುಭವಗೋಷ್ಠಿಯಿಂದ ಭಕ್ತಸಂಕುಲವನ್ನು ಪರಿಪಾಲಿಸುತ್ತಿರಲು ಆತನ ಬಸವತೀರ್ಥದ ಮಹಿಮೆಯನ್ನೂ ಚೆನ್ನಗಿರಿಲಿಂಗ ಆತನ ಬೆಂಬಳಿವಿಡಿದು ಬಂದ ಮಹಿಮೆಯನ್ನೂ ಕೇಳಿ ಮಾಲೋಜಿಮಹಾರಾಜನು ಸಂತೋಷದಿಂದ ಆ ಮಹಾಮಹಿಮನನ್ನು ಕಾಣಬೇಕೆಂದು ಚತುರಂಗ ಬಲದೊಡನೆ ಚೆನ್ನಗಿರಿಗೆ ನಡೆಗೊಂಡನು. ಬರುತಿರಲು ಚೆನ್ನಗಿರಿ ಕಣ್ಗೆ ಮಂಗಲವಾಗಿ ತೋರಿತು. ಆ ಪುರದ ದಕ್ಷಿಣಭಾಗದ ಪರ್ವತದಲ್ಲಿ ಸ್ಥಾಪಿಸಿದ ಚೆನ್ನಗಿರಿ ಲಿಂಗದ ಮಹಾದುರ್ಗ ಮನಕೆ ಮಂಜುಲವಾಗಿದ್ದಿತು. ಆ ಪರ್ವತದ ನೆರೆಯಲ್ಲಿ ಸೈನ್ಯಬಿಟ್ಟು ನಡೆಯುತ್ತ ಚೆನ್ನಗಿರಿಲಿಂಗದ ಆಲಯಕ್ಕೆ ಬಂದನು. ಆ ಲಿಂಗಕ್ಕೆ ನಮಸ್ಕರಿಸಿ ಮಾಲೋಜಿಯು ಅಲ್ಲಿಂದ ಬಸವತೀರ್ಥಕ್ಕೆ ಬಂದನು. ಮುಂದಗಾಮಿನಿಯರಾರಾಟದಿಂದ, ಚಂದ ನಾಂಗಿಯರ ಸಂಚಾರದಿಂದ ಬಸವತೀರ್ಥವು ಕಣ್ಗೆ ಚೆಂದವಾಗಿದ್ದಿತು. ಕಂಕಣವು ಝಣರೆನಲು ಕರಕಂಜದಲ್ಲಿ ಬೆಡಗಿನಿಂದ ನೀರ್ದುಂಬುತ್ತಿದ್ದ ಕರಿಗಮನೆಯರು ಸೋಪಾನಗಳನೇರಿ ಬಿಂಕದಿಂದ ಬರುತ್ತಿದ್ದರು. ಅದನ್ನು ಕಂಡು ನೇತ್ರಾನಂದ ಹೊಂದಿ ಇದು ಪವಿತ್ರಜಲವೆಂದು ಭಕ್ತಿಯಿಂದ ಸೇವಿಸಿ ಮನದಲ್ಲಿ ತೃಪ್ತಿವಡೆದು ಮಾಲೋಜಿಯು ಮಹಲಿಂಗಮುನಿನಾಥನ ಆಶ್ರಮಕ್ಕೆ ಬಂದನು. ಮುನಿನಾಥನ ಕೀರ್ತಿಯನ್ನು ಬಣ್ಣಿಸಿ ಬಣ್ಣಿಸಿ ಹಾಡಿ ಪಾಲಿಸಬೇಕೆಂದು ಪ್ರಾರ್ಥಿಸುವನು. ಮೋದಪುರಕ್ಕೆ ದಯಮಾಡಿಸಬೇಕೆಂದು ಬಿನ್ನಯಿಸುವನು. ಮಾಲೋಜಿಯ ವಿನಯೋಕ್ತಿಗಳಿಗೆ ಮನಮೆಚ್ಚಿ ಮಹಲಿಂಗಜಂಗಮನು ಒಪ್ಪಿಗೆ ಕೊಡುವನು.

ಮಹಪುರುಷನಾಗಮದ ನಿಮಿತ್ತ ಪುರವನ್ನು ಶೃಂಗರಿಸಬೇಕೆಂದು ಅಪ್ಪಣೆ ಹೊರಡಿಸುವನು. ಸಾರಣೆ, ಕಾರಣೆ, ತೋರಣ, ಚಳೆಯಗಳಿಂದ ಜನರು ಆ ಪುರವನ್ನು ಸಿಂಗರಿಸುವರು. ಆ ಮೇಲೆ ಮುಕ್ತಿಕಾಂತನ ಕರವನ್ನು ಭಕ್ತಿ ಭಾಮಿನಿಯು ಪಿಡಿವಂತೆ ನರನಾಥನು ಭಕ್ತಿಯಿಂದ ಮುನಿಚಂದ್ರಮನ ಪಾಣಿಪಲ್ಲವವನ್ನು ಹಿಡಿದು ಅಂದಳದಲ್ಲಿ ಮೂರ್ತಗೊಳಿಸಿ ಸಮಸ್ತ ಬಲಸಹಿತ ಮುಕ್ತಾತಪತ್ರದಿಂದ ಚೆನ್ನಗಿರಿಯನ್ನು ಬಿಟ್ಟು ಮೋದಪುರದತ್ತ ನಡೆಗೊಂಡನು. ಬಂದನಿದೆ ಬಂದನಿದೆ ಮಹಲಿಂಗಪುರನಾಥ; ಬಂದನಿದೆ ಬಂದನಿದೆ ಮಾಲೋಜಿವರದಾತ; ಬಂದನಿದೆ ಬಂದನಿದೆ ಪರಮ ಜಗದಾರಾಧ್ಯ; ಬಂದನಿದೆ ಬಂದನಿದೆ ನಿಗಮಾಗಮಾ

ಭೇದ್ಯ; ಬಂದನಿದೆ ಶ್ರೀವೋದಪುರಕೆಂದು ಕಹಳೆಗಳು ಮುಂದೆಸೆಯಲ್ಲಿ ಚೀರಿದವು. ಊರಿಗೆ ಬಂದೊಡನೆ ಬಾಲೆಯರು ಮುತ್ತಿನಾರತಿಗಳನ್ನು ಬೆಳಗಿದರು. ಇಳೆಯಾಣ್ಮ ಮಹಲಿಂಗಮುನಿವರನ ಅಂದಳವು ಮುಂದೆ ಬರಲು ಓರ್ವ ಜಲಜಾಕ್ಷಿ ಮಹಲಿಂಗ ನಾರೆಂದು ಬೆಸಗೊಳಲು ಮತ್ತೋರ್ವಳು ಕೈಸನ್ನೆಯಿಂ ತೋರಿ ಕೈಲಾಸದಿಂದ ಬಂದ ಚರನಾಥನು ಈತನೇ. ಸಕಲ ಕ್ಷೇತ್ರಾಳಿಗಳನ್ನು ನಿರ್ಮಿಸಿದಾತನು ಈತನೇ. ಸಪ್ತಶತವರ್ಷ ಬಾಳಿದಾತನು ಈತನೇ. ಎಂದು ಮಂತಾಗಿ ಆತನ ಮಹಿಮೆ ಯನ್ನು ಬಣ್ಣಿಸಿದಳು.

ಆ ಮೇಲೆ ಮಾಲೋಜಿಮಹಾರಾಜನು ಮಹಲಿಂಗಜಂಗಮನಾಥನ ಅಂದಳವ ನಿಳಿಸುತ್ತ ಕನಕಮಯವಾದ ಸಭಾಸ್ಥಾನಕ್ಕೆ ಕರೆತಂದು ಮೃಗಪೀಠದಲ್ಲಿ ಮೂರ್ತ ಗೊಳಿಸಿದನು. ಆತನ ಅರ್ಧಾಂಗಿ ಬಂದು ಮುತ್ತಿನಾರತಿ ಬೆಳಗಿ ಜಯತೆಂದು ಕೊಂಡಾಡಿದಳು. ಮಾಲೋಜಿಯು ಆ ದಿನ ಶ್ರೀಗುರುವಿನ ಪಾದಪೂಜೆಯನ್ನು ಸಂಭ್ರಮದಿಂದ ನೆರವೇರಿಸಿದನು. ಮುನಿನಾಥನ ಲಿಂಗಪೂಜೆಗಾಗಿ ಛಾತ್ರ ವೊಂದನ್ನು ನಿರ್ಮಿಸಿದರು. ಅಲ್ಲಿಗೆ ಎಲ್ಲರೂ ಸಕಲ ಸಂಭ್ರಮದಿಂದ ಹೋದರು. ಮುನಿಪತಿಯ ಲಿಂಗಪೂಜೆಯಾಯಿತು. ಮಮಜನ್ಮಭೂಜಾತ ಫಲವಾಯ್ತೆಂದು ಮಾಲೋಜಿಯು ಪೊಡಮಟ್ಟನು. ಮುನಿಪತಿಯು ಆತನನ್ನೂ, ಸಕಲ ಭಕ್ತ ವೃಂದವನ್ನೂ ಆಶೀರ್ವದಿಸಿದನು. ಭೂಪತಿಯು ಅಲ್ಲಿಂದ ಮರಳಿ ನಿಜನಿವಾಸ ಕೈತಂದನು.

**

# ಹದಿಮೂರನೆಯ ಸಂಧಿ

ಮೋದಪುರದ ಛಾತ್ರದಲ್ಲಿ ಮಹಲಿಂಗಜಂಗಮನಾಥನು ಪರಮಾನುಭವ ಗೋಷ್ಠಿಯಿಂದಿರಲು ಸುಟರಟ್ಟಿ ಎಂಬ ಹಳ್ಳಿಯ ಶಿವಭಕ್ತ ಗಂಗ್ಯಾಖ್ಯನು ಅಲ್ಲಿಗೆ ಬಂದು ನಮಸ್ಕರಿಸಿ ಲಿಂಗಾರ್ಪಣದ ಬಿನ್ನಹವನ್ನು ಸ್ವೀಕರಿಬೇಕೆಂದು ಪ್ರಾರ್ಥಿಸಿದನು. ಚರವರೋತ್ತಮನು ಒಪ್ಪಲು ಗಂಗಾಖ್ಯನು ಪರಿಪರಿಯ ಶಾಕಪಾಕಗಳನ್ನು ಸಿದ್ಧಗೊಳಿಸುವನು. ವೀರಮಾಹೇಶ್ವರರ ಸಮೂಹವು ಮುನಿವರನ ಕೀರ್ತಿಯನ್ನು ಕೇಳಿ ಆ ದಿನ ಅಲ್ಲಿಗೆ ಅಪರಿಮಿತವಾಗಿ ಆಗಮಿಸಿತು. ಅದನ್ನು ಲಿಂಗದಲ್ಲಿಯೇ ಕಂಡ ಮುನಿನಾಥನು ಅವರಿಗೆಲ್ಲ ತೃಪ್ತಿಬಡಿಸಬೇಕೆಂದು ನಿರೂಪಿಸಿದನು. ಮಾಡಿದ ಅಡಿಗೆ ಪ್ರಮಥಪುಂಗವರಿಗೆಂತು ಸಾಲುವದೆಂದು ಚಿಂತೆಯಿಂದ ಗಂಗಾಖ್ಯನು ಬಿನ್ನಯಿಸಲು ಮಹಲಿಂಗಜಂಗಮನು ಇಂದುಧರನಾಜ್ಞೆಯಿಂದ ತೃಣಪರ್ವತವಾಗುವುದು; ಬಂದ ಬರವು, ನಿಂದ ನಿಲುವನ್ನು ತಿಳಿದು ಮಾಡುವುದೆ ಸದ್ಭಕ್ತನಾದವನಿಗೆ ಸನ್ಮಾರ್ಗವು ಎಂದು ಸೂಚಿಸಲು ಗಂಗಾಖ್ಯನು ಜಂಗಮಾವಳಿಯನ್ನು ಸತ್ಕರಿಸಲಾರಂಭಿಸಿದನು. ಶಾಕಪಾಕಾದಿಗಳ ಸಮೂಹವನ್ನು ಮಹಾಲಿಂಗನು ನಿಜಹಸ್ತದಿಂದ ಸ್ಪರ್ಶಮಾಡಿದನು. ಗಂಗಾಖ್ಯನು ಭಕ್ತಿಯಿಂದ ಚರಕುಲಕೆ ಎಡೆ ಮಾಡಲು ಆ ಪಾಕ ಪೂರಿಯೇರಿತು. ಶಿವಜಂಗಮಾವಳಿಯು ಅದನ್ನುಂಡು ತಣಿದು ತೇಗಿ ಮಹಾಲಿಂಗನ ಮಹಿಮೆಯನ್ನು ಮನವಾರೆ ಹೊಗಳಿ ಲೋಕಾರಾಧ್ಯ ಜಯತೆಂದು ನಮಿಸಿದರು.

ಕಲ್ಯಾಣಪಟ್ಟಣದಲ್ಲಿ ಮೋಳಿಗೆಯ ಮಾರಯ್ಯನು ಬಾಂಡದಂಬಲಿಯಿಂದ ಲಕ್ಷಗಣನೆಯ ಮೀರಿದ ಪ್ರಮಥಗಣಸಂಜಾತಕ್ಕೆ ತೃಪ್ತಿಮಾಡಿದನೆಂಬ ಕಥೆಯನ್ನು ಹೇಳುವರು; ಇಂದು ಮಹಲಿಂಗಮುನಿಯು ಪ್ರತ್ಯಕ್ಷವಾಗಿಯೆ ತೋರಿದನು. ಎಂದು ಪಲವಂದದಿಂದ ಬಣ್ಣಿಸುತ್ತ ಧರಣಿಪತಿ ಮೊಲಾದ ಪೌರಜನರು ತನ್ಮಹಿಮ ನಡಿದಾವರೆಗೆ ನಮಿಸುತ್ತ ಕೈಮುಗಿದು ಬೀಳ್ಕೊಂಡು ನಿಜಮಂದಿರಕ್ಕೆ ನಡೆದರು. ಇತ್ತ ಗಂಗಾಖ್ಯನು ಗುರುವರನ ಚರಣಾಂಬುಶೇಷಂಗಳಿಂದ ತಣಿದು ಚರಕುಲಕೆ ನಮಿಸಿ ತನ್ನಾಲಯಕೆ ಬೀಳ್ಕೊಂಡು ಬಂದು ಸುಖದಿಂದಿರ್ದನು. ಮಹಲಿಂಗ ಮುನಿನಾಥನು ಸದ್ಭಕ್ತರನ್ನು ಪರಿಪಾಲಿಸುತ್ತ ಮೋದಪುರದ ಛಾತ್ರದಲ್ಲಿ ಪರಮಾನಂದದಿಂದಿರ್ದನು.

ಒಂದು ದಿನ ಮುನಿನಾಥನು ಘನಸಭಾಮಧ್ಯದಲ್ಲಿ ಪ್ರಜ್ವಲಿಪ ಸಿಂಹಪೀಠದಲ್ಲಿ ಮೂರ್ತಗೊಂಡಿರಲು ಮುಂಡಾಸದ ಬಸವಲಿಂಗನಾತ್ಮಜನೆನಿಪ ಸಂಗನಬಸವನು ಬಂದು, ಮುನಿಪೋತ್ತಮನ ಮೆಲ್ಲಡಿಗೆ ನಮಿಸಿ ಕೈಮುಗಿದು ಮುನಿವರ್ಯನೇ, ಎನ್ನ ನೇತ್ರಾಬ್ಜಗಳು ಅಡಗಿ ಕಾಣಿಸದಾಗಿ ಬನ್ನಬಡಿಸುತ್ತಿವೆ. ವೈದ್ಯರಿಂದೇನೂ ಫಲವಾಗದೆ ನೀವೇ ಗತಿಯೆಂದು ಬಂದಿರುವೆನು. ರುದ್ರಮ್ಮನಕ್ಷಿಯ ಕೊಟ್ಟ ತೆರದಿಂದೆ ಕರುಣಿಪುದು ಎಂದು ಪ್ರಾರ್ಥಿಸಿದನು. ಮುನಿನಾಥನು ಸದ್ಭಕ್ತನ ವದನಾಂಬುಜವನ್ನು ಕರುಣೆಯಿಂದ ನೋಡಿ, ಮೈದಡವಿ, ಭಸಿತ-ಪಾದಾಂಬುಗಳನ್ನು ತನ್ನ ಕರದಿಂದ ಅನುಲೇಪನಮಾಡಲು ಆತನ ನೇತ್ರಗಳು ಕನಕಪಂಕಜದಂತೆ ಥಳಥಳಿಸಿ ತೋರಿದವು. ಭಕ್ತಸಂಗನಬಸವನು ಅತ್ಯಾನಂದದಿಂದ ಹಿಗ್ಗಿ ಗುರುವಿನಡಿದಾವರೆಯಲ್ಲಿ ತನ್ನ ತನುವನೀಡಾಡುವನು. ಜನರೆಲ್ಲ ಅಚ್ಚರಿದಳೆದು ಜಡೆಯದೇವನ ಮಹಿಮೆಯನ್ನು ಜಗದೊಡೆಯನೇ ಬಲ್ಲನೆಂದು ಕೊಂಡಾಡಿದರು.

ಆಗ ಮಾಲೋಜಿಮಹಾರಾಜನು ಸಂಗನಬಸವಭಕ್ತೋತ್ತಮನ ನೇತ್ರಗಳಿಗೆ ಅನುಲೇಪನ ಮಾಡಿ ಅವನ್ನು ಋಜುಮಾಡಿದ ಪಾದೋದಕ, ಭಸಿತಗಳ ಮಹಿಮೆಯನ್ನು ವಿವರಿಸಬೇಕೆಂದು ಮುನಿನಾಥನಲ್ಲಿ ಪ್ರಾರ್ಥಿಸಿದನು. ಮನಮೆಚ್ಚಿ ಮಹಲಿಂಗ ಜಂಗಮವರ್ಯನು ಪೇಳಲುಜ್ಜುಗಿಸಿದನು.

**

# ಹದಿನಾಲ್ಕನೆಯ ಸಂಧಿ

ಧರಣೀಶನೇ, ಭಸಿತ-ಪಾದಾಂಬುಗಳ ಮಹಿಮೆಯು ಬಣ್ಣಿಸಲಸದಳವಾದುದು. ಸ್ವರ್ಗಾದಿ ಲೋಕಗಳಲ್ಲಿ ಅವನ್ನು ನೆರೆನಂಬಿ ಧರಿಸಿದವರು ಪಾವನರಾಗಿರುವರು. ಭಸಿತ-ಪಾದಾಂಬುಗಳಿಂದ ಅನೇಕ ಜನರು ಪರಿಪರಿಯ ರೋಗ-ದಾರಿದ್ರ್ಯಗಳನ್ನು ಪರಿಹರಿಸಿ, ದುರಿತನಿವಾರಣೆ ಮಾಡಿಕೊಂಡು ಪರಮಾತ್ಮನ ಕರುಣೆಯನ್ನು ಪಡೆದಿರುವರು.

ಕಂಜಸಖನು ಪೂರ್ವದಲ್ಲಿ ಗೌತಮನ ಕುಲಸತಿಯ ಮಂಜುಲರೂಪವನ್ನು ನೋಡಿ, ಮನಸೋತು, ರತಿಕ್ರೀಡೆಗೆ ಕರೆಯಲು ಅದನ್ನರಿದು ಮುನಿಪನು ಘನ ಕೋಪದಿಂದ ಎಲೇ ಪಾಪಿ, ಕೃಷ್ಣಾಂಗನಾಗೆಂದು ಶಾಪ ಕೊಡಲು ಸೂರ್ಯನು ಬಣ್ಣವಳಿದು ಕಪ್ಪಾಗಿ ಮರುಗುತ್ತ ನಂದೀಶನಾಶ್ರಮಕ್ಕೆ ಬಂದನು. ನಂದೀಶನಿಗೆ ವಂದನಗೈದು, ನಡೆದ ಸಂಗತಿಯನ್ನರುಹಿ ತನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಿದನು. ಕಂದರ್ಪಹರನಂಘ್ರಿಜಲದಿಂದ ಮಿಂದು ಪರಿಶುದ್ಧನಾಗೆಂದು ಆತನು ಹೇಳಲು ಅದರಂತೆ ಮಾಡಿ ತಾನು ಪರಿಶುದ್ಧನಾದನು.

ಕಲ್ಯಾಣನಗರದಲ್ಲಿ ಧರಣೀಶ ಬಿಜ್ಜಳನು ಬರುತ್ತಿರಲು ಬಸವಣ್ಣನವರ ಮಹಾಮನೆಯ ಮುಂದಿನ ಚರತೀರ್ಥದ ಕೊಳವನ್ನು ಕಂಡು, ಬಸವಣ್ಣನನ್ನು ಇದೇನೆಂದು ಬೆಸಗೊಂಡನು. ಅದು ಸಿದ್ಧರಸ ಸರಸಿ ಎಂದು ಬಸವೇಶನುತ್ತರಿಸಲು ಪರಿಹಾಸ್ಯದಿಂದ ಪಂಚಲೋಹಗಳನ್ನು ತರಿಸಿ ಕಾಸಿ, ಅದರೊಳಿರಿಸಿದನು. ಸಿದ್ಧರಸದ ಮಹಿಮೆಯಿಂದ ಅದು ಚೊಕ್ಕ ಬಂಗಾರವಾಯಿತು. ಎಂದು ಮಹಲಿಂಗ ಮುನಿವರ್ಯನು ಮಾಲೋಜಿಭೂಪತಿಗೆ ವಿವರಿಸಿದನು.

ಒಂದು ಕೋಳಿಯು ಹಂದಿಯ ಬೆನ್ನುಹತ್ತಿ ಬರಲು ಅದು ಭಯದಿಂದ ಓಡಿ ಬರುವಾಗ ಪಾದೋದಕದ ಕೊಳದಲ್ಲಿ ಬಿದ್ದು ಚೊಕ್ಕ ಪೊನ್ನೊಡಲಾಗಿ ಪ್ರಮಥ ಪದವಿಯನ್ನೈದಿತು. ನಕ್ಕನೈನಾರನೆಂಬ ಮಹಪುರುಷನು ಅಸಂಖ್ಯ ನರಿಗಳನ್ನು ತರಿಸಿ ಅವುಗಳ ಮೇಲೆ ಪಾದೋದಕವನ್ನು ತಳಿಯಲು ಅವು ವಾಯುವೇಗದ ವಾಜಿಗಳಾದುವು.

ಉದಕದಾನದ ಫಲವು ಘನವಾದುದೆಂದು ಪಂಡಿತರ ವದನದಿಂದ ಕೇಳಿ ನರಸಿಂಹಬಲ್ಲಾಳನು ಅದರಿಂದ ಪುಣ್ಯವನ್ನು ಪಡೆಯಬೇಕೆಂದು ನಿಶ್ಚಯಿಸಿ ಕೆರೆ ಕಟ್ಟಿಸಬೇಕೆಂದು ಮಂತ್ರಿ ಪದ್ಮರಸರಿಗೆ ಪೊನ್ಗಳನ್ನು ಕೊಟ್ಟನು. ಪದ್ಮರಸರು ಆ ಧನವನ್ನು ಶಿವಸ್ವರೂಪರಾದ ಶರಣರಿಗೆ ಕೊಟ್ಟು ಅವರನ್ನು ಆರಾಧಿಸುತ್ತಿರಲು ಅರಸನು ಒಂದುದಿನ ಪದ್ಮರಸರನ್ನು ಕರೆದು ಕೇಳಿದನು. ಆ ಕ್ಷಣದಲ್ಲಿಯೇ ಭಸ್ಮದ ಕಟ್ಟೆಯನ್ನು ಕಟ್ಟಿ ಜಂಗಮದ ಪಾದೋದಕವನ್ನು ಪೂರೈಸಲು ಕೆರೆಯು ನಿರ್ಮಿತವಾಯಿತು.

ಬಡವಾದೆ ಬೇಡುವವರಿಲ್ಲೆಂಬ ಬಸವಣ್ಣನವರ ವಚನವನ್ನು ಓರ್ವ ವಿಟ ಜಂಗಮನು ಅಪಾರ್ಥವಾಗುವಂತೆ ಪಠಿಸಲು ಆತನನ್ನು ಮಡಿವಳಯ್ಯನ ಮಠದಿಂದ ಹೊರಗೆ ಹಾಕಿದರು. ವಿಟಜಂಗಮನು ಬಂದು ಬಸವಣ್ಣನವರನ್ನು ಕಾಣಲು ಅವರು ಆತನನ್ನು ಸಂತೈಸಿ ಮಡಿವಳಯ್ಯನವರು ಬಟ್ಟೆದೊಳೆಯುತ್ತಿದ್ದ ಹಳ್ಳಕ್ಕೆ ಬಂದು ಶರಣೆನ್ನುವರು. ಮಾಚಿವಿಭು ಬಸವ ಭಾಗ್ಯಾಧಿಪತಿ, ಯಾಚಕರಿಗೆರಗುವರೇ ? ಎಂದು ರೋಷಿಕದ ಭಾದದಿಂದ ಮಡುವಿನಂಬುವನ್ನು ತನ್ನ ಪಾದದ ಬೆರಳಿನಿಂದ ಚಿಮ್ಮಲು ಆ ಹಳ್ಳವೆಲ್ಲ ನವರತ್ನಮಯವಾಯಿತು.

ಕಾಶ್ಮೀರದೇಶವನ್ನೆಲ್ಲ ಜಂಗಮರಿಗೆ ದಾನವಾಗಿತ್ತು ಮಾರವಿಭುವು ಕಲ್ಯಾಣಕ್ಕೆ ಬಂದು ಬಸವಣ್ಣನವರ ದರ್ಶನವಾಂತು ಮೋಳಿಗೆಯ ಕಾಯಕವನ್ನು ಮಾಡುತ್ತ ಬಂದ ಧನದಿಂದ ಜಂಗಮದಾಸೋಹವನ್ನು ಅನುಗೊಳಿಸುತ್ತಿದ್ದನು. ಜಂಗಮ ವೃಂದವು ಮಾರಯ್ಯನವರ ಮಹಿಮೆಯನ್ನು ಮನವಾರೆ ಹೊಗಳಿತು. ಮಾರಯ್ಯ ನವರು ಕಡುಬಡತನದಲ್ಲಿ ಇಂತಹ ಜಂಗಮ ದಾಸೋಹಕಾರ್ಯವನ್ನು ನೆರವೇರಿ ಸುತ್ತಿರುವರೆಂದು ಮನಮರುಗಿ ಬಸವಣ್ಣನವರು ಪ್ರಚ್ಛನ್ನರೂಪದಲ್ಲಿ ಮಾರಯ್ಯ ನವರ ಮನೆಗೆ ಅವರಿಲ್ಲದಾಗ ಬಂದು ಲಿಂಗಾರ್ಚನೆ ತೀರಿಸಿ ಮಜ್ಜನಶಾಲೆಯಡಿ ಯಲ್ಲಿ ಸಾಸಿರಹೊನ್ನುಗಳನಿರಿಸಿ ಹೋದರು. ಮಾರಯ್ಯನವರು ಮನೆಗೆ ಬಂದು ನಡೆದ ಸಂಗತಿಯನ್ನರಿದು ಇದು ಬಸವಣ್ಣನವರ ಕಾರ್ಯವೆಂದು ತಿಳಿದು, ಲಕ್ಷದ ಮೇಲೆ ತೊಂಬತ್ತಾರು ಸಾವಿರ ಕಟ್ಟಿಗೆಗಳ ಮೇಲೆ ಪಾದೋದಕ ತಳಿದು ಪೊಂಗೋ ಲ್ಗಳನ್ನು ಮಾಡಿ ಚರಕಿತ್ತು. ಬಸವಣ್ಣನವರು ತಂದಿಟ್ಟ ಪೊಂಜಾಳಿಗೆಯನ್ನು ಲೆಕ್ಕಿ ಸದೆ ಶರಣರ್ಗೆ ಕೊಟ್ಟರು. ಬಸವಣ್ಣನವರು ಇದನ್ನು ಕೇಳಿ, ಮಾರಯ್ಯನವರ ಮನದ ಇರವನರಿಯದ ಪಾಪಿ ತಾವೆಂದು ಮರುಗಿ ಬಂದು ಆತನ ಅಡಿಗೆರಗಿದರು. ಹರಭಕ್ತರು ಎಂತಿರ್ದರೂ ಬಡವರಲ್ಲವೆಂಬುದನ್ನು ಮಾರಯ್ಯನವರು ಸಿದ್ಧಮಾಡಿ ತೋರಿಸಿದರು.

ಹಿರಿಯ ಭಕ್ತೋತ್ತಮನಾದ ಮಾದಾರ ಧೂಳಯ್ಯನು ಚರಣಗಳನ್ನು ತೊಳೆದುಕೊಳ್ಳುವ ಕೊಂಡದಲ್ಲಿ ತೊನ್ನುಹತ್ತಿದ ಹಾರುವನು ಮುಂದುಗಾಣದೆ ಬೀಳಲು ಆ ತೊನ್ನು ಮಾಯವಾಯಿತು. ಆ ವಾರ್ತೆಯನ್ನು ಕೇಳಿ ಏಳು ನೂರು ಜನ ವಿಪ್ರರು ಅಲ್ಲಿಗೆ ಬಂದು ಆ ಕೊಳ್ಳದಲ್ಲಿ ಮಿಂದು ಶುದ್ಧಾಂಗರಾದರು.

ಬಸವಣ್ಣನವರಿಗೆಂದು ಹರಳಯ್ಯನು ಭಕ್ತಿಯಿಂದ ನಿರ್ಮಿಸಿದ ಪಾದರಕ್ಷೆಗಳನ್ನು ಕಂಡು ಮಾತ್ಸರ್ಯದಿಂದ ತಾನು ಮೆಟ್ಟಬೇಕೆಂದು ಮಧುವರಸನು ಕೇಳಲು ಹರಳಯ್ಯನು ನಿರಾಕರಿಸಿದನು. ಮಧುವರಸನು ಬಲಾತ್ಕಾರದಿಂದ ಮೆಟ್ಟಲು ಆತನ ದೇಹಕ್ಕೆ ತೊನ್ನುಹತ್ತಿ ಬಸಿಯತೊಡಗಿತು. ಒಂದು ದಿನ ಹರಳಯ್ಯನಡಿದೊಳೆದ ಉದಕತುಂಬಿದ ಕೊಳ್ಳದಿಂದ ತಂದ ಜಲದಲ್ಲಿ ಸ್ನಾನ ಮಾಡಲು ದೇಹದ ತೊನ್ನು ಹೋಗಿ, ಅದು ಹೊಳೆಯಹತ್ತಿತು. ತಾನು ಶಿವಭಕ್ತನಾಗಿ ತನ್ನ ಮಗಳನ್ನು ಹರಳಯ್ಯನವರ ಮಗನಿಗೆ ಕೊಟ್ಟು ಮದುವೆ ಮಾಡಿದನು.

ಸನ್ಯಾಸಿ ಮಂಚಣ್ಣನು ಪಾದೋದಕವೇ ಸಿದ್ಧಜಲವೆಂದು ನುಡಿಯಲು ಪರವಾದಿಗಳು ಅದಕ್ಕೆ ಒಪ್ಪದೆ ದೃಷ್ಟಾಂತ ತೋರೆಂದು ಕೇಳಿದರು. ಆತನು ಜಂಗಮದ ಪಾದೋದಕವನ್ನು ಮುಂದಿರುವ ಕಟ್ಟಿಗೆಯ ಮೇಲೆ ತಳಿಯಲು ಅವೆಲ್ಲ ಚಿನ್ನಗೋಲ್ಗಳಾದುವು. ಅವನ್ನು ಆತನು ಚರಕುಲಕಿತ್ತುಬಿಟ್ಟನು.

ವಲ್ಲಭನು ಮುಕ್ತಿಪಥ ಹೊಂದಿದ ಮೇಲೆ ಮುಂದೆ ತನಗೆ ಸಲ್ಲಲಿತ ಚರಣಾಂಬು ದೊರೆಯದೆಂದು ಆಲೋಚಿಸಿ ಓರ್ವ ಪತಿವ್ರತೆಯು ಆತನ ಪಾದೋದಕವನ್ನು ಒಂದು ಕಲಶದಲ್ಲಿ ಕಾಯ್ದಿರಿಸಿದ್ದಳು. ಆಕಸ್ಮಿಕವಾಗಿ ಆ ಊರಿಗೆ ಉರಿಹತ್ತಿ ಆಕೆಯ ಮನೆಯೂ ದಹಿಸುವಾಗ ಆ ಪಾದಾಂಬುವನ್ನು ತಳಿಯಲು ಪಲ್ಲವಿಸಿದ ಉರಿ ನೊಂದಿ ಮೊದಲಿನಂತೆ ಆ ಪುರವು ಕಂಗೊಳಿಸಿತು. ಹೀಗೆ ಪತಿಯ ಚರಣಾಂಬು ಸೇವನೆಯಲ್ಲಿ ಆಕೆ ಕಾಲಕಳೆಯುತ್ತಿರಲು ಪಾದೋದಕವು ಕಲಶದಲ್ಲಿ ಒಮ್ಮೆ ಶೂನ್ಯವಾಯಿತು. ಆಕೆ ತತ್‌ಕ್ಷಣದಲ್ಲಿಯೇ ಪ್ರಾಣಬಿಡಲು ಸಿದ್ಧಳಾಗಲು ಕಂತುಹರನು ಮೆಚ್ಚಿ ಅವಳನ್ನು ಕೈಲಾಸಕ್ಕೆ ಕರೆದೊಯ್ದನು.

ಶಿವಭಕ್ತನಾದ ಕಣ್ಣಪ್ಪನು ಮತ್ಸ್ಯಾದಿ ಜಲಜೀವಿಗಳನ್ನು ತಂದು ಮಾರಿ ಅದರಿಂದ ಬಂದ ಹಣದಿಂದ ಜಂಗಮಾರ್ಚನೆಯ ನೇಮವನ್ನು ಕೈಕೊಂಡಿದ್ದನು. ಜೀವಿಗಳನ್ನು ಕೊಂದು ಮಾಡುವ ಭಕ್ತಿ ಹೇಯವಾದುದು ಎಂದು ಪ್ರಮಥಾಳಿ ಭಾವಿಸಿದ್ದಿತು. ಒಂದು ದಿನ ಕಣ್ಣಪ್ಪನು ಬಸವಾದಿ ಪ್ರಮಥರನ್ನು ಬಿನ್ನಹಕ್ಕೆಂದು ತನ್ನ ಮನೆಗೆ ಬರಮಾಡಿಕೊಂಡು, ಅವರ ಪಾದೋದಕದ ಮಡುವಿನಲ್ಲಿ ತನ್ನ ಗಾಣ

ವನ್ನಿಕ್ಕಿ ಹರಿಬ್ರಹ್ಮಾದಿ ದೇವತೆಗಳನ್ನು ತೋರಿಸಿದನು. ಅದನ್ನು ಕಂಡು ಶರಣರ ಮನದ ಸಂದೇಹ ಮಾಯವಾಯಿತು.

ಹೀಗೆ ಪಾದೋದಕದಿಂದ ಮುಕ್ತಿಯನ್ನು ಅನೇಕ ಜನರು ಪಡೆದಿರುವರು. ಎಲೈ ರಾಜನೇ, ಇನ್ನು ಭಸ್ಮದ ಮಹಿಮೆಯನ್ನು ಕೇಳೆಂದು ಮಹಲಿಂಗಮುನಿ ನಾಥನು ಮಾಲೋಜಿ ಮಹಾರಾಜನಿಗೆ ನುಡಿದು ಅದನ್ನು ವಿವರಿಸತೊಡಗಿದನು.

ಜಮದಗ್ನಿ, ಕಸ್ಯಪ, ಅಗಸ್ತ್ಯ, ಕಂತುಪಿತ, ಕಮಲಭವ, ಮೊದಲಾದ ದೇವ ಮಾನವರೆಲ್ಲ ಭಸ್ಮಧಾರಣೆಯಿಂದ ದೀರ್ಘಾಯುವನ್ನು ಪಡೆದು ಪಾವನಾತ್ಮ್ರಜ ರಾದರು. ಚಂದನ, ಕುಂಕುಮ, ಕಸ್ತೂರಿ, ಗಂಧ ಇವುಗಳ ಲೇಪನದಿಂದ ಭಸ್ಮ ಲೇಪನದ ಸಾವಿರಕೋಟಿಯೊಳೊಂದಂಶದಷ್ಟು ಕೂಡ ಪುಣ್ಯವೊದಗದೆಂದು ಮನು ಮುನಿಗಳು ಭಸ್ಮಧಾರಣೆ ಮಾಡಿ ಪೂತಾತ್ಮರಾದರು.

ಹರಿಯೊಮ್ಮೆ ಹರನ ಧ್ಯಾನವಮಾಡುತ್ತ ನಿಂತಿರಲು ಹರನು ತನ್ನ ಹೃತ್ಕಮಲ ದೊಳಗಿರ್ಪ ಭಸಿತವನ್ನು ಸೆಳ್ಳುಗುರಿನಿಂದ ಹರಿಯ ಶಿರದಲ್ಲಿ ತಳಿಯಲು ಬಾಲಾರ್ಕ ಕೋಟಿಗಳ ಕಾಂತಿಯನ್ನು ಕೀಳ್ಪಡಿಪ ಚಿಜ್ಯೋತಿಯು ಹರಿಯ ಕಣ್ಣಿಗೆ ಕಂಡಿತು. ಶಿವನ ಅಪ್ಪಣೆಯಂತೆ ಆ ಕಾಂತಿಯನ್ನು ಸೇವಿಸಿ ನೀಲಕಾಯನಾದ ಹರಿಯು ಕಾಂತಿಯುತನಾದನು.

ಗೌತಮನ ಲಗ್ನಮಂಟಪದಲ್ಲಿ ನೆರೆದಿರ್ದ ದೇವತೆಗಳ ಸಮೂಹವು ಅಹಲ್ಯೆಯ ರೂಪವನ್ನು ಕಂಡು ಭ್ರಾಂತಿಗೊಳ್ಳಲು ಅದನರಿದು, ಅವರು ಜ್ಞಾನ ಶೂನ್ಯರಾಗಲಿ ಎಂದು ಗೌತಮಮುನಿಯು ಶಾಪವನ್ನಿತ್ತನು. ಅವರೆಲ್ಲ ಮರುಳಾಗಿ ದೂರ್ವಾಸಮುನಿಯಲ್ಲಿಗೆ ಬಂದು, ನಡೆದ ಸಂಗತಿಯನ್ನರುಹಿ ತಮಗೆ ಜ್ಞಾನದಾನ ಮಾಡಬೇಕೆಂದು ಪ್ರಾರ್ಥಿಸಿದರು. ದೂರ್ವಾಸನು ನಿಜಪಾತ್ರೆಯೊಳಗಿದ್ದ ಭಸಿತ ವನ್ನು ಸಿಂಪಡಿಸಲು ಅವರ ಅಜ್ಞಾನ ಮರೆಯಾಗಿ ಸುಜ್ಞಾನ ಪ್ರಜ್ವಲಿಸಿತು.

ಗುರು ವಸಿಷ್ಠರ ವಂಶದಲ್ಲಿ ಹುಟ್ಟಿದ ಅಹೋಬಲನು ಮುನಿಶಾಪದಿಂದ ನರಸಿಂಹನಾಶ್ರಮದಲ್ಲಿ ಮಕ್ಷಿಕನಾಗಿರಲು ವೈರಿಗಳು ಬಂದು ಮಕ್ಷಿರೂಪದ ಆತ ನನ್ನು ಕೊಲ್ಲಲು, ಅವನ ಸತಿ ಮರುಗುತ್ತ ಮಕ್ಷಿರೂಪದ ಪತಿಯನ್ನು ದಧೀಚಿಯ ಬಳಿಗೆ ತಂದಳು. ದಧೀಚಿಯು ಆತನಿಗೆ ಭಸಿತದಿಂದ ಪ್ರಾಣವನ್ನಿತ್ತನು.

ವ್ಯಾಘ್ರಪಾದನ ಸುತನಾದ ಉಪಮನ್ಯು ತನ್ನ ಐದನೆಯ ವರ್ಷದಲ್ಲಿ ಮಾತೆ ಯಿಂದ ಉಪದೇಶ ಪಡೆದು, ಹಿಮಾಲಯಕ್ಕೆ ಬಂದು ಲಿಂಗಸ್ಥಾಪನೆ ಮಾಡಿ,

ಅಲ್ಲಿಯೇ ತಪವನ್ನಾಚರಿಸತೊಡಗಿದನು. ಆತನು ಉಗ್ರ ತಪವನ್ನಾಚರಿಸತೊಡ ಗಲು ಶಿವನಟ್ಟಿದ ಪಿಶಾಚಿಗಳು ಬಂದು ಅಲ್ಲಿ ಕೂಗಲಾರಂಭಿಸಿದವು. ಬಾಲಕ ನಾದ ಉಪಮನ್ಯು ಬೆದರದೆ ಪಂಚಾಕ್ಷರೀ ಮಂತ್ರವನ್ನು ಜಪಿಸಲು ಅದನ್ನು ಕೇಳಿ ಭೂತ-ಪಿಶಾಚಿಗಳೆಲ್ಲ ಮೋಕ್ಷವನ್ನು ಪಡೆದುವು. ಉಪಮನ್ಯುವಿನ ತಪದ ಜ್ವಾಲೆ ದಿಗ್ಜಾಲದಲ್ಲಿ ಪಸರಿಸಿತು. ಸರಸಿಜಾಂಡವು ಉಳಿಯದೆಂಬಂತೆ ಜ್ವಾಲೆ ಪ್ರಖರ ವಾಯಿತು. ಪರಶಿವನು ದೇವೇಂದ್ರನ ರೂಪ ತಾಳಿ, ಅಲ್ಲಿಗೈತಂದು ಎಲೆ ಮುನಿಪ ಶಿವನನ್ನು ಕುರಿತು ತಪವನ್ನು ಚರಿಸುವುದು ವಿಹಿತವಲ್ಲ. ನನ್ನನ್ನು ಬಿಟ್ಟು ಸುಮ್ಮನೆ ಬಳಲಬೇಡ ಎಂದು ನುಡಿದನು. ಸಿಂಹನ ಬಯಸಿ ನರಿ ಬಂದುದು ಎಂದು ಬಾಲಕನು ಗರ್ಜಿಸಿದನು. ಬಾಲಕನೆಂದು ಮೈದೋರಿದರೆ ಹೀಗೆ ನಿಷ್ಠುರೋಕ್ತಿ ಗಳನ್ನಾಡುವೆ. ಮರುಳೆ, ನನ್ನಲ್ಲಿ ಸುರಧೇನು, ಸುರಕುಜ, ಪಿಯೂಷಗಳುಂಟು. ಬೇಡಿದುದನ್ನು ಕೊಡುವೆನು. ಗರಳವನ್ನು ಸೇವಿಸಿದ ಶಿವನಲ್ಲೇನಿದೆ ? ಸುಮ್ಮನೆ ಬಳಲಬೇಡ ಎಂದು ಕಪಟರೂಪದ ಶಿವನು ಮಗುವನ್ನು ಕೆಣಕಿದನು. ಅದಕ್ಕೆ ಎಲೆ ಪುರಂದರ, ನಿನಗೀ ಸಿರಿಯನಿತ್ತವರಾರು ಆತನನ್ನು ಧ್ಯಾನಿಸುವೆ. ಸುಮ್ಮನೆ ತೆರಳೆಂದು ಉಪಮನ್ಯು ಉತ್ತರಿಸಿದನು. ಮತ್ತೆ ಕೆಣಕಲು ಶ್ರೀ ಭಸಿತವನ್ನು ತನ್ನ ಕೈಯಿಂದ ತೆಗೆದುಕೊಂಡು ಅವನ ಮೇಲೆ ಚಲ್ಲಿ, ಕೇಳಿದ ಆತ್ಮದ್ರೋಹ ಅಳಿಗೆಂದು ಪಾಶುಪತದಿಂದ ತನ್ನ ಮೇಲೆ ತಾನು ತಳಿದುಕೊಳ್ಳುತ್ತಿರಲು ಉಪಮನ್ಯು ಬೂದಿ ಯಾಗದೆ ಉಳಿಯನೆಂದು ಪರಶಿವನು ಅಸ್ತ್ರವನ್ನು ಹಿಡಿದು ನಿಜರೂಪುದೋರಿದನು. ಮಗು ತಾನು ಬೈದುದಕ್ಕಾಗಿ ಪಶ್ಚಾತ್ತಾಪಪಡತೊಡಗಿದನು. ಮಗು, ನಿನ್ನ ಬೈಗುಳ ನನಗೆ ವೇದೋಕ್ತಿಗಳೆಂದು ಆತನನ್ನು ಸಂತೈಸಿದನು. ಚೆಲುವ ಪಾಲನ್ನು ವರವಾಗಿ ದಯಪಾಲಿಸಬೇಕೆಂದು ಮಗು ಪ್ರಾರ್ಥಿಸಲು, ತರಳ, ನೀನಿರ್ದಲ್ಲಿ ಕ್ಷೀರ, ದಧಿ, ಸರ್ಪಿಗಳ ಶರಧಿಗಳು ನೆಲಸಿರಲಿ; ಮೃಷ್ಟಾನ್ನದ ಬೆಟ್ಟಗಳಾಗಲಿ; ಸಂತಸದಿಂದ ಇರು ಎಂದು ಪರಶಿವನು ವರವನ್ನು ಕೊಟ್ಟನು. ಎರಡನೆಯದಾಗಿ ಉಪಮನ್ಯು ತನಗೆ ಐದು ವರುಷದ ಹರೆಯ ಕೊನೆಯವರೆಗೂ ಪಾಡಳಿಯದಂತೆ ಉಳಿಯಲಿ; ಕೈಲಾಸಕ್ಕೆ ಬಂದರೆ ಆರೂ ತನ್ನನ್ನು ತಡೆಯದಂತಾಗಲಿ ಎಂದು ಪ್ರಾರ್ಥಿಸಲು ಶಿವ-ಪಾರ್ವತಿಯರು ಆ ವರವನ್ನೂ ದಯಪಾಲಿಸಿದರು.

ಹಿಂದೊಮ್ಮೆ ಒಬ್ಬ ಭೂದಿವಿಜನು ಕಾಮುಪರವಶನಾಗಿ ಪರಸತಿಯನ್ನು ಕೂಡಿ ಬಾಳುತ್ತಿದ್ದನು. ಒಂದು ದಿನ ಚಂಡಾಲ ವನಿತೆಯನ್ನು ಕಂಡು ಮೋಹಿಸಿ ಆಕೆ ಯೊಡನೆ ಕೂಡಿದನು. ಕುಲಭ್ರಷ್ಟನೆಂದು ಅಲ್ಲಿಯ ವಿಪ್ರರು ಅವನನ್ನು ಊರು ಬಿಟ್ಟು ಹೊರಗೆ ಹಾಕಿದರು. ಆಕೆಯೊಡನೆ ಅವನು ಬಹುಕಾಲ ಬಾಳಲು ಅವನ

ದೇಹವನ್ನು ತೊನ್ನು ವ್ಯಾಪಿಸಿತು. ರೋಗದ ಬಾಧೆಯನ್ನು ತಾಳಲಾರದೆ ಆತನು ಸುಡುಗಾಡಿಗೆ ಬಂದು ಅಲ್ಲಿ ಪ್ರಾಣಬಿಟ್ಟನು. ಆ ವಿಪ್ರನ ಪ್ರಾಣವನ್ನೊಯ್ಯಲು ಬಂದ ಶಮನಕಿಂಕರರು ಅವನ ದೇಹದಲ್ಲಿ ಭಸ್ಮವನ್ನು ಕಂಡು ಆತನನ್ನು ಕೈಲಾಸ ಕ್ಕೊಯ್ದರು.

ಮಡಿದ ತಂದೆಯ ಶವವನ್ನು ಪೌರಜನರು ಸುಡುತ್ತಿರಲು ಅದನ್ನು ಕಂಡು ಓಹಿಲಯ್ಯನಿಗೆ ವೈರಾಗ್ಯ ಪ್ರಾಪ್ತವಾಗಿ ತನ್ನ ತನುವನ್ನು ಸೌರಾಷ್ಟ್ರದ ಸೋಮನಾಥ ನಿಗೆ ಅರ್ಪಿಸಬೇಕೆಂದು ನಿಶ್ಚೈಸಿ ಅಲ್ಲಿಗೆ ಬಂದು ತನ್ನ ತೂಕದ ಗುಗ್ಗಳದಿಂದ ಆತ ನನ್ನು ಪೂಜಿಸತೊಡಗಿದನು. ಆ ಲಿಂಗದ ನಿರ್ಮಾಲ್ಯಪತ್ರಿಗಳನ್ನು ತಾನು ಸೇವಿಸ ತೊಡಗಿದನು. ಗೌಳಯುತಿಗಳು ಖುಲ್ಲತನದಿಂದ ಅವನ್ನು ಸುಡಲು ಆತನು ಆ ಭಸ್ಮವನ್ನು ಸೇವಿಸಿದನು. ಒಂದು ದಿನ ಸೌರಾಷ್ಟ್ರಪತಿಯ ಪೂಜೆಗಾಗಿ ಜಲವನ್ನು ಹೊತ್ತು ತರುತ್ತಿರಲು ಕಾಲಿಗೊಂದು ಬೆಸಿಯು ನಾಂಟಿತು. ಕುಂಟುತ್ತ ಹಾಗೆಯೇ ಶಿವಧ್ಯಾನದಲ್ಲಿ ಮುನ್ನಡೆದನು. ಶಿವನು ಶಬರನಾಗಿ ಬಂದು ಅದನ್ನು ಕೀಳಲು ಅಲ್ಲಿ ರಕ್ತಸೋರದೆ ಭಸ್ಮಸ್ರವಿಸಿತು. ಮುಂದೆ ತನ್ನ ಭಸ್ಮಕಾಯವನ್ನು ಧೂಪಾಗ್ನಿ ಗೊಪ್ಪಿಸಿ ಆತನು ಕೈಲಾಸಕ್ಕೆ ತೆರಳಿದನು.

ವ್ಯಾಸಮುನಿಯು ಇಂದ್ರಾದಿ ಸುರಪದವಿಯನ್ನು ಧಿಕ್ಕರಿಸಿ ನೈಮಿಷಾರಣ್ಯದಲ್ಲಿ ಶಿವನನ್ನು ಕುರಿತು ತಪಸ್ಸನ್ನಾಚರಿಸುತ್ತಿರಲು, ರಂಭೆ ಬಂದು ಕಾಮುಕಲಹಗಳಿಂದ ಅವನ ಇಂದ್ರಿಯಗಳನ್ನು ಪರಿಕಿಸಲು, ಆತನು ನಿಷ್ಕಾಮನಾಗಿ ತನ್ನೊಡಲ ಬಗಿದು ತೋರಲು ಹಾಲು ಸುರಿದು ಹರಿಯತೊಡಗಿತು.

ಶುಕಮುನಿಯು ತನ್ನ ಚಿತ್ಕಾಯದಿಂಗಿತವ ನೋಡೆಂದು ಉಗುರಿನಿಂದ ಬಗಿದು ತೋರಲು ಶ್ರೀಭಸ್ಮ ಸ್ರವಿಸಿತು.

ನರಕಪಾಲವನ್ನು ತೃಪ್ತಿಗೆಯ್ಯಲೋಸುಗ ಶಿವನು ಅಖಿಳ ಲೋಕದಲ್ಲಿ ಭಿಕ್ಷಾ ಟನಗೈದು ಪರಿಪೂರ್ಣವಾಗದಿರಲು ದ್ವಾರಕಾ ಕ್ಷೇತ್ರಕ್ಕೆ ಬಂದು ಗೋಪಾಂಗನೆ ಯರ ಭಕ್ತಿಯನ್ನು ಕೈಕೊಂಡು ಹರಿಯ ರಾಜಾಲಯಕೆ ಬಂದನು. ಆತನು ಘನ ಭಕ್ತಿಯಿಂದ ನೀಡಿದ ಪದಾರ್ಥಗಳಿಂದ ಅದು ತುಂಬದಿರಲು, ತನ್ನ ತಲೆಯ ತಿವಿದು ಕೊಂಡು ಸೃಕ್‌ಭಿಕ್ಷೆ ನೀಡಿ, ಮೂರ್ಛೆಹೊಂದಿ ಭೂಮಿಗೆ ಬಿದ್ದನು. ಶಿವನು ಆತನಿಗೆ ಭಸ್ಮವನ್ನು ತಳಿಯಲು ಮುನ್ನಿನಂತೆ ಎದ್ದು ಪರಶಿವನನ್ನು ಕೊಂಡಾಡಿ ದನು.

ಬಿಜ್ಜಳನು ಕಲ್ಯಾಣನಗರದಲ್ಲಿ ಚತುರಂಗಬಲಸಹಿತ ಬರುತ್ತಿರಲು ಮುಂದೆ ಹೊಲಗೇರಿಯ ಬೂದಿಯನ್ನು ಕಂಡು, ಎಲೆ ಬಸವ, ಭಕ್ತೋತ್ತಮರ ನೊಸಲಭಸ್ಮ ವಿಲ್ಲಿಹುದು ಎಂದು ಉಪಹಾಸ್ಯದ ಮಾತನ್ನಾಡಿದನು. ಅಲ್ಲಿದ್ದ ಮಧುಪೂರ್ಣ ಕೊಡಗಳನ್ನು ಬಸವಣ್ಣನವರು ಸುರುವಿಸಲು ಅದು ಸುಧೆಯಾಗಿ ಹರಿಯಿತು.

ಹೀಗೆ ಮಹಲಿಂಗಮುನಿವರ್ಯನು ಭಸಿತ-ಪಾದಾಂಬುಗಳ ಮಹಿಮೆಯನ್ನು ನಿರೂಪಿಸಲು ಮಾಲೋಜಿಯು ಅದನ್ನು ಕೇಳಿ ಕೃತಕೃತ್ಯನಾದನು. ಘೋರ್ಪಡೆ ಯರ ಕುಲಕೆ ಮಹಾಲಿಂಗಜಂಗಮವೇ ಗುರುವೆಂದು ಒಪ್ಪಿ, ಆತನಿಂದ ಭಸ್ಮ ಧಾರಣೆಯ ಕ್ರಮವನ್ನರಿತು ಅವನ್ನು ಸೇವಿಸತೊಡಗಿದನು. ಮಹಲಿಂಗಮುನಿ ನಾಥನು ತತ್ಪಾತ್ರದಲ್ಲಿ ಪರಮಾನುಭವದಿಂದ ಸುಖವಾಗಿದ್ದನು.

**

# ಹದಿನೈದನೆಯ ಸಂಧಿ

ಮಹಲಿಂಗಜಂಗಮನಾಥನುಸದ್ಭಕ್ತವೃಂದವನ್ನು ಪರಿಪಾಲಿಸುತ್ತ ಮೋದಪುರದ ಛಾತ್ರದಲ್ಲಿರುತ್ತಿರಲು ಮಾಲೋಜಿಮಹಾರಾಜನ ತಮ್ಮನಾದ ಸಕರೋಜಿಯು ಮಹಲಿಂಗಜಂಗಮನಾಥನ ಪದದರ್ಶನಾಪೇಕ್ಷೆಯಿಂದ ಬರುತ್ತ ಮಾರ್ಗದಲ್ಲಿ ವಿಷ್ಣುಭಕ್ತರಿಗೆ ಶಿವಜಂಗಮದ ಪೂಜೆ ಅನುಚಿತವೆಂಬ ಧೂರ್ತಕಲ್ಪನೆಯನ್ನು ಮನದಂದನು. ಮಹಾಜ್ಞಾನಿಯಾದ ಜಂಗಮನಾಥನು ಆತನ ಮನದಲ್ಲಿ ನಡೆದ ಧೂರ್ತಕಲ್ಪನಾವಿಲಾಸವನ್ನರಿತನು. ಸಕರೋಜಿಯು ಛಾತ್ರಕ್ಕೆ ಬಂದೊಡನೆ ಆ ಸಭಾಭವನದಲ್ಲಿ ತುಳಸೀಮಾಲೆ, ಕೌಸ್ತುಭ, ಪೀತಾಂಬರಧಾರಿಯಾದ ಶ್ರೀ ವಿಷ್ಣುಮೂರ್ತಿಯನ್ನು ಕಂಡು ಬೆರಗಾದನು, ಬೆದರಿದನು; ನಡನಡುಗಿದನು. ಕೈಮುಗಿದು ಭಯ ಸಂತಸಗಳೆರಡನ್ನೂ ತಳೆದನು. ತಾನು ಮಾಡಿದ ಕಲ್ಪನೆಯ ಅಪರಾಧವನ್ನು ಕ್ಷಮಿಸಬೇಕೆಂದು ಮೈಯಿಕ್ಕಿ ಪ್ರಾರ್ಥಿಸಿದನು. ಆರ್ತಧ್ವನಿಯಿಂದ ಪ್ರಾರ್ಥಿಸಿದ ಸಕರೋಜಿಯ ಬಿನ್ನಹಕ್ಕೆ ಮನ್ನಿಸಿ ಮಹಲಿಂಗಜಂಗಮನಾಥನು ಕರ್ಣಕುಂಡಲ, ಭಸಿತ ಲೇಪನ ಮೊದಲಾದವುಗಳನ್ನು ಧರಿಸಿದ ಮುನ್ನಿನ ರೂಪ ವನ್ನು ತೋರಿಸಿದನು. ಸಕರೋಜಿಯು ಆ ರೂಪವನ್ನು ಕಂಡು ಹಿರಿ ಹಿರಿ ಹಿಗ್ಗಿ, ಎಲೆ ದೇವ, ಘೋರ್ಪಡೆಯರನ್ವಯಕೆ ಕುಲದೈವ ನೀವಲ್ಲದಾರಿಲ್ಲ. ನನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವನು. ನಿನ್ನ ಮನದ ಛಲವ ನೋಡುವುದಕ್ಕಾಗಿ ಜಂಗಮವು ಹೀಗೆ ರೂಪುದಳೆಯಿತೆಂದು ಮಹಲಿಂಗಮುನಿನಾಥನು ನಿರೂಪಿಸಿದನು. ಆಗ ಸಕರೋಜಿಯು ಲಿಂಗ-ಜಂಗಮದ ಮಹಿಮಾತಿಶಯವನ್ನು ಪೇಳಬೇಕೆಂದು ಪ್ರಾರ್ಥಿಸಲು ಮಹಪುರುಷನು ಪೇಳಲುಜ್ಜುಗಿಸಿದನು.

ಹರಿಯಜೇಂದ್ರಾದಿ ಸುರಮುಖ್ಯರೂ, ದಿಕ್ಪತಿಗಳೂ, ತರಣಿ ಮೊದಲಾದ ಗ್ರಹ ಗಳೂ, ದೈತ್ಯರೂ, ಪರಮ ಮನುಮುನಿಗಳೂ ಲಿಂಗವನ್ನು ಭಜಿಸಿ ದೇವತ್ವವನ್ನು ಪಡೆದರು. ಮಳಲಲಿಂಗವನ್ನು ಪೂಜಿಸಿದ ಬಾಲಕರು ಶಿವನಸಮಪದವಿಯನ್ನು ಪಡೆದರು, ಶ್ರೀಹರಿಯು ತನ್ನ ದಶಾವತಾರಗಳಲ್ಲಿ ಮಾಡಿದ ಪಾಪವನ್ನು ಕಳೆಯ ಲೋಸುಗ ಪುಣ್ಯಕ್ಷೇತಗಳಲ್ಲಿ ಲಿಂಗಗಳನ್ನು ಸ್ಥಾಪಿಸಿ, ಶಿವನ ಕೃಪೆಯಾಂತನು.

ಸೂರ್ಯನು ಕಾಶಿಯಲ್ಲಿ ಬಾಲಾರ್ಕಲಿಂಗವನ್ನು ಸ್ಥಾಪಿಸಿ, ಭಕ್ತಿಯಿಂದ ಭಜಿಸಿ, ತನ್ನ ತನುವಿನ ಶ್ವೇತರೋಗವನ್ನು ನಿವಾರಣೆಮಾಡಿಕೊಂಡು ಭಾಸುರಾಂಗನಾದನು.

ಆಂಜನೆಯಸುತನಾದ ಹನುಮಂತನು ಶಿವನ ಸಭೆಯಲ್ಲಿ ಸುಸ್ವರದಿಂದ ಗಾನಮಾಡುತ್ತಿರಲು ಪರಶಿವನು ಇನ್ನೊಂದು ಹಾಡಬೇಕೆಂದು ನಿರೂಪಿಸಿದನು. ಲಿಂಗಪೂಜೆಗೆ ಸಮಯವಾಗುವುದು ನನಗೆ ಅಪ್ಪಣೆಕೊಡಬೇಕೆಂದು ಹನುಮಂತನು ಪ್ರಾರ್ಥಿಸಿದನು. ಲಿಂಗಮಯನೇ ನಾನಿದ್ದು, ನೀನು ಸಂಗೀತ ಪೂಜೆಯಿಂದ ತಣಿಸಿದರೆ ಇಲ್ಲಿಯೇ ಅದನ್ನು ಸ್ವೀಕರಿಸುವೆನೆಂದು ಶಿವನು ನುಡಿಯಲು ನಿಗಮಾಗಮೋಕ್ತಿಗಳಿಂದ ಪೂಜಿಸುವ ನೇಮವೆನಗಿಹುದೆಂದು ಹನುಮಂತನು ನುಡಿದನು. ಅದಕ್ಕೆ ಶಿವನು ನಸುನಗುತ ಬೀಳ್ಕೊಟ್ಟನು. ಮನೆಗೆ ಬಂದು ಹನುಮಂತನು ಪೂಜೆಗೆ ಅಣಿಗೊಳಿಸಿ ಕರಡಿಗೆಯಲ್ಲಿ ಲಿಂಗವನ್ನು ನೋಡಲು ಅಲ್ಲಿ ಲಿಂಗವಿಲ್ಲದಾಗಿದ್ದಿತು. ಹನುಮಂತನು ಭಯಭರಿತನಾಗಿ ವೀರಭದ್ರನ ಸ್ಮರಣೆಯನ್ನು ಮಾಡಲು ಆತನು ಬಂದು ಹನುಮಂತನ ಇಷ್ಟಲಿಂಗವು ಮಾಯವಾದುದನ್ನು ಅರಿಯುವನು. ವೀರಭದ್ರನು ಆತನಿಗೆ ಅಭಯವಿತ್ತು ತನ್ನ ಫಾಲಾಕ್ಷದ ಶಿಖಿಗರುಹಲು ಅದು ಪ್ರಜ್ವಲಿಸಿ ನಿಮಿಷದಲ್ಲಿ ಪದ್ಮಜಾಂಡವನ್ನು ಉರುಹುತ್ತ ಶಿವಲೋಕಕ್ಕೆ ಹೋಗಲು ಶಿವನರಿದು ವೀರಭದ್ರನಿಂದ ಅದರ ಕಾರಣವನ್ನು ತಿಳಿದು ತನ್ನಿಮಿಷದಲ್ಲಿಯೇ ಹನುಮಂತನಿಗೆ ಇಷ್ಟಲಿಂಗವನ್ನು ಕೊಡುವನು.

ದ್ರೋಣಾಚಾರ್ಯನು ರಣದಲ್ಲಿ ಶಸ್ತ್ರಸಮ್ಮುಖದೊಳಗೆ ತನ್ನ ಪ್ರಾಣವನ್ನು ಬಿಡಲು ಅವನ ಮಗನಾದ ಅಶ್ವತ್ಥಾಮನು ಶಸ್ತ್ರಸನ್ಯಾಸತ್ವದಿಂದ ಭಿನ್ನಮನಸ್ಕನಾಗಿ ಹೊರಟನು. ಮಾರ್ಗದಲ್ಲಿ ಬಾದರಾಯಣನನ್ನು ಕಂಡು ಅಡಿಗೆರಗಲು ಆತನು ಹೊರಟುದೆಲ್ಲಿಗೆಂದು ಬೆಸಗೊಂಡನು. ಕೃಷ್ಣಾರ್ಜುನರನ್ನು ದಹಿಸಬೇಕೆಂದು ಬಿಟ್ಟ ಬಾಣವು ಅವರೀರ್ವರನ್ನು ಬಿಟ್ಟು, ಉಳಿದವರನ್ನಷ್ಟೇ ದಹಿಸಿ ಬರಲು ಅದನ್ನು ಕಂಡು ಕಟ್ಟಣಕದಿಂದ ಜರೆದು, ಶಸ್ತ್ರಸನ್ಯಾಸತ್ವದಿಂದ ಅಡವಿಯಲ್ಲಿ ಹೊರಟಿರುವೆನು ಎಂದು ಅಶ್ವತ್ಥಾಮನು ನುಡಿಯಲು, ಬಾದರಾಯಣನುಕೃಷ್ಣಾರ್ಜುನರು ಉತ್ಕಟ ಶಿವಭಕ್ತರೆಂಬುದನ್ನೂ, ಅವರು ಶಿವನನ್ನು ಪೂಜಿಸಿ ಅತುಲವಾದ ಅಸ್ತ್ರಗಳನ್ನು ಪಡೆದುದನ್ನೂ ವಿವರಿಸಿ ಶಿವಭಕ್ತರು ಅಜೇಯರು ಎಂದು ನುಡಿದನು.

ಸೌಂದರಗಣಾಧೀಶನು ರತಿಲಂಪಟತನದಿಂದ ಸುಂದರಿಯ ಬಲ್ಮೊಲೆಗಳನ್ನು ಕಂಡು, ಕಂದರ್ಪಹರನೆಂದು ಮನದಲ್ಲಿ ಭಾವಿಸಿ, ಭಕ್ತಿಯಿಂದ ಭಜಿಸಲು ಗಿರಿಜಾಧವನು ಮೆಚ್ಚಿ ಪಡಿಹೊನ್ನನಿತ್ತು ಆತನ ಹಡಪವನ್ನು ಹೊತ್ತನು.

ಚಂಡೇಶ್ವರನು ಮಳಲಲಿಂಗವನ್ನು ಮಾಡಿ, ಕ್ಷೀರಾಭಿಷೇಕದಿಂದ ಪೂಜಿಸುತ್ತಿರಲು ಅವನ ತಂದೆ ಕೋಪದಿಂದ ಬಂದೊದೆಯಲು ಅವನ ಪದವನ್ನು ಚಂಡ ಪರಶುವಿನಿಂದ ಹೊಡೆಯಲಾಯ್ತು. ಚಂಡಿಕಾವರನು ಅವನ ಭಕ್ತಿಗೆ ಮೆಚ್ಚಿ ಅವನಿಗೆ ಪ್ರಮಥಪದವಿಯನ್ನಿತ್ತನು.

ಗೊಲ್ಲಾಳನು ಕುರಿಹಿಕ್ಕಿಯನ್ನು ಭಕ್ತಿಯಿಂದ ಪೂಜಿಸುತ್ತ ಅದನ್ನು ಶಿವಲಿಂಗವೆಂದೇ ನಂಬಿ, ಕ್ಷೀರಾಭಿಷೇಕ ಮಾಡುತ್ತಿರಲು ಅವನ ತಂದೆ ಬಂದು ಒದೆಯಲು ಅವನ ಅಡಿಯನ್ನು ನಿಲ್ಲದೆಯೆ ಖಂಡಿಸಿದನು. ಅದರಿಂದ ಕಾಮಾರಿ ಮೆಚ್ಚಿ ಅವನನ್ನು ಕೈಲಾಸಕ್ಕೆ ಕಳೆದೊಯ್ದನು.

ಮಲ್ಲಸೆಟ್ಟಿಯೆಂಬುವನೊರ್ವನು ಲಿಂಗಪೂಜೆಯಿಲ್ಲದೆ ಉಣ್ಣದ ನೇಮವನ್ನು ಕೈಕೊಂಡಿದ್ದನು. ಒಂದು ದಿನ ಅವನಿಗೆ ಕಣ್ಬೇನೆ ಬಂದಿರಲು ಅವನ ಬೀಗರು ಕೂಡಿ ಕತ್ತಲಮನೆಯೊಳಗಿನ ಕಬ್ಬಿಣದ ಬಳ್ಳವನ್ನು ಲಿಂಗವೆಂದು ಪರಿಹಾಸ್ಯದಿಂದ ತೋರಿಸಿದರು. ಮಲ್ಲಸೆಟ್ಟಿಯು ಅದನ್ನು ಲಿಂಗವೆಂದೇ ಪೂಜಿಸಿ ಭೋಜನ ಮಾಡಲು, ಬೀಗರು ಪರಿಹಾಸ್ಯಮಾಡಲು ಆತನು ಆ ಬಳ್ಳವನ್ನೇ ಲಿಂಗವನ್ನಾಗಿ ಮಾಡಿ ತೋರಿಸಿದನು.

ಓರ್ವ ಲುಬ್ಧಕನು ಬೇಟೆದೊರೆಯದೆ ಉಪವಾಸ ಮಾಡಿ ರಾತ್ರಿ ಶಾಂಡಿಲ್ಯ ವೃಕ್ಷವನ್ನೇರಿ ತನ್ನ ಕಣ್ಗೆ ಮರೆಯಾದ ಟೊಂಗೆಗಳನ್ನು ಕತ್ತರಿಸಲು ಅವು ಕೆಳಗಿದ್ದ ಲಿಂಗದ ಮೇಲೆ ಬಿದ್ದುವು. ಎವೆಯಿಕ್ಕದೆ ಬೇಟೆಯ ಬರವನ್ನು ನೋಡುತ್ತಿದ್ದ ಮೂಲಕ ಕಣ್ಣೀರು ಕೆಳಗುರುಳಿ ಲಿಂಗದ ಮೇಲೆಯೇ ಬಿದ್ದುವು. ಹೀಗೆ ಲಿಂಗ ಪೂಜೆ ನೆರವೇರಲು ಆ ಬೇಡನು ಶಿವನ ಕೃಪೆಯನ್ನು ಪಡೆದನು.

ಇನ್ನೊಬ್ಬ ಧೀವರನು ನೃಪನೊಡನೆ ಬೇಟೆಯಾಡಲು ಹೊರಟು ಅರಣ್ಯ ಮಧ್ಯದಲ್ಲಿ ಒಂದು ಹಾಳು ದೇವಾಲಯದೊಳಗೆ ಪೀಠದಿಂದ ಕಳಚಿಬಿದ್ದ ಒಂದು ಶಿವಲಿಂಗವನ್ನು ಕಂಡನು. ಕೂಡಲೇ ಅದನ್ನು ಕೈಯೊಳಗೆ ತೆಗೆದುಕೊಂಡನು. ಅದನ್ನು ಕಂಡ ಅರಸನು ಹೆಣಸುಟ್ಟ ಬೂದಿಯಿಂದ ಅದನ್ನು ಪೂಜಿಸು ಎಂದು ತಿರಸ್ಕಾರದಿಂದ ನುಡಿದನು. ವ್ಯಾಧಪತಿಯು ಮುಗ್ಧತನದಿಂದ ಆ ಮಾತನ್ನು

ನಂಬಿ ಚಿತಾಭಸ್ಮದಿಂದಲೇ ಆ ಲಿಂಗವನ್ನು ಪೂಜಿಸತೊಡಗಿದನು. ಒಂದು ದಿನ ಚಿತಾಭಸ್ಮ ದೊರೆಯದಾಗಲು ಅವನ ಪತ್ನಿಯು ತಾನೇ ಮುಂದೆ ಬಂದು ತನ್ನ ನುರುಹಿ ನೇಮ ನಡೆಸೆಂದು ಪತಿಗೆ ಪ್ರಾರ್ಥಿಸಿದಳು. ತನ್ನ ಸತಿಯನ್ನು ದಹಿಸಿ ಲುಬ್ಧಕನು ತನ್ನ ನೇಮ ಮುಗಿಸಿ ಕೊನೆಗೆ ಸತಿಯನ್ನು ಕರೆಯಲು ಆಕೆಯು ಮುನ್ನಿನಂತೆ ಬಂದಳು. ಪರಶಿವನು ಅವರೀರ್ವರನ್ನೂ ಕೈಲಾಸಕ್ಕೆ ಕರೆದೊಯ್ದನು.

ಕಾಳಹಸ್ತೀಶ್ವರನನ್ನು ಭಜಿಸಿ ಪಣ್ಣಾಸ್ತಿಯ ವ್ಯಾಳ, ಕರಿ ಮೊದಲಾದುವೆಲ್ಲ ಕೈಲಾಸವನ್ನು ಸಾರ್ದುವು. ಕಾಳಿ, ಕಂಟೀಕ್ಷೇತ್ರದಲ್ಲಿ ಲಿಂಗವನ್ನು ಪೂಜಿಸಿ ಗೌರಿಯಾದಳು.

ಉರಗದೇವತೆಯ ಸಂಗೀತಕ್ಕೆ ಮನಮೆಚ್ಚಿ ಹರುಷದಿಂದ ಲಿಂಗವು ಬಾಗಿರಲು ಚೋಳಭೂಪತಿಯು ಅದನ್ನು ನೆಟ್ಟಗೆ ಮಾಡಿಸಬೇಕೆಂದು ಆಗಮಜ್ಞರನ್ನು ಕೇಳಲು ಶಿವಭಕ್ತನಿಂದಿದರ ಡೊಂಕ ತಿದ್ದಬೇಕೆಂದು ಅವರು ನಿರೂಪಿಸುವರು. ಆತನು ಕೊಂಗುಲಿಯ ಕರಿಯನೈನಾರರನ್ನು ಕರೆಸಲು ಆತನು ತನ್ನ ಲಿಂಗ ಪೂಜೆಗೆ ಬೇಕಾದ ಗುಗ್ಗುಳಕ್ಕಾಗಿ ಮೂರುಕೋಟಿ ಪೊಂಗಳನ್ನು ತೆಗೆದುಕೊಂಡು ಶಿವಾಲಯವನ್ನು ಹೊಕ್ಕು ಪಾಶವನ್ನು ತೆಗೆದುಕೊಂಡು ಗಂಡಗತ್ತರಿ ಹಾಕಿ ಲಿಂಗದೆಡೆಗೆ ಪಾಶವನ್ನಿಕ್ಕಿ, ಕತ್ತರಿಯನ್ನು ತನ್ನ ಕೊರಳಿನ ಹಿಂದೆಸೆಗೆ ಸಂದಿಸಿ ನಡೆಯಲು ಲಿಂಗವು ಮೊದಲಿನಂತೆ ಋಜುವಾಯಿತು. ಪರಮಾತ್ಮನು ಆ ಭಕ್ತ ನನ್ನು ಕೈಲಾಸಕ್ಕೊಯ್ದನು.

ಶಿವಲಿಂಗವನ್ನು ಪೂಜಿಸಿ ಕೊಡಗೂಸು ಚೆನ್ನಕ್ಕನು ಐಕ್ಯಪದವನ್ನೂ, ಮಲುದಿನನು ಮನದಿಷ್ಟಾರ್ಥವನ್ನೂ, ಚೋಳಕ್ಕನೈನಾರರು ನಿತ್ಯನಿರುಪಮ ಸೌಖ್ಯ ವನ್ನೂ, ವಿಟಶ್ವೇತನು ಪ್ರಮಥಪದವಿಯನ್ನೂ, ಮಾರ್ಕಾಂಡೇಯನು ಪೂರ್ಣಾ ಯುಷ್ಯವನ್ನೂ ಪಡೆದರು.

ವಾಯಸವೊಂದು ಮಜ್ಜನಮಾಡಿ, ತನ್ನ ಪಕ್ಕಗಳನ್ನು ಜಾಡಿಸಲು ನೀರು ಸಿಡಿದು ನೆರೆಯ ಲಿಂಗದ ಮೇಲೆ ಬಿದ್ದು ಲಿಂಗದ ಮಜ್ಜನವಾಯ್ತು. ಹೀಗೆ ಲಿಂಗ ಪೂಜೆಯನ್ನು ನೆರವೇರಿಸಿದ ಮೂಲಕ ಅದು ಪುಣ್ಯಮಾರ್ಗವನ್ನೈದಿತು.

ರಘುರಾಜನು ತ್ರಿಕೋಟಿ ಲಿಂಗಗಳನ್ನು ಸ್ಥಾಪಿಸಿ ವಿಜಯಗಳ ನೆಲೆವನೆ ಯಾದನು.

ಕೊಟ್ಟೂರಬಾಚಯ್ಯನು ಅರಸನಿಗೆ ಕೊಟ್ಟಿಗೆಯಲ್ಲಿ ಗಿರಿಜೇಶನನ್ನು ತೋರಿಸಿದನು. ಬಸವಣ್ಣನವರು ಬಿಜ್ಜಳನ ಸಭೆಯಲ್ಲಿ ಕುಂಬಳಕಾಯಿಯೊಳಗೆ ಲಿಂಗವನ್ನು ತೋರಿಸಿದನು.

ಧರ್ಮರಾಜನು ದ್ರೋಣ-ಭೀಷ್ಮಾದಿಗಳನ್ನು ಕೊಂದ ಪಾಪಕ್ಕಾಗಿ ಮರುಗುತ್ತಿರಲು ಮುನಿವರನು ಆತನಿಗೆ ಶ್ರೀಗಿರಿಯ ಪ್ರದಕ್ಷಿಣೆಹಾಕಿ ಸಪ್ತನದಿಗಳ ಸನಿಹದಲ್ಲಿ ಲಿಂಗಗಳನ್ನು ಸ್ಥಾಪಿಸಿದರೆ ಆ ದ್ರೋಹ ಹೋಗುವುದೆಂದನು. ಧರ್ಮರಾಜನು ಅಂತೆಮಾಡಿ ಆ ದ್ರೋಹವಿಮುಕ್ತನಾದನು.

ಹೀಗೆ ಶುದ್ಧ ಶೈವಮಾರ್ಗದಲ್ಲಿ ಲಿಂಗವನ್ನು ಪೂಜಿಸಿ ಅನೇಕಜನರು ಸಿದ್ಧಿಯನ್ನು ಪಡೆದರು. ವೀರಶೈವಮಾರ್ಗಾನುಯಾಯಿಗಳೂ ಪ್ರಾಣಲಿಂಗವನ್ನು ಪೂಜಿಸಿ ಮುಕ್ತಿಪಡೆದಿರುವರು. ಅವರ ಕಥೆಯನ್ನು ಕೇಳಬೇಕೆಂದು ಮಹಲಿಂಗ ಗುರುವು ಹೇಳಲುದ್ಯೋಗಿಸಿದನು.

**

# ಹದಿನಾರನೆಯ ಸಂಧಿ

ಶರಣರಾದ ಧೂಪದ ಮಾಚಿದೇವಯ್ಯ, ಘಟ್ಟಿವಾಳಯ್ಯ, ಮಾರಿಗೊಂಡ, ಸತ್ಯಣ್ಣನವರೇ ಮೊದಲಾದವರು ಲಿಂಗಪೂಜೆ ಮಾಡಿ ಉರಿಕರ್ಪುರದಲ್ಲಡಗಿದಂತೆ ಲಿಂಗದಲ್ಲಿ ಬೆರೆದರು.

ಗಣಿಕಿಯರ ಸೀಮಂತರತ್ನದಂತಿದ್ದ ಕಮಲಾಯಿಯ ಕೀರ್ತಿಯನ್ನು ಕೇಳಿ ಶಿವನು ವಿಟರೂಪದಿಂದ ಬಂದು, ಆಕೆಯ ಮನೆಯಲ್ಲಿ ವಾಸಿಸಿ ಮಣಿಮಂಚದೆಡೆಗಿದ್ದ ಲಿಂಗವನ್ನೊಯ್ಯಲು ಕಮಲಾಯಿಯ ಪ್ರಾಣವೂ ಹಾರಿ ಹೋಯಿತು. ಆ ವಾರ್ತೆಯನ್ನು ಕೇಳಿ ಬಸವಾದಿ ಪ್ರಮಥಗಣರೆಯ್ತಂದು ನೋಡಿ ವಿಸ್ಮಯವಾಂತು ಸತ್ಯಣ್ಣಗಳನ್ನು ಕೇಳಲು, ಆತನು ಆಕೆಯ ಲಿಂಗ ಕಳೆದುಹೋದ ಸಂಗತಿಯನ್ನು ಅರುಹಿದನು. ತ್ರಿಪುರಾಂತಕಾಲಯದಲ್ಲಿದ್ದ ಕುಸುಮಶರಹರನನ್ನು ಕರೆಯಿಸಿ ಲಿಂಗ ಧಾರಣೆ ಮಾಡಿಸಲು ಆಕೆಗೆ ಮತ್ತೆ ಪ್ರಾಣ ಮರಳಿತು. ಮಹಾಪ್ರಮಥಗಣರೆದುರು ಪರಶಿವನು ಕಮಲಾಯಿಯ ಲಿಂಗನಿಷ್ಠೆಗೆ ಮೆಚ್ಚಿ ಆಕೆಯನ್ನು ಕೈಲಾಸಕ್ಕೆ ಕರೆದೊಯ್ದು ರುದ್ರಕನ್ಯಾಪದವಿಯಲ್ಲಿರಿಸಿದನು.

ಮಾನವಜನ್ಮದಲ್ಲಿ ಹುಟ್ಟಿ ಸ್ಥಿರಲಿಂಗವನ್ನು ತಳೆಯದಿಹ ಮಾನವನು ನರಕದಲ್ಲಿ ಬೀಳುವನೆಂಬ ಆಗಮೋಕ್ತಿಯನ್ನು ಕೇಳಿ, ಸೂಳೆನಂಬೆಕ್ಕನು ಚಿಂತಿಸುತ್ತಿರಲು ಶಿವನು ವಿಟಜಂಗಮನ ರೂಪದಲ್ಲಿ ಬರುವನು. ಲಿಂಗವನ್ನು ದಯಪಾಲಿಸಬೇಕೆಂದು ಆತನನ್ನೇ ಕೇಳಿದಳು. ಆತನು ಕೈಯಲ್ಲಿ ಹಿಡಿದಿದ್ದ ಲಿಕುಚವನ್ನು ಕೊಡಲು ಅದನ್ನೇ ಲಿಂಗವೆಂದು ಭಾವಿಸಿ ಭಕ್ತಿಯಿಂದ ಸ್ವೀಕರಿಸಿ ತನ್ನ ಅಂಗದಲ್ಲಿ ಧರಿಸಿ ತಾನು ಶಿವಭಕ್ತಳಾದೆನೆಂದು ಹಿಗ್ಗಿದಳು. ಬಿಜ್ಜಳ ಮೊದಲಾಗಿ ಭವಿಗಳಿಗೆ ಮರೆದಾದರೂ ನಮಸ್ಕರಿಸದಾದಳು. ಅದನ್ನು ಕೇಳಿ ಬಿಜ್ಜಳನು ಬಸವಣ್ಣನವರ ಮುಖಾಂತರ ಆಕೆಯನ್ನು ಕರೆಸಿದನು. ಆಕೆಯು ಸಭೆಗೆ ಬಂದು ಭಯಭಕ್ತಿಯಿಂದ ಬಸವಣ್ಣನವರ ಪಾದಕ್ಕೆ ನಮಸ್ಕರಿಸಿ ಎಡಬಲದಲ್ಲಿ ನಿಟ್ಟಿಸದೆ ನಿಂತುಬಿಟ್ಟಳು. ಬಿಜ್ಜಳನು ಪರಿಹಾಸ್ಯದಿಂದ ಅವಳ ಮುಖ ನೋಡಿ ಎಲೆ ಬಸವದಣ್ಣಾಯಕನೇ, ಸೂಳೆ ನಿಂಬೆಕ್ಕನು ಪೂಜಿಪುದಿದು ಲಿಂಗವೋ, ಲಿಕುಚಫಲವೋ ಹೇಳೆಂದು ಕೇಳಿದನು. ಶಿವಭಕ್ತರು ಲಿಂಗವನ್ನಲ್ಲದೆ ಬೇರೆ ಏನನ್ನೂ ಪೂಜಿಸ

ರೆಂದು ಬಸವಣ್ಣನವರು ಉತ್ತರಿಸಲು ಪ್ರತ್ಯಕ್ಷವನ್ನು ತೋರಬೇಕೆಂದು ಕೇಳಿದನು. ಆಗ ಬಸವಣ್ಣನವರ ಪ್ರಾರ್ಥನೆಯಂತೆ ನಂಬೆಕ್ಕನು ಕರಡಿಗೆಯನ್ನು ತೆಗೆಯಲು ಜಂಬೀರ ಫಲವಳಿದು ಶಂಭುಲಿಂಗವಾಗಿದ್ದಿತು. ಸರ್ವಜನ ಕಂಡು ನಿಬ್ಬೆರಗಾದರು.

ಕಪ್ಪಡಿಯ ಸಂಗಮೇಶ್ವರನಲ್ಲಿ ಬಯಲಾಗಬೇಕೆಂದು ಬಸವಣ್ಣನವರು ಹಡಪದಪ್ಪಣ್ಣನವರನ್ನು ಕೊಟ್ಟು, ಸತಿಯಾದ ನೀಲಲೋಚನೆಯನ್ನು ಕರೆಯಕಳುಹಲು ಆಕೆಯು ಸಂಗಮೇಶನು ಎನ್ನಯ ಕರದಲ್ಲಿಪ್ಪನು ಅಲ್ಲಿಗೆ ಬಪ್ಪುದನುಚಿತವೆಂದು ನುಡಿದು ತನ್ನಿಷ್ಟಲಿಂಗವನ್ನಪ್ಪಿ ಬಯಲಾದಳು.

ಇದು ಲಿಂಗದ ಮಹಿಮೆ; ಇನ್ನು ಆ ಲಿಂಗಕ್ಕೆ ಚೇತನವಾದ ಜಂಗಮದ ಮಹಿಮೆಯನ್ನು ವಿಸ್ತರಿಸುವೆನು ಲಾಲಿಸೆಂದು ಮಹಲಿಂಗ ಮುನಿವರ್ಯನು ಸಕರೋಜಿಗೆ ತಿಳಿಸಿ ಅದನ್ನು ಹೇಳಲುದ್ಯೋಗಿಸಿದನು.

ಜಂಗಮವು ತನ್ನೊಳಗೆ ತಾನು ಚಿನ್ನವನ್ನು ಮಾಜಿಕೊಂಡು ಕೈಲಾಸದಿಂದ ಬಂದಿಹುದು. ಅದನ್ನು ಸ್ಮರಿಸಿದರೆ ಕೋಟಿ ಜನ್ಮಾಂತರದ ಪಾಪ ಪಲ್ಲಟವಾಗುವುದು. ಮನಮುಟ್ಟಿ ಭಜಿಸಿದರೆ ಷೋಡಶದಾನಗಳ ಫಲ ಪ್ರಾಪ್ತವಾಗುವುದು. ಚರಣದರ್ಶನದಿಂದ ಮುಕ್ತಿ ಕೈಗೂಡುವುದು. ಇಂತಹ ನಿರುಪಮ ಜಂಗಮದ ಮಹಿಮೆ ಬಣ್ಣಿಸಲಸದಳವಾಗಿದೆ.

ಇಳೆಯಾಂಡಗುಡಿಮಾರನೆಂಬ ಸದ್ಭಕ್ತನು ಜಂಗಮಕೆ ಬೇಡಿದ ಪದಾರ್ಥಗಳನ್ನು ದಾನ ಮಾಡುತ್ತಿರಲು ಪರಶಿವನು ಅವನ ಭಕ್ತಿಪರೀಕ್ಷೆಗೆಂದು ಜಂಗಮರೂಪ ತಳೆದು ಸುರಿವ ಮಳೆಯಲ್ಲಿ ನಡುಗುತ್ತ ಗುಡಿಮಾರನ ಮನೆಗೆ ಬರುತ್ತಿರುವುದನ್ನು ಕಂಡು ಗುಡಿಮಾರನು ಎರಗಿ ಕೈಮುಗಿದು ಆತನನ್ನು ನಾನಾ ವಿಧದಿಂದ ಉಪಚರಿಸಿದನು. ಆತನು ಶಾಲ್ಯೋದನವನ್ನು ಬೇಡಲು ಮನೆಯಲ್ಲಿ ಅಕ್ಕಿಯಿಲ್ಲದ್ದರಿಂದ ಹಿತ್ತಿಲಲ್ಲಿ ಬಿದ್ದಿದ್ದ ಬತ್ತಗಳು ಮಳೆಯ ನೀರಲ್ಲಿ ತೇಲುತ್ತಿರಲು ಅವನ್ನಾಯ್ದು ತಂದು ನಿಜಸತಿಗೆ ಕೊಡಲು ಆಕೆಯು ಅವನ್ನು ಹುರಿದು ತಳಿಸಿ, ಅನ್ನವನ್ನು ಮಾಡಲೋಸುಗ ಕಟ್ಟಿಗೆ ತರುವದಕ್ಕಾಗಿ ಹಿತ್ತಿಲಕ್ಕೆ ಹೋಗಲು ಹಿಂದಿನಿಂದ ಮಗು ಹೋಯ್ತು. ಆ ಮಗುವು ಹಾವು ಕಚ್ಚಿ ಸಾಯಲು ಆ ಕಾಂತೆ ಈಗ ಜಂಗಮಸಂತೃಪ್ತಿಯ ಕಾಲದಲ್ಲಿ ಮರುಗುವುದು ವಿಹಿತವಲ್ಲೆಂದು ಹೋಗಿ ಅಡಿಗೆ ಮಾಡಿ ಜಂಗಮಗೆ ಎಡೆಮಾಡಲು ಮಗುವನ್ನು ಕರೆಯಬೇಕೆಂದು ಜಂಗ

ಮನು ಸೂಚಿಸಿದನು. ಅವರು ಕರೆಯಲು ಹಿಂದೆಮುಂದೆ ಮಾಡಿದಾಗ ಹಸು ಮಕ್ಕಳಿಲ್ಲದ ಮನೆಯಲ್ಲಿ ಭೋಜನವೆನಗಿಲ್ಲೆಂದು ಕರೆಯಹೇಳಿದನು. ಅವನ ಅಪ್ಪಣೆಯಂತೆ ಕರೆಯಲು ಮಗು ಓಡಿ ಒಳಗೆ ಬಂದನು. ಅವರೊಡನೆ ಊಟ ಮಾಡಿ ಅವರೆಲ್ಲರನ್ನು ಶಿವನು ಕೈಲಾಸಕ್ಕೆ ಕರೆದೊಯ್ದನು.

ಸಿರಿಯಾಳ ಚಂಗಳೆಯರ ಮನೆಗೆ ಪರಶಿವನು ಜಂಗಮರೂಪದಿಂದ ಬಂದು ತರಳರ ಮಾಂಸವನ್ನು ಸೇವಿಸುವ ನೇಮ ತನಗಿರುವುದಾಗಿ ತಿಳಿಸಿ, ಅದನ್ನು ನೀಡಿ ತೃಪ್ತಿಪಡಿಸಬೇಕೆಂದು ಕೇಳಿದನು. ಅವರು ನಿಜಸುತನ ಕೊರೆದು ಅಡಿಗೆ ಮಾಡಿ ನೀಡಲು, ಜಂಗಮನು ಸುತನಿಲ್ಲದ ಮನೆಯಲ್ಲಿ ಊಟವಿಲ್ಲವೆಂದನು. ಅವನ ಅಪ್ಪಣೆಯಂತೆ ಮಗನನ್ನು ಕರೆಯಲು ಮಗು ಓಡಿಬಂದನು. ಪರಶಿವನು ಸಿರಿಯಾಳ ಚಂಗಳೆಯರನ್ನು ಕೈಲಾಸಕ್ಕೆ ಕರೆದೊಯ್ದನು.

ನಂಬಿಯಕ್ಕನ ಮನವನ್ನು ಪರೀಕ್ಷಿಸುವುದಕ್ಕೆಂದು ಶಿವನು ಜಂಗಮರೂಪದಿಂದ ಆಕೆಯ ಮನೆಗೆ ಬರಲು, ಆಕೆಯು ಪರಮಾನ್ನ-ಪಾಯಸಗಳನ್ನು ಸಿದ್ಧ ಮಾಡಿ ನೀರು ತರಲಿಕ್ಕೆ ಹೊರಗೆ ಹೋದಳು. ಹೊರಗೆ ಹೋಗಿದ್ದ ಮಗು ಹಸಿದು ಬಂದು ತಾಯಿಯಿಲ್ಲದ್ದನ್ನು ತಿಳಿದು ಮಾಡಿಟ್ಟಿದ್ದ ಪರಮಾನ್ನ-ಪಾಯಸಗಳನ್ನು ಉಣ್ಣಲಾರಂಭಿಸಿದನು. ತಾಯಿ ಬಂದು ನೋಡಿ ಮೀಸಲಳಿಯಿತೆಂದು ದಂಡದಿಂದ ಮಗುವನ್ನು ಬಡಿಯಲು ಆತನ ತಲೆಯೊಡೆದು ಪ್ರಾಣಹೋಯಿತು. ಮಡಿದ ಮಗನನ್ನು ಕಾಲುಹಿಡಿದು ಎಳೆದು ಹಿತ್ತಲದ ಚಿಪ್ಪಾಡಿಯಲ್ಲಿ ಚಲ್ಲಿ ಬೇರೆ ಅಡಿಗೆ ಮಾಡಿ ನೀಡಲು ತನುಜಾತರಿಲ್ಲದ ಮನೆಯಲ್ಲಿ ತನಗೆ ಊಟವಿಲ್ಲವೆಂದು ಜಂಗಮ ನುಡಿಯಲು ನಂಬೆಕ್ಕನು ಮೌನವಾಂತಳು. ಮತ್ತೆ ಕರೆ ಎನಲು ಆಕೆಯು ಆ ಗಾಡಿಕಾರನ ನಿಲವನ್ನರಿತು ಒನಿಕೆಯಿಂದ ಹೊಡೆವೆನೆಂದು ಹೆದರಿಸಲು ಅಂಜಿ ಶಿವನು ತನ್ನ ನಿಜರೂಪ ತೋರಿಸಿದನು. ಆದರೂ ಮೊದಲಿನ ರೂಪದಿಂದ ಉಂಡಲ್ಲದೆ ಬಿಡೆನೆಂದು ಆಗ್ರಹಪಡಿಸಲು ಶಿವನು ಆ ರೂಪದಲ್ಲಿ ಊಟಮಾಡಿ, ತಾಯಿ ಮಗುವಿನೊಡನೆ ಆ ಪುರವನ್ನೇ ಕೈಲಾಸಕ್ಕೊಯ್ದನು.

ಕಾರಿಕಾಲವ್ವೆಗೆ ಪತಿಯು ಮಾವಿನ ಹಣ್ಣೊಂದನ್ನು ತಂದುಕೊಡಲು ಆಕೆಯು ಅದನ್ನು ಮುಚ್ಚಿಟ್ಟು ಗಿರಿಜಾಧವನು ಜಂಗಮರೂಪದಿಂದ ಬಂದು ಅದನ್ನು ಬೇಡಲು ಅವನಿಗೆ ಕೊಟ್ಟುಬಿಟ್ಟಳು. ಪತಿಯು ಅದನ್ನು ಕೇಳಲು ಮರಳಿ ಕೊಟ್ಟು ಶಿವನನ್ನು ಒಲಿಸಿ ಕೈಲಾಸಕ್ಕೆ ಹೋದಳು.

ವೈಜವ್ವೆಯ ಪತಿಯು ಜೈನ ಗುರುಗಳಿಗೆಂದು ಮಾಡಿಸಿದ ಅನ್ನವನ್ನು ಆಕೆಯು ಜಂಗಮಕೆ ನೀಡಿದುದನ್ನು ಕೇಳಿ, ಪತಿಯು ಆಕೆಯನ್ನು ಬಡಿಯಲು ಆ ಪೆಟ್ಟು ಜೈನಗುರುಗಳಿಗೆ ಬಡಿಯುವುದು. ಆಗ ಪತಿಯು ಪಶ್ಚಾತ್ತಾಪಪಟ್ಟು ಸತಿಯ ಅನುಮತದಿಂದ ಶಿವಭಕ್ತನಾಗಿ ಮುಕ್ತಿಮಾರ್ಗವ ಸಾರ್ದನು.

ಶೂಲದ ಬೊಮ್ಮಿತಂದೆಗಳು ಮೊರೆಹೊಕ್ಕವರನ್ನು ಕೊಡದ ನೇಮವನ್ನು ಕೈಕೊಂಡಿದ್ದರು. ಅವರನ್ನು ಪರೀಕ್ಷಿಸಬೇಕೆಂದು ಶಿವನು ಜಂಗಮಾಕಾರದಿಂದ ಬಂದು, ಬಿಜ್ಜಳಧರಾಧೀಶನ ಮನೆಗೆ ಕನ್ನ ಹಾಕಿ ಬೊಮ್ಮಿತಂದೆಗಳ ಮೊರೆಹೋಗುವನು. ಅವನ ಚೌರ್ಯವನ್ನು ತಾನು ಹೊತ್ತು ಬೊಮ್ಮಿತಂದೆಯು ಶೂಲವನ್ನೇರಲು ಅಣಿಯಾಗಿ ಶಿವನನ್ನೊಲಿಸಿ ನಿಜಪದವ ಪಡೆದನು.

ಜಂಗಮನೋರ್ವನು ಭೂವರನ ಭಾಂಡಾರದೊಳಗಿನ ಹೊನ್ನುಗಳನ್ನು ಕಳವು ಮಾಡಿರಲು ಕಿಂಕರರು ಬೆನ್ನಟ್ಟಿ ಬಂದರು. ಆಗ ಆ ಜಂಗಮನು ಮಹಾಮಹಿಮನಾದ ಕೈಕೂಲಿ ಚಾಮಯ್ಯನನ್ನು ಮೊರೆಹೊಕ್ಕನು. ಅವನನ್ನು ಅಡಗಿಸಿ ರಕ್ಷಿಸಿ ಚಾಮಯ್ಯನು ನಿಜಪದವನ್ನು ಸಾರ್ದನು.

ಮೊನೆಧರ ಚೋಳರಾಜನು ಚತುರಂಗಸೇನೆಯೊಡನೆ ನಿಜಪತ್ನಿವೆರಸಿ ಹೊರಟಿರಲು ಜಂಗಮನೋರ್ವನು ಆಕೆಯನ್ನು ಕಂಡು ಮೋಹಿಸಿ ವಿರಹದಿಂದ ಮರುಗತೊಡಗಿದನು. ಅದನ್ನರಿತು ಮೊನೆಧರಚೋಳನು ತನ್ನ ಹೆಂಡತಿಯನ್ನು ಆತನಿಗೆ ಕೊಟ್ಟು ಆತನ ಕಿಂಕರನಾಗಿ ಶ್ರದ್ಧೆಯಿಂದ ಶಿವನನ್ನು ಮೆಚ್ಚಿಸಿ ಕೈಲಾಸಕ್ಕೆ ಹೋದನು.

ಶಿವನು ಚಂಡಾಲವೇಷದಿಂದ ಸೂರಸಾನಿಯ ಮನೆಗೆ ಬರಲು ಆಕೆಯು ಆತನನ್ನು ಭಕ್ತಿಯಿಂದ ಬರಮಾಡಿಕೊಂಡು ಪೂಜಿಸತೊಡಗಿದಳು. ಆ ಊರ ವಿಪ್ರರು ಒಟ್ಟುಗೂಡಿ "ಎಲೇ ಕಾಂತೆಯೇ, ಬ್ರಾಹ್ಮಣೋತ್ತಮ ಕುಲವನ್ನು ಹೊಲೆಗೆಡಿಸಿದ ಆ ಚಂಡಾಲನನ್ನು ಈಗಲೇ ಹೊರಗೆ ಹಾಕಬೇಕು" ಎಂದು ಆಕೆಯನ್ನು ಜರೆಯಲು ಅವಳು ಆತನನ್ನು ಥಳಥಳಿಪ ಲಿಂಗಮೂರ್ತಿಯನ್ನಾಗಿ ಮಾಡಿ ತೋರಿದಳು. ಪರಶಿವನು ಮೆಚ್ಚಿ ಆಕೆಗೆ ಪ್ರಮಥಪದವಿಯನ್ನು ಇತ್ತನು.

ಸೋಮಸೀಮಾರರು ನಿರ್ಮಿಸಿದ ಯಾಗಕ್ಕೆ ಶಿವನು ಶ್ವಪಚಾಕೃತಿಯಿಂದ ಬರಲು ಬ್ರಾಹ್ಮಣರು ಅದನ್ನು ಕಂಡು ಅಲ್ಲಿಂದ ಓಡಿದರು. ಶಿವನು ಹೋಮದ ಪೂಜೆಯನ್ನು ಕೈಕೊಂಡು ಆ ಭಕ್ತನನ್ನು ಮೆರೆದನು.

ಸಾಮವೇದಿಯ ಪಿತೃಕಾರ್ಯಕ್ಕೆ ಶಿವನು ಹಿರಿಯ ಭಕ್ತನಾಕಾರದಿಂದ ಬರಲು ಅವನಿಗೆ ನಮಸ್ಕರಿಸಿ ಪೂಜಿಸಿದನು. ಶಿವನು ಮೆಚ್ಚಿ ಮೂವತ್ತಾರು ನಗರ ಗಳ ಸಮೂಹವನ್ನೇ ಕೈಲಾಸಕ್ಕೊಯ್ದನು.

ಪಗಲ್ಚೋಳನು ಸಮರಾಂಗಣದಲ್ಲಿ ಎದುರಾದ ಭಟರ ಮಸ್ತಕಗಳನ್ನು ಖಂಡಿಸುತ್ತಿರಲು ಜಂಗಮದ ಜಡೆದಲೆಯನ್ನು ಕಂಡು, ಮರುಗಿ, ಅಘವಿನಾಶಕ್ಕಾಗಿ ನಿಜಕಂಠವನ್ನೇ ಕಡಿದುಕೊಳ್ಳಲು ಸಿದ್ಧನಾದನು. ಆಗ ಶಿವನು ಪ್ರತ್ಯಕ್ಷನಾಗಿ ಜಡೆದಲೆಯ ಜಂಗಮಕ್ಕೆ ಪ್ರಾಣವನ್ನಿತ್ತು ಪಗಲ್ಚೋಳನಿಗೆ ಗಣಪದವನ್ನಿತ್ತನು.

ಶ್ರೀಗಿರಿಸುತಾನಾಥನು ಐಸರನಲ್ಲಿಗೆ ಬಂದು ಆತನ ಹೆಂಡತಿಯುಟ್ಟ ಬಟ್ಟೆ ಯನ್ನು ಬೇಡಲು ಕೊಟ್ಟು ಅದು ಸಾಲದೆಂದೊಡನೆ ತನ್ನ ಕೌಪೀನವನ್ನೇ ಕೊಟ್ಟು ನಮಿಸಿದನು. ಶಿವನು ಅವನ ಭಕ್ತಿಗೆ ಮೆಚ್ಚಿ ಅವನನ್ನು ಕೈಲಾಸಕ್ಕೆ ಕರೆದೊಯ್ದನು.

ದಾಸಿಮಯ್ಯನು ಹನ್ನೆರಡು ವರುಷ ನಿರಂತರ ನೆಯ್ದ ಬಟ್ಟೆಯನ್ನು ಜಂಗಮನು ಬೇಡಲು ಕೊಟ್ಟು ಶಿವನ ಕೃಪೆಯಾಂತು ಮೇರುಗಿರಿಗೆ ಹೋದನು.

ನಿರ್ಲಜ್ಜ ಶಾಂತಯ್ಯಗಳ ಮನೆಗೆ ಜಂಗಮನು ಬಂದು ಬಟ್ಟೆಯನ್ನು ಬೇಡಲು, ಸತಿಪತಿಗಳಿಬ್ಬರ ಬಟ್ಟೆಗಳನ್ನು ಕೊಟ್ಟು, ಆತನು ಶಿವನನ್ನು ಒಲಿಸಿ, ಗಣ ಪದವನ್ನು ಸಾರ್ದನು.

ಅಮರನೀತಿಯ ಮನೆಗೆ ಶಿವನು ಚರವೇಷದಿಂದ ಬಂದು ತನ್ನ ಕೌಪೀನ ವನ್ನು ಜತನದಿಂದಿರಿಸಬೇಕೆಂದು ಹೇಳಿ ಕೊಟ್ಟು, ತಾನೇ ಅದನ್ನು ಬಯಲುಮಾಡಿ ತದನಂತರ ತನ್ನ ಕೌಪೀನವನ್ನು ಕೊಡಬೇಕೆಂದು ಕೇಳಲು, ಪೀತಾಂಬರವನ್ನು ಹರಿದು ಕೊಟ್ಟರೆ ಒಲ್ಲೆನೆಂದೂ, ತನ್ನ ಕೌಪೀನಕ್ಕೆ ಸಮನಾದ ಇನ್ನೊಂದು ಕೌಪೀನ ಮುಂಟು; ಅದರ ಸಮತೂಕದ ಅರಿವೆಯನ್ನು ತೂಗಿಕೊಡಬೇಕೆಂದೂ ಕೇಳಲು ಅವರು ಅದಕ್ಕೆ ಒಪ್ಪುವರು. ಪರಿಪರಿಯ ವಸ್ತ್ರಗಳನ್ನು ಚಿಂತಾಲದೊಳಗಿರಿ ಸಿದರೂ ಆ ಕೌಪೀನಕ್ಕೆ ಸಮತೂಕವಾಗದಾಯ್ತು. ಆಗ ತನ್ನ ಸತಿ-ಸುತರನ್ನೇ ತೂಕಕ್ಕೆ ಹಚ್ಚಿಕೊಟ್ಟು ಶಿವನನ್ನು ಒಲಿಸಿ ಅಮರನೀತಿಯು ಕೈಲಾಸಕ್ಕೆ ಸಾರ್ದನು.

ಸಿಂಧುಬಲ್ಲಾಳಭೂಪನ ಭಕ್ತಿಯ ಬಿಂಕವನ್ನು ಪರಕಿಸುವುದಕ್ಕಾಗಿ ಶಿವನು ಚರರೂಪದಲ್ಲಿ ಬಂದು ಆತನ ಚಂದನಾಂಗಿಯ ನೋಡಿ ಮೋಹಿಸಲು, ಅರಸನು

ಅವರೀರ್ವರನ್ನು ಒಳಪುಗಿಸಿ ತಾನು ಬಾಗಿಲಕಾಯುಹತ್ತಿದನು. ಪರಮೇಶನು ಮೆಚ್ಚಿ ಆ ಭಕ್ತನನ್ನು ನೆರೆಮೆರೆದನು.

ಇಪ್ಪಗೆಯಾಂಡನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಶಿವನು ಜಂಗಮಾಕಾರದಿಂದ ಬಂದು, ಅವನ ಹೆಂಡತಿಯನ್ನು ಬೇಡಲು ಆತನು ಅವಳನ್ನಿತ್ತು ಸೇವಕನಾದನು. ನಿಮ್ಮವರು ಕಂಡರೆ ಎನ್ನ ಕತ್ತ ಕತ್ತರಿಸುವರೆಂದು ನುಡಿಯಲು ತನ್ನ ಸೀಮೆಯನ್ನು ದಾಟಿಸಿ ಕಳಿಸುವನು. ಹೀಗೆ ಶಿವನೊಲವನ್ನು ಪಡೆದನು.

ಸಿರಿವಂತ ಭೂಪಾಲನು ವೀರಮಾಹೇಶ್ವರಾರಾಧನೆಗೆಂದು ತನ್ನ ಹೆಂಡತಿಯ ಕೈಯಲ್ಲಿ ಧನವನ್ನು ಕೊಟ್ಟು ತಾನು ದೇಶಾಂತರರಾಜರನ್ನು ಜಯಿಸುವುದಕ್ಕಾಗಿ ಹೋದನು. ಮೂರುವರ್ಷ ಬರಬೀಳಲು ಆ ಹಣವನ್ನು ಆಕೆಯು ತನ್ನ ಬಂಧುಬಳಗವನ್ನು ಪರಿಪಾಲಿಸಲು ವಿನಿಯೋಗಿಸಿದಳು. ಸಿರಿವಂತ ಭೂಪಾಲನು ಮರಳಿಬಂದ ಮೇಲೆ ನಿಜಸಂಗತಿಯನ್ನು ತಿಳಿದು ಗರ್ಜಿಸುತ್ತ ತನ್ನ ಹೆಂಡತಿಯನ್ನು ಕೊಲ್ಲಲು ಶಿವನು ಮೆಚ್ಚಿ ಅರಸನಿಗೆ ಮುಕ್ತಿಪದವನ್ನಿತ್ತನು.

ಸತ್ಯಗುಣಸಂಪನ್ನನೂ ಚಿನ್ಮಯ ಸ್ವರೂಪನೂ ಆದ ಜಂಗಮಜೀವಿ ದಸರಯ್ಯನನ್ನು ಕಾಡುವುದಕ್ಕೆ ಮೋಟಮಲ್ಲನೆಂಬುವನನ್ನು ಕೃತ್ರಿಮದ ಜಂಗಮರೂಪದಿಂದ ಅವನಲ್ಲಿಗೆ ಕಳಿಸಿದರು. ಬಂದ ಜಂಗಮನನ್ನು ದಸರಯ್ಯನು ಭಕ್ತಿಯಿಂದ ಸ್ವಾಗತಿಸಿದನು. ಮೋಟಮಲ್ಲನು ತಲೆಯೊಡೆಯುವಂತೆ ತನ್ನ ಮೊಂಡಗೈಯಿಂದ ದಸರಯ್ಯನಿಗೆ ತಾಗಿಸಲು ಅವನ ಹಸ್ತ ನೊಂದುದೆಂದು ಅದನ್ನು ಒತ್ತತೊಡಗಿದನು. ಮಧುಮಾಸದಲ್ಲಿ ಚಿಗಿತ ಮಾಮರದ ಕಳಕಿಗಳಂತೆ ಮೋಟಮಲ್ಲನ ಮೊಂಡಗೈ ಕೊನರಿ ಪ್ರಜ್ವಲಿಸಿತು. ಶಿವನು ದಸರಯ್ಯನ ಭಕ್ತಿಗೆ ಮೆಚ್ಚಿ ನಿಜರೂಪವನ್ನು ತೋರಿಸಿದನು.

ವೃಷಭೇಶ್ವರನು ಶಿವನಾಜ್ಞೆಯಿಂದ ಮಾದರಸ, ಮಾದಲಾಂಬಿಕೆಯರ ಗರ್ಭದಲ್ಲಿ ಜನಿಸಿ ಬಸವಣ್ಣನೆಂಬ ಅಭಿಧಾನದಿಂದ ಬಾಲಲೀಲೆಯನ್ನು ಮುಗಿಸಿ ಸಂಗಮನಾಥನ ಕೃಪೆಯಿಂದ ಕಲ್ಯಾಣಪಟ್ಟಣಕ್ಕೆ ಹೋಗಿ ಅಲ್ಲಿ ಸುಖದಿಂದಿದ್ದನು. ಗಗನಾಂತರದಿಂದ ಬಿದ್ದ ಓಲೆಯೊಂದನ್ನು ಓದಿ, ಅರಸನಿಗೆ ಅಪರಿಮಿತ ಧನವನ್ನೊದಗಿಸಿಟ್ಟು ಆತನ ಮಂತ್ರಿಪದವನ್ನು ಪಡೆದನು. ಆತನು ಗುರು-ಲಿಂಗ-ಜಂಗಮದ ಭಕ್ತನಾಗಿ ತನು-ಮನ-ಧನಗಳನ್ನರ್ಪಿಸಿ ಮೆರೆಯುತ್ತಿರಲು ಆ ಮಹಾಮಹಿಮನಲ್ಲಿಗೆ ಹಾಲನೇಮದವರು, ಮೊಸರ ನೇಮದವರು ಹೀಗೆ ಬಗೆಬಗೆಯ ನೇಮದ

ಜಂಗಮರು ಲಕ್ಷದಮೇಲೆ ತೊಂಬತ್ತಾರು ಸಾವಿರ ಜನರು ಬಂದು, ಬಸವಣ್ಣನವರ ಭಕ್ತಿಯನ್ನು ಸ್ವೀಕರಿಸಿ ಕಲ್ಯಾಣದಲ್ಲಿ ಸುಖದಿಂದಿದ್ದರು. ಕಳ್ಳರನ್ನು, ಕಪಟರನ್ನು ಸುಳ್ಳರನ್ನು, ಹೀನಕುಲದವರನ್ನು ತನ್ನ ಭಕ್ತಿಯ ಬಲದಿಂದ ನಿಜಜಂಗಮರನ್ನಾಗಿ ಮಾಡಿ ಬಸವಣ್ಣನು ಮೆರೆಯುತ್ತಿದ್ದನು.

ಬಸವಣ್ಣನವರು ಕಲ್ಯಾಣದಲ್ಲಿ ಅನೇಕ ಪವಾಡಗಳನ್ನು ತೋರಿಸಿದರು. ಅವರು ಬಿಜ್ಜಳನ ಕೂಡ ಬೇಟೆಗೆ ಹೋದಾಗ, ಒಬ್ಬ ಜಂಗಮನು ಬಂದು ಹುಲಿಯ ಹಾಲನ್ನು ಬೇಡಲು ಗವಿಯೊಳಗಿನ ಹುಲಿಯನ್ನು ಹಿಂಡಿ ಹಾಲು ನೀಡಿ ಆ ಜಂಗಮನನ್ನು ತಣಿಸಿದರು. ಶಿವನು ಜಂಗಮ ರೂಪದಿಂದ ಬಂದು ಅವರ ಪತ್ನಿ ನೀಲಲೋಚನೆಯನ್ನು ಬೇಡಲು ಆಕೆಯನ್ನು ಕೊಟ್ಟನು. ಒಬ್ಬ ವಿಟಜಂಗಮನು ಬಂದು ನೀಲಲೋಚನೆಯುಟ್ಟ ಸೀರೆಯನ್ನು ಕೇಳಲು ಅದನ್ನು ಕೊಟ್ಟುಬಿಟ್ಟನು. ಆ ಸೀರೆಯನ್ನು ಆ ಜಂಗಮನು ತನ್ನ ಕೈಯಿಂದ ತೆಗೆದುಕೊಳ್ಳಲು ಒಂದರ ಮೇಲೊಂದು ಲೆಕ್ಕವಿಲ್ಲದಷ್ಟು ಪೀತವಸನಗಳು ಬಂದುವು. ಜಂಗಮನು ಬೆರಗಾದನು. ವಿಟ ಜಂಗಮನನ್ನು ಬಸವಣ್ಣನವರು ತಮ್ಮ ಈ ಪವಾಡದಿಂದ ಸಂತೋಷಮಾನಸನನ್ನಾಗಿ ಮಾಡಿದರು.

ಕೊಂಡೆಯರ ಮಾತನ್ನು ಕೇಳಿ, ಭೂಮಂಡಲಾಧಿಪ ಬಿಜ್ಜಳನು ಶಿವನಾಗಮಯ್ಯನವರು ಚಂಡಾಲವಂಶಜರೆಂದು ಸಭೆಯಲ್ಲಿ ನಿಂದಿಸುತ್ತಿರಲು, ಅದನ್ನು ಕೇಳಿ ಬಸವಣ್ಣನವರು ಕಿವಿ ಮುಚ್ಚಿಕೊಂಡು ' ಭೂಪತಿಯೇ, ಶಿವನಾಗಮಯ್ಯಗಳ ಘನತೆಯನ್ನು ನೀನರಿಯೆ ' ಎಂದು ನುಡಿದರು. ಆತನುತ್ತಮಸುಧಾಮಲರೂಪನಾದರೆ ಸರ್ವಜನ ತಿಳಿವಂದದೆ ಅವನ ಕೈಯಲ್ಲಿ ಅಮೃತವನ್ನು ತೋರಿಸಬೇಕೆಂದು ಬಿಜ್ಜಳನು ಆಹ್ವಾನಿಸಿದನು. ಆತನ ಆಹ್ವಾಹನವನ್ನು ಸ್ವೀಕರಿಸಿ ಬಸವಣ್ಣನವರು ಶಿವನಾಗಮಯ್ಯಗಳನ್ನು ಕರೆಸಲು ಅವರು ಅಲ್ಲಿಗೆ ಆಗಮಿಸಿದರು. ಅವರು ಬಂದೊಡನೆ ಬಸವಣ್ಣನವರು ಎದ್ದು ಅವರಿಗೆ ನಮಸ್ಕರಿಸಿ ಮಚ್ಚರದಿನೋಳ್ಪ ಮಾನವರ ಸಂದೇಹವನ್ನು ಬಿಡಿಸಲು ಪರಮಾಮೃತವನ್ನು ತೋರಬೇಕೆಂದು ಬಸವರಸನು ಶಿವನಾಗಮಯ್ಯಗಳ ಕರತಳವನ್ನು ತನ್ನ ಕೈಯಿಂದ ಹೊಡೆಯಲು ಕಾಮಧೇನುವಿನ ಕೆಚ್ಚಲಿಂದ ಹಾಲು ಹರಿದಂತೆ ಶಿವನಾಗಮಯ್ಯಗಳ ಹಸ್ತದಿಂದ ಹಾಲು ಸುರಿಯಿತು. ಬಿಜ್ಜಳ ಮೊದಲಾದ ಪೌರಜನರು ಅಚ್ಚರಿದಳೆದು ಭೀತಿಯಿಂದ ಪೊಡಮಟ್ಟು ಮನ್ನಿಸಿ ಅವರನ್ನು ಕೊಂಡಾಡಿದರು.

ಲಿಂಗಪೂಜಾಸಮಯದಲ್ಲಿ ದಿವ್ಯಮೌಕ್ತಿಕದ ರಂಗವಲ್ಲಿಯ ನೇಮವುಂಟು. ಕಾರಣ ಮೂರು ಕಂಡುಗ ಮುತ್ತುಗಳನ್ನು ಕೊಡಬೇಕೆಂದು ಒಬ್ಬ ಜಂಗಮನು

ಕೇಳಲು ಬಸವರಸನು ಬಿಳಿಜೋಳದ ರಾಶಿಯನ್ನು ಮುತ್ತುಗಳನ್ನಾಗಿ ಮಾಡಿ ಕೊಟ್ಟನು.

ಒಂದು ದಿನ ಶಿವನು ಕಿನ್ನರಿಯ ಬ್ರಹ್ಮಯ್ಯನವರ ಪ್ರಾಣವನ್ನೊಯ್ಯಲು ಬಸವಣ್ಣನವರು ರೋದನಂಗೈದು ಕಡೆಗೆ ತಾವೂ ಅವರೊಡನೆ ತಮ್ಮ ಪ್ರಾಣವನ್ನು ಬಿಟ್ಟರು. ಬೊಮ್ಮಿತಂದೆಗಳಿಗೆ ಅಸು ಬಂದೊಡನೆ ಬಸವಣ್ಣನವರೂ ಉಸಿರಾಡಿಸ ತೊಡಿಗಿದರು.

ಮೇದಾರ ಕೇತಯ್ಯನವರ ಪ್ರಾಣಹೋದ ಸಮಯದಲ್ಲಿಯೂ ಬಸವಣ್ಣ ನವರು ಇಂತಹದೇ ಒಂದು ಪವಾಡವನ್ನೆಸಗಿದರು. ಮೇದಾರ ಕೇತಯ್ಯ ಹಾಗು ಬಸವಣ್ಣನವರ ಸ್ನೇಹಪರೀಕ್ಷೆಗಾಗಿ ಒಂದು ದಿನ ಶಿವನು ಕೇತಯ್ಯಗಳ ಪ್ರಾಣ ವನ್ನೊಯ್ಯಲು ಬಸವಣ್ಣನವರು ಅಳತೊಡಗಿದರು. ಚೆನ್ನಬಸವಣ್ಣನವರು ಮಡಿವ ಳಯ್ಯನವರನ್ನು ಕರೆದು ತರಬೇಕೆಂದು ಹಡಪದಣ್ಣನವರನ್ನು ಕಳುಹಿದರು. ಅಪ್ಪಣ್ಣ ಗಳು ಮಾಚಿದೇವರಲ್ಲಿಗೆ ಬಂದು, ನಡೆದ ಸಂಗತಿಯನ್ನರುಹಲು ಮಾಚಿದೇವರು " ಕೇತಯ್ಯನವರು ಶಿವನೊಳೇಕಾರ್ಥವನ್ನು ಹೊಂದಲು ಬಸವಾದಿ ಪ್ರಮಥರು ಅಳುವುದೇಕೆ ? ಚೆನ್ನೆಯರಂತೆ ಕಣ್ಣೀರು ಸುರಿಸುವರಲ್ಲಿಗೆ ನಾನು ಬರಲಾರೆನೆ"ಂದು ನುಡಿದರು. ಆ ಮಾತನ್ನು ಅಪ್ಪಣ್ಣನವರ ಮುಖದಿಂದ ಕೇಳಿ ಬಸವಣ್ಣನವರೂ ತಮ್ಮ ಅಸುವನ್ನು ಬಿಟ್ಟುಬಿಟ್ಟರು. ಇದನ್ನರಿತು ಮಾಚಿವಿಭು " ಕಲಿಯುಗದ ಮಹಿಮೆ ಮುಗಿಯದ ಶರಣರಸುವನ್ನು ಕೊಂಡೊಯ್ದುದೇಕೆ ? " ಎಂದು ತ್ರಿಪು ರಾಂತಕಾಲಯದ ಗೋಪುರದ ಮೇಲೆ ಇದ್ದ ಗಂಟೆಯನ್ನು ಬಾರಿಸಿದನು. ಆ ನಾದ ಉಮಾನಾಥನ ಆಸ್ಥಾನಮಂಡಲವನ್ನೆಲ್ಲ ವ್ಯಾಪಿಸಲು ಪರಶಿವನು ತಪ್ಪಾಯಿತೆಂದು ಮರಳಿ ಆ ಶರಣನ ಪ್ರಾಣವನ್ನಿತ್ತನು. ಹೀಗೆ ಬಸವಣ್ಣನವರು ಲಿಂಗ-ಜಂಗಮ ಪ್ರಾಣಿಗಳಾಗಿ ಕಲ್ಯಾಣದಲ್ಲಿ ಬಾಳಿದರೆಂದು ಮಹಲಿಂಗಮುನಿವರ್ಯನು ಸಕ ರೋಜಿ ಮಹಾರಾಜನಿಗೆ ವಿವರಿಸಿದನು. ಅದನ್ನು ಕೇಳಿ ಸಕರೋಜಿಯು ಧನ್ಯ ನಾದೆನೆಂದು ನುಡಿದು, ತಮ್ಮ ವಂಶಕ್ಕೆ ಮಹಲಿಂಗ ಮುನಿವರ್ಯನೇ ಗುರುವೆಂದು ಸ್ವೀಕರಿಸಿ ಆತನ ಸ್ತೋತ್ರ ಮಾಡಿದನು.

**

# ಹದಿನೇಳನೆಯ ಸಂಧಿ

ಭಕ್ತರನ್ನು ಪಾಲಿಸುತ್ತ ಮಹಲಿಂಗಮುನಿವರ್ಯನು ಮೋದಪುರದಲ್ಲಿರುತ್ತಿರಲು ಮಾಲೋಜಿಮಹಾರಾಜನ ಗರ್ಭಸಂಭವನೆನಿಪ ಗೋವಿಂದರಾಜನಿಗೆ ಮಲರೋಗ ಪ್ರಾಪ್ತವಾಗಿ, ಅತಿಯಾಗಿ ಬಾಧಿಸಿ, ಎಲ್ಲ ಔಷಧೋಪಚಾರವನ್ನು ಮಿಕ್ಕಿ ನಿಂತಿದ್ದಿತು. ಆಗ ಮಹಲಿಂಗಮುನಿವರ್ಯನಲ್ಲಿಗೆ ಬಂದು, ತನ್ನ ರೋಗ ನಿವಾರಣೆಯಾಗುವಂತೆ ಆಶೀರ್ವದಿಸಬೇಕೆಂದು ಪ್ರಾರ್ಥಿಸಿದನು. ಮಹಲಿಂಗ ದೇವನು ಆತನ ಮೈದಡವುತ್ತ "ಇದು ಪೂರ್ವಸಂಚಿತ ಕರ್ಮಫಲ; ಪ್ರಾರಬ್ಧ ಕರ್ಮಗಳು ಬಹುರೂಪದಿಂದ ಬಂದು ಸಂಕಟವನ್ನುಂಟುಮಾಡುವುವು. ಅವಕ್ಕೆ ವೈದ್ಯರು ಏನನ್ನೂ ಮಾಡಲರಿಯರು". ಎಂದು ಮಹಲಿಂಗಮುನಿವರ್ಯನು ನುಡಿಯುತ್ತಿರಲು ಆ ರೋಗ ಹೆಚ್ಚಾಗಿ ಪ್ರಾಣಹೋಯಿತು. ಆತನ ಅರ್ಧಾಂಗಿಯು ಮುನಿಪತಿಯ ಪಾದಕಮಲಗಳಿಗೆರಗಿ ತನ್ನ ಪತಿಯ ಪ್ರಾಣವನ್ನುಳಿಸಬೇಕೆಂದು ಆರ್ತಧ್ವನಿಯಿಂದ ಪ್ರಾರ್ಥಿಸತೊಡಗಿದಳು. ತಾಯೇ ನೀನಂಜದಿರೆಂದು ಆಕೆಗೆ ಅಭಯವನ್ನಿತ್ತು ಗಾಯತ್ರಿ, ಶತರುದ್ರೀಯಗಳನ್ನು ಜಪಿಸಿ, ಪ್ರಾಣಹೋದ ಗೋವಿಂದರಾಜನ ಕೊರಳಲ್ಲಿ ರುದ್ರಾಕ್ಷಿಮಾಲೆಯನ್ನು ಧರಿಸಲು ಒಡನೆಯೆ ನಿದ್ದೆ ತಿಳಿದೆದ್ದ ಮಾನವನಂತೆ ಆತನು ಕಣ್ತೆರೆದನು. ಗೋವಿಂದರಾಜನು ಮುನಿಪತಿಯ ಪಾದಕಮಲಗಳಿಗೆರಗಿ, ತನಗೆ ಅಸುವನ್ನಿತ್ತ ರುದ್ರಾಕ್ಷಿಯ ಮಹಿಮೆಯನ್ನು ವಿವರಿಸ ಬೇಕೆಂದು ಪ್ರಾರ್ಥಿಸಲು ಕಾರುಣ್ಯದಿಂದ ಗುರು ಮಹಲಿಂಗಮುನಿಯು ಅದನ್ನು ವಿವರಿಸಿದನು.

ದ್ವಿಜನಾಗಲಿ, ಚಂಡಾಲನಾಗಲಿ ಆವನೇ ಆಗಲಿ ರುದ್ರಾಕ್ಷಿಯನ್ನು ಮರಿದಾದರೂ ಒಮ್ಮೆ ಧಾರಣೆ ಮಾಡಿದರೆ ಆತನು ಭೂರುದ್ರನಾಗುವನು. ರುದ್ರಾಕ್ಷಿ ಹಾಗೂ ಶಿವಮಂತ್ರಗಳನ್ನು ನೆರೆ ನಂಬಿ ಹರಿ-ಬ್ರಹ್ಮ-ಸುರರೆಲ್ಲ, ನಿತ್ಯನಿರ್ಮಲ ಪದವಿಯನ್ನು ಪಡೆದರು.

ಹಿಂದೊದು ಕಾಲದಲ್ಲಿ ದಾಶಾರ್ಹನೆಂಬರಸನು ಇಂದುಕುಲಸಂಜಾತನೆಂದೆನಿಸಿ ಭೂತಳದಿ ಸಂದ ವೈಭವದಿಂದ ಬಾಳುತ್ತಿರಲು ಒಂದು ದಿನ ಆತನು ತನ್ನ ಹೆಂಡತಿಯನ್ನು ಕಂದರ್ಪನಾವಹಕ್ಕೆ ಕರೆದನು. "ಮಮತೆಯಿಲ್ಲದ ಮಾನಿನಿ

ಯನ್ನು, ಗರ್ಭವತಿಯನ್ನು, ವ್ರತವನ್ನಾಚರಿಸುವವಳನ್ನು, ರೋಗಪೀಡಿತಳನ್ನು, ಪುಷ್ಪವತಿಯನ್ನು ಪ್ರೌಢರು ರಮಿಸಬಾರದು" ಎಂದು ಅವಳು ನುಡಿಯಲು ಆಕೆಯ ಮಾತನ್ನು ಕೇಳದೆ ಜೋರಿನಿಂದ ಅಪ್ಪಿಕೊಳ್ಳಲು ಕಾದ ಕಾಂಚನದ ಬೊಂಬೆಯನ್ನಪ್ಪಿದಂತಾಗಿ ದೇಹವು ಸುಡಹತ್ತಲು ಹೀಗೇಕೆ ಎಂದು ತನ್ನ ಪತ್ನಿಯನ್ನು ಕೇಳಿದನು. ತನಗೆ ದೂರ್ವಾಸಮುನಿಯು ಬಾಲ್ಯದಲ್ಲಿ ಮಂತ್ರೋಪದೇಶ ಮಾಡಿದ ಕಾರಣ ಹೀಗಾದುದೆಂದು ಆಕೆ ನುಡಿದಳು. ಆ ಮೇಲೆ ದಾಶಾರ್ಹನು ಸತಿಯ ವಚನದಂತೆ ಅವಳೊಡನೆ ಗಾರ್ಘ್ಯಋಷಿಯ ಆಶ್ರಮಕ್ಕೆ ಬಂದು ಅವರಿಂದ ಮಂತ್ರೋಪದೇಶಹೊಂದಲು ಅವನ ದೇಹದಿಂದ ಕೋಟಿವಾಯಸಗಳು ಚೀರಿ ಹಾರಿದವು. ಮಂತ್ರದ ಮಹಿಮೆಯಿಂದ ದಾಶಾರ್ಹನು ಪರಿಶುದ್ಧನಾಗಿ ಆ ಮಂತ್ರದಿಂದಲೇ ಶಿವನನ್ನು ಒಲಿಸಿ ಕೈಲಾಸಕ್ಕೆ ತೆರಳಿದನು.

ಚೊಕ್ಕಳದ ಮಾರಯ್ಯನು ಶಿವಮಂತ್ರಜಪಕಾಲದೊಳಗನ್ಯನುಡಿಯನಾಡದ ವ್ರತವನ್ನು ಕೈಕೊಂಡು ಮುಪ್ಪಿನಲ್ಲಿ ಒಂದುದಿನ ತಪ್ಪೊಂದನ್ನು ನುಡಿದು ವ್ರತಭಂಗವಾಯ್ತೆಂದು ಅಸುವನ್ನು ಬಿಡುತ್ತಿರಲು ಪರಮಾತ್ಮನು ಮೆಚ್ಚಿ ಅವನನ್ನು ಕೈಲಾಸಕ್ಕೊಯ್ದನು.

ಮಂತ್ರೋಪದೇಶದಿಂದ ತಿರುಬೆಟ್ಟನು ಕಲ್ಲುಬಸವನಿಗೆ ಎಳೆಹುಲ್ಲನ್ನು ಮೇಯಿಸಲು ಪರವಾದಿಗಳೆಲ್ಲರೂ ಆತನ ಪದಕ್ಕೆರಗಿದರು.

ಸೊಡ್ಡಳ ಬಾಚರಸನು ಲೆಕ್ಕದೋಲೆಯಲ್ಲಿ ಓಂ ನಮಃ ಶಿವಾಯ ಎಂಬ ಮಂತ್ರವನ್ನೇ ಬರೆದಿದ್ದನು. ಕೊಂಡೆಯರು ಅದನ್ನು ಭೂಪತಿಗರುಹಲು ಆತನು ಬಾಚರಸನನ್ನು ಕರೆಸಿ, ಲೆಕ್ಕವನ್ನೊಪ್ಪಿಸಬೇಕೆಂದು ಅಪ್ಪಣೆ ಕೊಟ್ಟನು. ಬಾಚರಸನು ಮಂತ್ರದ ಮಹಿಮೆಯಿಂದ ಎಲ್ಲವನ್ನೂ ಸರಿಪಡಿಸಿಕೊಟ್ಟನು.

ಅಜಗಣ್ಣತಂದೆಗಳು ಶಿವಮಂತ್ರವನ್ನು ಗೌಪ್ಯವಾಗಿ ಧ್ಯಾನಿಸುವ ವ್ರತವನ್ನು ಕೈಕೊಂಡಿದ್ದರು. ಒಂದು ದಿನ ಮರೆತು ಕುಜನರು ಕೇಳುವಂತೆ ಆ ಮಂತ್ರವನ್ನು ಉಚ್ಚರಿಸಲು ಆತನ ಪ್ರಾಣವೇ ಹಾರಿಹೋಯಿತು.

ಸಾನಂದಗಣನಾಥನು ನಾರಕಿಗಳನ್ನು ಕಂಡು ಮರುಕದಿಂದ ಪಂಚಾಕ್ಷರಿಯ ಮಂತ್ರವನ್ನು ಉಚ್ಚರಿಸಲು ಅದನ್ನು ಕೇಳ್ದೊಡನೆ ಅವರೆಲ್ಲರು ಪರಿಶುದ್ಧರಾಗಿ ಶಿವಪುರಕ್ಕೆ ಸಾರ್ದರು.

ಪಂಚಾಕ್ಷರಿಯ ಮುರಘನೆಂಬ ಶರಣನು ತನ್ನ ಕೊಳಲಿನಲ್ಲಿ ಪಂಚಾಕ್ಷರವನ್ನು ನುಡಿಸಿ, ಪರಮಾತ್ಮನನ್ನು ಮೆಚ್ಚಿಸಿ ಶಿವನಲ್ಲಿ ಐಕ್ಯನಾದನು.

ಅರಸನ ಅಪ್ಪಣೆಯ ಮೇರೆಗೆ ಭಟರು ಶರಣಜೀವನೆಂಬ ಮಂತ್ರಿವರನ ಉತ್ತಮಾಂಗವನ್ನು ಹೊಡೆಯುತ್ತಿರಲು ಆ ಮಹಿಮನು ಪಂಚಾಕ್ಷರೀ ಮಂತ್ರವನ್ನು ಜಪಿಸಿದನು. ಕೂಡಲೆ ಕರವಾಳಸಂಕುಲವು ಅರಳಮಾಲೆಯಾಗಿ ಆತನ ಕೊರಳಲ್ಲಿ ಶೋಭಿಸಿತು. ಪರಮೇಶನು ಮೆಚ್ಚಿ ಆತನಿಗೆ ಪ್ರಮಥಪದವಿಯನ್ನಿತ್ತನು.

ಬಂಕಯ್ಯನ ಭಕ್ತಿಯನ್ನು ಪರೀಕ್ಷಿಸಲು ಜಂಗಮನು ಬಂದು ಮಧ್ಯಾಹ್ನದಲ್ಲಿ ಕ್ಷೀರವನ್ನು ಬೇಡಿದನು. ಆಗ ಬಂಕಯ್ಯನು ಕರುವಿನ ಮುಂದೆ ಬಂದು ಪಂಚಾಕ್ಷರಿಯನ್ನು ಜಪಿಸಲು ಅದು ಕೊಡ ಹಾಲು ಕೊಟ್ಟಿತು.

ರಾಜಶೇಖರನೃಪನ ತುರಗಖುರಹತಿಯಿಂದ ಮಗು ಶಂಕರನು ಮಡಿಯಲು ಮಾತೆ ತಿರುಕೊಳವಿನಾಚಿ ದುಃಖದಿಂದ ಬಂದು ರಾಜಸಭೆಯಲ್ಲಿ ಮೊರೆಯಿಡಲು ಸತ್ಯೇಂದ್ರಚೋಳನು ಶಿಶುದ್ರೋಹಗೈದ ಮಗನು ಪ್ರಾಣವನ್ನೀಯಬೇಕೆಂದು ಅಪ್ಪಣೆ ಕೊಟ್ಟನು. ರಾಜಶೇಖರನು ತಂದೆಯ ಅಪ್ಪಣೆಯಂತೆ ಪ್ರಾಣಕೊಡಲು, ಮಂತ್ರಿಲಕ್ಷನೂ ಪ್ರಾಣವನ್ನಿತ್ತನು. ಅದನ್ನು ಕಂಡು ತಾಯಿ, ಆಕೆಯನ್ನು ಕಂಡು ತಿರುಕೊಳವಿನಾಚಿ, ಇದನ್ನು ನೋಡಿ ಸತ್ಯೇಂದ್ರ ಮಿತವಚನರು ಪ್ರಾಣವನ್ನಿತ್ತರು. ಇದನ್ನೆಲ್ಲ ಕಂಡ ಸತ್ಯೇಂದ್ರನಂಗನೆ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತ ಖಡ್ಗದಿಂದ ಗೋಣುಕತ್ತರಿಸಿ ಬಿಸುಡಲು ಶಿವನು ಮೆಚ್ಚಿ ಎಂಟೂ ಜನರಿಗೂ ಪ್ರಾಣವನ್ನಿತ್ತು ಪುಷ್ಪಕದಿಂದ ಅವರನ್ನು ಕೈಲಾಸಕ್ಕೊಯ್ದನು.

ಹರಶರಣ ಸೀಮಂತಮಣಿಯೆನಿಸಿದ ಮಂತ್ರಜಾತಯ್ಯನು ಮಂತ್ರಾಪೇಕ್ಷೆಯಿಂದ ಡೊಂಬತಿಯ ಚರಣಸೇವೆ ಮಾಡಿ ಹನ್ನೆರಡು ವರುಷ ಗಾರ್ಧಭಗಳನ್ನು ಕಾಯ್ದು ಕೊನೆಗೆ ಮಂತ್ರದ ಬಲದಿಂದ ಸರ್ವರಿಗೂ ಮುಕ್ತಿಯನ್ನಿತ್ತು ತಾನೂ ಉರಿಗರ್ಪೂರದ ನ್ಯಾಯದಂತೆ ಮಂತ್ರದಲ್ಲಿ ಬಯಲಾದರು.

ಹೀಗೆ ಶಿವಮಂತ್ರವನ್ನು ನಂಬಿ, ಅನೇಕರು ಸಕಲ ಸಿದ್ಧಿಯನ್ನು ಪಡೆದರು. ಇನ್ನು ರುದ್ರಾಕ್ಷಿಯ ಮಹಿಮೆಯನ್ನು ಕೇಳಬೇಕೆಂದು ಮಹಲಿಂಗಮುನಿವರ್ಯನು ವಿವರಿಸತೊಡಗಿದನು.

ಶಿವನು ತ್ರಿಪುರಗಳನ್ನು ಸಂಹರಿಸುವ ಚಿಂತೆಯಿಂದ ಕಣ್ದೆರೆದು ನೋಡಲು ಆತನ ದೃಷ್ಟಿಯಿಂದ ಕಂಬನಿಯುದುರಿ ರುದ್ರಾಕ್ಷಿಯ ವೃಕ್ಷವಾಯಿತು. ಆ

ರುದ್ರಾಕ್ಷಿಮಣಿಯನ್ನು ಧರಿಸಿದರೆ, ಸ್ಮರಿಸಿದರೆ, ಸೋಂಕಿದರೆ ಕೋಟಿಜನ್ಮದ ಪಾಪ ಪಲ್ಲಟವಾಗಿ ಭೂದಾನ, ಗೋದಾನಗಳ ಫಲವನ್ನಿತ್ತು ಶಿವನು ಕೈಲಾಸಪದವಿಯ ನ್ನೀವನು. ಎಂತಹ ಹೀನಜೀವನನವನ್ನು ಜೀವಿಸುವವನೇ ಆಗಲಿ ಮಂಡೆಯ ಲ್ಲೊಂದು ರುದ್ರಾಕ್ಷಿಯನ್ನು ಧರಿಸಿದರೆ ದ್ವಿತಿಯಶಂಭುವೇ ಆಗುವನೆಂದು ಶ್ರುತಿ ವಾಕ್ಯವುಂಟು. ರುದ್ರಾಕ್ಷಿ ದೊರಿಯದಿದ್ದರೆ ಮಣ್ಣಿನಿಂದ ರುದ್ರಾಕ್ಷಿಯನ್ನು ಮಾಡಿ ಧರಿಸಿದರೆ ರುದ್ರಸ್ವರೂಪರೆನಿಸುವರು.

ವಾರಣಾಶಿಯಲ್ಲಿ ಸುಜ್ಞಾನಾಶ್ರಮರ ಪಾದಕಮಲಗಳನ್ನು ಸೇವಿಸುತ್ತ ಓರ್ವ ಶೂದ್ರನು ವಾಸಿಸುತ್ತಿದ್ದು ಕಾಲಾಂತರದಲ್ಲಿ ಮೃತನಾಗಿ ವೈವಸ್ವತನಧೀರಭಟನಾಗಿ ಜನಿಸಿ ಒಂದು ದಿನ ಸುಜ್ಞಾನಾಶ್ರಮರಲ್ಲಿಗೆ ಬಂದು ಒಡನೆ ಆ ಮುನಿಯ ಪದಕೆರ ಗಲು ಆ ಮಹಿವನು ನೀನಾರೆಂದು ಕೇಳ್ದನು. ಆತನು ಆ ಮಹಿಮುನಿಗೆ ತನ್ನ ಹಿಂದಣ ಸಂಬಂಧವನ್ನರುಹಿದನು. ನಾನು ಯಮನ ಕಿಂಕರನಾಗಿ ವ್ಯಾಸ ಕಾಶಿಯಲ್ಲಿರುತ್ತಿದ್ದ ಒರದು ದಿವಸ ಜೀವಹೋದ ಪಾತಕನನ್ನು ಕೊಂಡೊಯ್ಯುತ್ತಿ ದ್ದೆನು. ಅದನ್ನು ತಿಳಿದು ದೇವದೂತರು ಬಂದು ಆತನು ಪುಣ್ಯಾತ್ಮನೆಂದು ಹೇಳಿ ಬಿಡಿಸಿ ನಮ್ಮನ್ನು ಜಡಿದರು. ವ್ಯಾಸಕಾಶಿಯಲ್ಲಿ ಮೃತರಾದವರು ಯಾರಿದ್ದರೂ ಖರಜನ್ಮದಲ್ಲಿ ಸಂಜನಿಪರೆಂದು ನುಡಿಯಲು ಅವರ ಪುಣ್ಯವೇನೆಂದು ಬೆಸ ಗೊಳ್ಳಲು ಆತನಳಿದ ತಾಣದಲ್ಲಿ ರುದ್ರಾಕ್ಷಿ ಇಹುದೆಂದು ಹೇಳಿ ಆತನನ್ನು ಪರಮೇಶದೂತರು ಕರೆದೊಯ್ದರು. ಗಾಸಿಯಾಗಿ ನಾನು ಬಂದೆನು. ಎಂದನು. ಆ ಮುನಿಯು ಆತನು ಬಿದ್ದು ಪ್ರಾಣಬಿಟ್ಟ ತಾಣವನ್ನು ನೋಡಿ ಅದನ್ನು ಅಗಿಸಲು ಅಲ್ಲಿ ರುದ್ರಾಕ್ಷಿ ದೊರೆಯಿತು. ಆ ಮುನಿಯು ಆ ರುದ್ರಾಕ್ಷಿಯನ್ನು ಧಾರಣಮಾಡಿ ಕಾಶೀಕ್ಷೇತ್ರಕ್ಕೆ ಬಂದು ಸುಖದಿಂದಿರ್ದನು.

ನಂದಿಗ್ರಾಮದಲ್ಲಿ ಚಿತ್ತಜನ ಮಂತ್ರದೇವತೆಯಂತೆ ಮಹನಂದಿಯೆಂದೆಂಬ ವೇಶ್ಯಾಂಗನಾಮಣಿಯು ಮೆರೆದಿರ್ದಳು. ಕಂಠದಲ್ಲಿ ರುದ್ರಾಕ್ಷಿಗಳನ್ನು ಧಾರಣೆ ಮಾಡಿ ನಿಷ್ಠೆಯಿಂದ ನರ್ತನ ಮಾಡುತ್ತಿದ್ದಳು. ಆಕೆಯ ನಿಷ್ಠೆಯನ್ನು ಮೆರೆಯ ಬೇಕೆಂದು ಶಿವನು ವಿಟಜಂಗಮನ ಸುಂದರರೂಪದಿಂದ ಅಲ್ಲಿಗೆ ಬರಲು ಆತನ ಕೈಯಕಂಕಣವನ್ನು ನೋಡಿ ಅದನ್ನು ಕೊಡಬೇಕೆಂದು ಕೇಳಿದಳು. ಇದನ್ನು ಕೊಡುವೆನು ಎನಗೆ ಏಸುದಿನ ಒತ್ತಿಯಾದಪೆಯೆಂದು ಆಕೆಯನ್ನು ಕೇಳಿದನು. ಮಹನಂದಿಯು ಮೂರುದಿವಸ ಪತ್ನಿಯಾಗುವೆನೆಂದು ಹೇಳಿ ಆತನ ಒಪ್ಪಿಗೆ ಪಡೆದಳು. ಎಲೆ ಬಾಲೆ ಇದು ಎನ್ನ ಪ್ರಾಣಲಿಂಗವು. ಇದಕ್ಕೆ ಕುಂದುಕೊರತೆ ಗಳು ಒದವಿದರೆ ಪ್ರಾಣಬಿಡುವೆನು. ಜೋಕೆ, ಎಂದು ಹೇಳಿ, ಆ ಕಂಕಣವನ್ನು

ಕೊಟ್ಟನು. ಆಕೆಯು ಆ ಕಂಕಣವನ್ನು ನಾಟ್ಯಾಗಾರದ ಮಧ್ಯದಲ್ಲಿ ಜೋಕೆಯಿಂದಿರಿಸಲು ಒಮ್ಮೆಲೆ ಮಧ್ಯರಾತ್ರಿ ನಾಟ್ಯಾಗಾರಕ್ಕೆ ಬೆಂಕಿಹತ್ತಿ ಸುಟ್ಟುಹೋಯಿತು. ತನ್ನ ಕಂಕಣ ಸುಟ್ಟಿತೆಂದು ಜಂಗಮನು ಆ ಅಗ್ನಿಯಲ್ಲಿ ಹೊಕ್ಕು ಮಹನಂದಿಯ ಎದುರಿನಲ್ಲಿಯೇ ಬಯಲಾದನು. ಮಹನಂದಿಯು ತನ್ನ ವಚನವನ್ನು ಸ್ಮರಿಸಿ, ಸರ್ವಸ್ವವನ್ನೂ ದಾನಮಾಡಿ ಅಗ್ನಿಕುಂಡದಲ್ಲಿ ಬೀಳಲಿಕ್ಕೆ ಅನುವಾದಳು. ಪರಶಿವನು ಪ್ರತ್ಯಕ್ಷನಾಗಿ ಆಕೆಯ ಮನದಭೀಷ್ಟೆಯಂತೆ ಅವಳ ಬಂಧುಗಳನ್ನೂ ಜನರನ್ನೂ ಅವಳನ್ನೂ ಕೈಲಾಸಕ್ಕೆ ಕೊಂಡೊಯ್ದನು.

ಒಬ್ಬ ಬೇಡನು ಬೇಟೆಯಾಡುತ್ತ ಮೃಗಗಳನ್ನು ಕೊಂದು ತಿನ್ನುತ್ತ ಬರುತ್ತಿರಲು ಒಂದು ಮರದ ಬುಡದಲ್ಲಿ ರುದ್ರಾಕ್ಷಿಯು ಬಿದ್ದುದನ್ನು ಕಂಡು ಅದು ಬೋರಿಯ ಬೀಜವೆಂದು ಅದನ್ನು ತನ್ನ ನಾಯಿಯ ಕೊರಳಲ್ಲಿ ಕಟ್ಟಿದನು. ಹಂದಿಯು ಆ ನಾಯಿಯ ಮೇಲೆ ಬಿದ್ದು ಅದನ್ನು ಕೊಲ್ಲಲು ಬೇಡನು ಹಂದಿಯನ್ನು ಕೊಂದು ತಾನೂ ಮೃತನಾದನು. ಹೀಗೆ ಮೃತವಾದ ಮೂವರಿಗೂ ಮೋಕ್ಷ ಪ್ರಾಪ್ತವಾಯಿತು.

ಒಬ್ಬ ವ್ಯಾಪಾರಸ್ಥನು ಒಂದು ಕತ್ತೆಯ ಮೇಲೆ ರುದ್ರಾಕ್ಷಿಗಳನ್ನು ಹೇರಿಕೊಂಡು ಒಯ್ಯುತ್ತಿರುವಾಗ ಕಾಲುಜಾರಿ ಬಿದ್ದು ಕತ್ತೆ ಸತ್ತಿತು. ಆಗ ಶಿವದೂತರು ಬಂದು ಅದನ್ನು ಒಯ್ದು ಗಣಪದವಿಯಲ್ಲಿ ಇರಿಸಿದರು.

ಒಬ್ಬ ವ್ಯಭಿಚಾರಿಯು ಕೈಯಲ್ಲಿ ರುದ್ರಾಕ್ಷಿಯನ್ನು ಧರಿಸಿ ಜಾರನನ್ನು ಕೂಡಿರಲು ಆಕೆಯ ಪತಿಯು ಅವರೀರ್ವರನ್ನು ಕಡಿದನು. ಇಬ್ಬರೂ ಮೃತವಾಗಿ ಶಿವಪುರವನ್ನು ಸೇರಿ ಸಾಯುಜ್ಯಪದವಿಯನ್ನು ಪಡೆದರು.

ಕೇರಳಾಧೀಶನ ಪಟ್ಟದ ರಾಣಿಯು ರುದ್ರಾಕ್ಷಿಯ ಮಹಿಮೆಯನ್ನು ಕೇಳಿ ಅದನ್ನು ತನ್ನ ತೋಳಿನ ಚರ್ಮದ ಮರೆಯಲ್ಲಿ ಧಾರಣ ಮಾಡಿದ್ದಳು. ಏಕಾಂತದಲ್ಲಿ ಪತಿಗೆ ಆ ವಿಷಯ ಗೋಚರವಾಗಿ ಸತಿಯ ಕೈಗೆ ಏನೋ ಗ್ರಂಥಿಯಾಗಿದೆಯೆಂದು ವೈದ್ಯರಿಂದ ಔಷಧ ಕೊಡಿಸಿದನು. ಶಸ್ತ್ರಾಸ್ತ್ರಗಳು ಮುರಿದರೂ ಆ ಗ್ರಂಥಿ ಅಚ್ಚಳಿಯದೆ ಉಳಿಯಿತು. ಇಷ್ಟಾದಮೇಲೆ ಸತಿಯು ನಿಜಸಂಗತಿಯನ್ನರುಹಲು ತಾನೂ ಶಿವಭಕ್ತನಾಗಿ ರುದ್ರಾಕ್ಷಿಯನ್ನು ಧರಿಸಿದನು. ಸೌಂದರಗಣಾಧೀಶನು ಕೈಲಾಸಕ್ಕೆ ಹೋದ ಸುದ್ದಿಯನ್ನು ಕೇಳಿ ಕೇರಳಾಧಿಪನು ಆತನು ಮುನ್ನಿತ್ತ ಭಾಷೆಯನ್ನು ಮುರಿದನೆಂದು ಜಯಭೇರಿಯನ್ನು ಹೊಡೆಸಿದನು.

ಆ ನಾದವು ಶಿವಪುರಕ್ಕೆ ಮುತ್ತಿಗೆ ಹಾಕಿತು. ಎಲ್ಲರೂ ಅಚ್ಚರಿದಳೆದರು. ಇವನ ಧೈರ್ಯ ಯಾರಿಗೂ ಬರದೆಂದು ಶಿವನು ಅವನನ್ನು ಕೈಲಾಸಕ್ಕೆ ಕರೆದೊಯ್ದನು.

ಹೀಗೆ ಮಹಲಿಂಗಮುನಿವರ್ಯನು ರುದ್ರಾಕ್ಷಿಯ ಮಹಿಮೆಯನ್ನು ವಿವರಿಸಲು ಗೋವಿಂದರಾಜಕುಮಾರನು ಅದನ್ನು ಭಕ್ತಿಯಿಂದ ಲಾಲಿಸಿದನು.

**

# ಹದಿನೆಂಟನೆಯ ಸಂಧಿ

ಮಾಲೋಜಿರಾಜನಿಗೆ ಕೇದಾರಭಾವನೆಂಬ ಮಗನಿದ್ದನು. ಆತನು ಅತ್ಯಂತ ಪರಾಕ್ರಮಶಾಲಿಯಾದ ಕಾರಣ ರಾಣಿಯರು ದಾಯ್ಯಾದತನದ ಮತ್ಸರದಿಂದ ಅವನಿಗೆ ವಿಷಪ್ರಾಶನ ಮಾಡಿಸಿದರು. ರೋಗ ಹೆಚ್ಚಾಯಿತು; ಒಡಲಬಣ್ಣ ವಳಿಯಿತು. ಔಷದೋಪಚಾರಕ್ಕೆ ಗುಣವಾಗದಿರಲು ಎಂದಿನಂತೆ ಮಹಾರಾಜನು ಆತನನ್ನು ಮಹಲಿಂಗಮುನಿರ್ಯನಲ್ಲಿಗೆ ಕರೆತಂದು ಆತನ ಪದಕ್ಕೆರಗಿದನು. ದೈನ್ಯದಿಂದ ಪ್ರಾರ್ಥಿಸಿದ ಕೇದಾರಭಾವಾಖ್ಯನ ಭಕ್ತಿಯನ್ನರಿತು ಮುನಿನಾಥನು ಪಂಚಾಕ್ಷರಿಯನ್ನು ಜಪಿಸಿ, ಪಾದೋದಕಭಸಿತನಿರ್ಮಾಲ್ಯಗಳನ್ನು ಆತನಿಗೆ ಕೊಡಲು ಅವನು ಭಕ್ತಿಯಿಂದ ಅವನ್ನು ಸೇವಿಸಿದನು. ರೋಗವು ಮಾಯವಾಗಿ ದೇಹ ಕಾಂತಿಯುತವಾಯಿತು. ಕೇದಾರಭಾವನು ಮುನಿಪತಿಯನ್ನು ಸ್ತೋತ್ರ ಮಾಡಿ ಆತನ ಪಾದಕಮಲಗಳಿಗೆರಗಿ ಪ್ರಸಾದದ ಮಹಿಮೆಯನ್ನು ವಿವರಿಸಿ ತನನ್ನನ್ನು ಪಾಲಿಸಬೇಕೆಂದು ಪ್ರಾರ್ಥಿಸಿದನು. ಮುನಿಪತಿಯು ಆತನ ಪ್ರಾರ್ಥನೆಯನ್ನು ಮನ್ನಿಸಿ ಪ್ರಸಾದಡ ಮಹಿಮೆಯನ್ನು ವಿವರಿಸಿನು.

ಪ್ರಸಾದವು ಘನವಾದುದೆಂದು ಮನುಮುನಿಗಳು ಭುಂಜಿಸಿ ದೇವತ್ವವನ್ನು ಪಡೆದರು. ಶಿವನ ನಿರ್ಮಾಲ್ಯಗಳನ್ನು ಮಂಡೆಯಲ್ಲಿ ತಳೆದು ಮುರಹರ, ಬ್ರಹ್ಮ, ಸುರಪಾದಿಗಳು ಅವ್ಯಯದ ಪದವಿಯನ್ನು ಪಡೆದರು. ಶಿವನ ಪಾದದ ಜಲ ನಿರ್ಮಾಲ್ಯಗಳನ್ನು ತಳೆದು ಮಾರುತನು ಮೆಲ್ಲನೈತರುತಿರಲು ಫಣಿರಾಜನು ಅದನ್ನು ಸೇವಿಸಿ ಭೂಭಾರವನ್ನು ತಳೆವ ಶಕ್ತಿಯನ್ನು ಪಡೆದನು. ಶಿವನ ಕೊರಳಿಗೆ ಆಭರಣವಾದನು.

ದೂರ್ವಾಸನು ಶಿವನ ಪಾದಾಂಬುಪ್ರಸಾದಗಳನ್ನು ಸೇವಿಸಿದುದರಿಂದಲೇ ಆತನು ಸರ್ವ ಮುನಿಗಳಲ್ಲಿ ಸಂಪೂಜ್ಯನಾದನು. ಪರಮೇಷ್ಠಿಯು ಶಿವನ ಪ್ರಸಾದ ವನ್ನು ಸೇವಿಸಿದುದರಿಂದಲೇ ಸೃಷ್ಟಿಯನು ನಿರ್ಮಿಸುವ ಕಾರಣಿಕ ಪ್ರಭುವಾದನು. ಪ್ರಸಾದ, ಪಾದೋದಕಗಳನ್ನು ಸೇವಿಸಿದುದರಿಂದಲೇ ಸರಜಾಕ್ಷ ಪರಶುರಾಮಾದಿ ಗಳು ಕರ್ಮಮುಕ್ತರಾದರು.

ದೂರ್ವಾಸಮುನಿಯು ದ್ವಾರಕಾಕ್ಷೇತ್ರಕ್ಕೆ ಬರಲು ಆತನಿಗೆ ಪರಮಾನ್ನ ಪಾಯಸಗಳನ್ನು ಮಾಡಿಸಿ ಊಟಕ್ಕೆ ನೀಡಿದರು. ಅರ್ಧಉಂಡು ಉಳಿದ ಪ್ರಸಾದವನ್ನು ಅಚ್ಯುತನಿಗೀಯಲು ಆತನು ಅದನ್ನು ಸ್ವೀಕರಿಸಿ ವಜ್ರಕಾಯ ನಾದನು.

ಜಂಗಮದ ಶೇಷ ಮೀನಕ್ಕೆ ದೊರೆಯಲು, ಮೀನುಗಾರನು ಆ ಮೀನವನ್ನು ಹಿಡಿದು ಭುಂಜಿಸಲು ಆ ಮೀನಕ್ಕೂ, ಧೀವರನಿಗೂ ಶಿವಪದವಾಯಿತು.

ಲಿಂಗಕ್ಕೆ ಚರಪ್ರಸಾದವು ಸಲ್ಲದೆಂದೆನುತ ಒಬ್ಬನು ಅಂತರಂಗದಲ್ಲಿ ಸಂಶಯ ತೆಗೆದುಕೊಂಡು ಶೂಕರನಾಗಿ ಬಾಳುತ್ತಿರಲು, ಆ ಶೇಷ ದೊರೆಯಲು ಅದನ್ನು ಸೇವಿಸಿ ಪ್ರಜ್ವಲಿಸುವ ಕಾಯವನ್ನು ಪಡೆದನು. ಶೂಕರನಿಗೆ ರೋಗ ಬಂದಿತೆಂದು ಕುಡ ಕಾಸಿ ಬರೆ ಕೊಡಲು ಆ ಕುಡವು ಶುಭ್ರವಾಯಿತು. ಕಬ್ಬಿಣದ ಹಾರಿಗಳಿಂದ ಬರೆ ಕೊಡಲು ಅವೆಲ್ಲ ಸುವರ್ಣದ ರೂಪುದಳೆದವು. ಹೀಗೆ ಕಾಸುತ್ತಿರಲು ಆ ಶೂಕರನ ಪ್ರಾಣ ಹೋಗಲು ಅದರ ಮಾಂಸ, ನೆತ್ತರಗಳೆಲ್ಲ ಸುವರ್ಣವಾದುವು. ದೊರೆಯು ಆ ಸುವರ್ಣದಿಂದಲೇ ನಾಣ್ಯಗಳನ್ನು ಮಾಡಿ, ಆ ಕಿಟಿಯ ಮುದ್ರೆ ಯನ್ನೊತ್ತಿ ಅವಕ್ಕೆ ವರಾಹವೆಂಬ ಹೆಸರನ್ನಿತ್ತನು.

ಚಾಳುಕ್ಯಭೂವರನ ಮನೆಗೆ ಒಮ್ಮೆ ರೇವಣಸಿದ್ಧೇಶ್ವರನು ಬಂದು ಭಿಕ್ಷೆ ಬೇಡಲು, ಬಿಜ್ಜಳನು ಕುದುರೆಗೆ ಕುದಿಸುವ ಬೀಳಮಡ್ಡಿಯನ್ನು ನೀಡಿಸಲು ರೇವಣ ಸಿದ್ಧೇಶನು ಅದನ್ನು ಸೇವಿಸಿ, ಆ ಮನೆಯ ಕಂಭಕ್ಕೆ ಕೈಯೊರಿಸಲು ಅದೆಲ್ಲ ಉರಿ ಹತ್ತಿ ಸುಡತೊಡಗಿತು. ಅವರೆಲ್ಲ ಪ್ರಾರ್ಥಿಸಲು ಆ ಮಂದಿರವನ್ನು ಮೊದಲು ಇದ್ದಂತೆ ಮಾಡಿ ಪಡಿಯಕ್ಕಿ ತರಿಸಿ, ಊರವರಿಗೆಲ್ಲ ಉಣಬಡಿಸಿದನು.

ಚೋಳಕ್ಕನಿಗೆ ಬಂಧುಗಳು ಇನಿದಾದ ಹುಗ್ಗಿಯನ್ನು ತಂದೀಯಲು ಆಕೆಯು ರುಚಿ ನೋಡಿ, ಮೋಹದಿಂದ ಭೀಮನಾಥಗರ್ಪಿಸೆಂದು ತನ್ನ ಸಖಿಯ ಕೈಗಿತ್ತಳು. ಆಕೆ ದೇವಾಲಯಕ್ಕೆ ಬಂದು ಜನಸಂದಣಿಯನ್ನು ಕಂಡು ಹೆದರಿ ಹೊರಗೆ ಬಾಗಿಲಲ್ಲಿ ನಿಂತು ಧ್ವನಿಮಾಡಿ ಭೀಮೇಶನನ್ನು ಕರೆದಳು. ಆ ಭಕ್ತಿಗೆ ಮೆಚ್ಚಿ ಭೀಮೇಶನು ಬಂದು ಹುಗ್ಗಿಯನ್ನು ಭುಂಜಿಸಿ ಬಟ್ಟಲವನ್ನು ನುಂಗಿದನು. ಭೀಮೆಯು ಅಂಜಲು ದೇಗುಲದೊಳಗಿರುವ ಪಿಂಜರಿಯ ಬಟ್ಟಲವನ್ನು ತಂದು ಕೊಟ್ಟನು. ಪೂಜಾರಿಗಳು ಬೆಳಗಿನ ಜಾವದಲ್ಲಿ ಎದ್ದು ನೋಡಲು ತಮ್ಮ ಬಟ್ಟಲು ಇಲ್ಲದಾಗಿದ್ದಿತು. ಅತ್ತಿತ್ತ ಹುಡುಕುತ್ತಿರಲು ಚೋಳಕ್ಕನ ಮನೆಯಲ್ಲಿ ಅದು

ದೊರೆಯಿತು. ಭೀಮೆಯು ನಿಜಸಂಗತಿಯನ್ನರುಹಿದರೂ ಕೇಳದೆ ಆಕೆಯನ್ನು ತುಡುಗುಣಿಯೆಂದು ಕರೆದು, ಇದಕ್ಕೆ ಭೀಮೇಶನ ಸಾಕ್ಷಿ ಹೇಳಿಸೆಂದು ಆಗ್ರಹ ಮಾಡುವರು. ಆಕೆ ಬಂದು ಪ್ರಾರ್ಥಿಸಲು ಭೀಮೇಶನು ನುಂಗಿರ್ದ ಬಟ್ಟಲವನ್ನು ಹೊರತೆಗೆದುಕೊಟ್ಟು ನಾನಿತ್ತಿಹುದು ಸತ್ಯವೆಂದು ಕೂಗಿ ಹೇಳಿದನು; ಮತ್ತು ಅವರೀರ್ವರನ್ನು ಕೈಲಾಸಕ್ಕೆ ಕರೆದೊಯ್ದನು.

ಪಿಟ್ಟವ್ವೆಯ ದೋಸೆಗಾಗಿ ಶಿವನು ಬಿಟ್ಟಿಗೆಯ್ದನೆಂದು ಕೇಳಿ, ಕರಿಕಾಲ ಚೋಳನು ವಿಮಲ ಭಕ್ಷ್ಯಗಳನ್ನು ಮಾಡಿ ಶಿವನಿಗೆ ದಿನವೂ ಉಣಬಡಿಸತೊಡಗಿದನು. ಒಂದು ದಿನ ದೊರೆ ತನ್ನ ನರೆಗೂದಲನ್ನು ಕಂಡು, ನಾನು ಸತ್ತಮೇಲೆ ಶಿವನಿಗೆ ಉಣಿಸುವರಾರು ? ಎಂದು ಚಿಂತಿಸತೊಡಗಿದನು. ಇವನಿಗೆ ಗರ್ವ ಬಂದಿತೆಂದು ಶಿವನು ಆ ದಿನ ಮಾದಾರ ಚೆನ್ನಯ್ಯನ ಮನೆಗೆ ಹೋಗಿ ಅಲ್ಲಿ ಅಂಬಲಿಯನ್ನುಂಡು ಬಂದನು. ಎಂದಿನಂತೆ ಭೂರಮಣನು ನೈವೇದ್ಯ ಮಾಡಲು ಶಿವನು ಉಣ್ಣದಾಗುವನು. ಏಕೆನಲು ಚೆನ್ನನಂಬಲಿಯ ರುಚಿಯನ್ನು ವಿವರಿಸಿದನು. ಆಗ ದೊರೆಯು ಚೆನ್ನಯ್ಯನನ್ನು ಕಾಣಬೇಕೆಂದು ಸಂಭ್ರಮದಿಂದ ಬರಲು ತನಗೆ ಶಿಕ್ಷೆಗೊಡಲು ಬಂದನೆಂದು ಆತನು ಅಂಜಿದನು. ಕುಂಭಿನೀಶನು ಬಂದು ನಮಸ್ಕರಿಸಲು ಕೀಳು ಕುಲದವರಿಗೆ ಹೀಗೆ ನಮಿಸಬಹುದೇ ಎಂದು ಚೆನ್ನಯ್ಯನು ಕೇಳಿದನು. ಆತನನ್ನು ಆನೆಯ ಮೇಲೆ ಕುಳ್ಳಿರಿಸಿ ಅರಸನು ಮೆರೆಸಿದನು. ಶಿವನು ಅವರೀರ್ವರನ್ನು ಕೈಲಾಸಕ್ಕೆ ಕರೆದೊಯ್ದನು.

ಬಿಬ್ಬಿ ಬಾಚರಸನು ಗೊಬ್ಬುರದ ಮಧ್ಯದಲ್ಲಿ ಇರುತ್ತಿದ್ದು ಭಕ್ತರು ಗಣಾರಾಧನೆಯನ್ನು ಮಾಡಿಸಿದಲ್ಲಿ ಹೋಗಿ ಶಿವನ ಪ್ರಸಾದವನ್ನು ತೆಗೆದುಕೊಂಡು ಬಂಡಿಯಲ್ಲಿ ತುಂಬಿ ತಂದು ಸಂಭ್ರಮದಿಂದ ಸೇವಿಸುತ್ತಿದ್ದನು. ಆ ಊರ ಬ್ರಾಹ್ಮಣರು ಇವನ ಹೇಸಿಗೆಲಸವನ್ನು ಬಿಡಿಸಬೇಕೆಂದು ಬಂದು ಆತನ ಬಂಡಿಯನ್ನು ತಡೆದು ನಿಲ್ಲಿಸುವರು. ಒಂದಣುವಿನಷ್ಟು ಪ್ರಸಾದವನ್ನು ಬಾಚರಸನು ತೆಗೆದು ಆ ಪುರದತ್ತ ಸೂಸಲು ಊರಿಗೆಊರೇ ಅಗ್ನಿಗೆ ಆಹುತಿಯಾಗತೊಡಗಿತು. ಅಲ್ಲಿಯ ಬ್ರಾಹ್ಮಣರೆಲ್ಲ ಆತನ ಕಾಲ್ಗೆರಗಲು ಮುನ್ನಿನಂತೆ ಪುರವನ್ನು ಸೃಜಿಸಿದನು. ಬಾಚರಸನ ಭಕ್ತಿಗೆ ಮೆಚ್ಚಿ ಶಿವನು ಆತನನ್ನು ಕೈಲಾಸಕ್ಕೆ ಕರೆದೊಯ್ದನು.

ಬಿಜ್ಜಳಭೂಪನು ವೈಹಾಳಿಗೆ ಹೋಗಿ, ಬಸವರಸನನ್ನೊಡಗೊಂಡು ಪಟ್ಟಣದಲ್ಲಿ ಬರುತ್ತಿರಲು ಶಿವಭಕ್ತನೋರ್ವನು ತನ್ನ ಮಗನಿಗೆ ಬಸವನಾಮವನ್ನಿಟ್ಟಿದ್ದನು. ಆ ಕುಮಾರನು ಬಸವರಸನನ್ನು ಪ್ರಸಾದಸೇವನೆಗೆ ಕರೆದನು. ಆತನು

ಅಂದಳವನಿಳಿದು ಬಂದು ಪ್ರಸಾದ ಸೇವಿಸಿದನು. ಮುಂದೆ ದಾರಿಯಲ್ಲಿ ವಡೆ ಮಾಡುತ್ತಿರಲು ಬಿಜ್ಜಳನು ಬಾಲೆಯದ ಮೊನೆಯಿಂದ ಚುಚ್ಚಿ ಪ್ರಸಾದವನ್ನು ತೆಗೆದುಕೋ ಎಂದು ಪರಿಹಾಸ್ಯದಿಂದ ನುಡಿದನು. ಬಸವಣ್ಣನು ಅದನ್ನು ಸಂತೋಷ ದಿಂದ ಸ್ವೀಕರಿಸಿದನು. ಅರಸನ ಇಂಗಿತವನ್ನರಿತು ಆತನಿಗೆ ಶೇಷ, ಪ್ರಸಾದಗಳ ಅಂತರವನ್ನು ಪವಾಡದಿಂದ ತೋರಿಸಿದನು.

ಬಿಜ್ಜಳನು ಕಪಟತನದಿಂದ ನಾಗಮ್ಮನನ್ನು ಒಳಗಿರಿಸಿ ಇಲ್ಲಿಯ ಪ್ರಸಾದ ಸೇವಿಸೆನಲು ಬಸವರಸನು ಕೂಸಾಗಿ ಆಕೆಯ ಮೊಲೆಹಾಲ ಕುಡಿದನು.

ಭೂಪತಿಯ ಅನುಚರರು ಬಸವಣ್ಣನವರನ್ನು ಕರೆದೊಯ್ಯುತ್ತಿರಲು ಕಕ್ಕಯ್ಯ ನವರು ಪ್ರಸಾದ ಸೇವಿಸಿ ಹೋಗಬೇಕೆಂದರು. ಈಗ ಬರುವೆನೆಂದು ಹೇಳಿ ಹೋಗಿ ಮರಳಿ ಬರುವಷ್ಟರಲ್ಲಿ ಕಕ್ಕಯ್ಯನವರ ಮನೆಯ ಬಾಗಿಲು ಹಾಕಿದ್ದಿತು. ಬಸವಣ್ಣನವರು ಹನ್ನೆರಡು ವರುಷ ಅಲ್ಲಿ ದಾರಿಕಾಯುತ್ತ ಕುಳಿತಿರಲು ಒಂದು ಇರುವೆಯು ಕೊನೆಯ ಪ್ರಸಾದವನ್ನು ತೆಗೆದುಕೊಂಡು ಬರುತ್ತಿದ್ದಿತು. ಅದಕೆ ಸಕ್ಕರೆ ಹಾಕಿ, ಆ ಪ್ರಸಾದವನ್ನು ಮನೆಗೆ ತಂದಿಟ್ಟು, ಶಿವಪೂಜೆಗೆ ಕುಳಿತಿರಲು ಅಕ್ಕನಾಗಮ್ಮನು ಅದನ್ನು ಕಂಡು ಸೇವಿಸಿದಳು. ಆ ಭಕ್ತಿಶೇಷದಿಂದಲೇ ಚೆನ್ನ ಬಸವಣ್ಣನವರ ಜನನವಾಯಿತು.

ಹೀಗೆ ಮುನಿವರ್ಯನು ಪಾದೋದಕ, ಪ್ರಸಾದ, ನಿರ್ಮಾಲ್ಯಗಳ ಮಹಿಮೆ ಯನ್ನು ವಿವರಿಸಲು ರಾಜಕುಮಾರನು ಕೇಳಿ ಭಯಭಕ್ತಿಯಿಂದ ಆತನನ್ನು ಕೀರ್ತಿಸಿದನು; ಮತ್ತು ಆತನಿಗೆ ನಮಸ್ಕರಿಸಿ ಮನೆಗೆ ತೆರಳಿದನು.

**

*

# ಹತ್ತೊಂಬತ್ತನೆಯ ಸಂಧಿ

ಮಾಲೋಜಿಯ ಮಗನಾದ ಗೋವಿಂದನ ಸುತ ನಾರಾಯಣನಿಗೆ ಬಾಲಗ್ರಹ ಬಂದಿತು. ಎಲ್ಲರೂ ಮರುಗುತ್ತಿರಲು ವೈದ್ಯಶಕ್ತಿಮೀರೆ ಭೂಪತಿಯು ಶಿಶುವನ್ನು ತಂದು ಮಹಲಿಂಗದೇವನಡಿದಾವರೆಯಲ್ಲಿ ಹಾಕಿ, ಸಂರಕ್ಷಿಸಬೇಕೆಂದು ಪ್ರಾರ್ಥಿಸಿದನು. ಅಷ್ಟರಲ್ಲಿಯೇ ಕೂಸಿನ ಪ್ರಾಣ ಹಾರಿಹೋಯಿತು. ರಾಣಿಯರೆಲ್ಲರೂ ಶೋಕಮಾಡತೊಡಗಲು ಮಹಲಿಂಗಮುನಿರ್ಯನು ಅವರನ್ನೆಲ್ಲ ಸಂತೈಸಿ, ಪಂಚಾಕ್ಷರಿಯ ಮಂತ್ರವನ್ನು ಜಪಿಸಿ ಭಸ್ಮವನ್ನು ಶಿಶು ಚೇತರಿಸುತ್ತ ಮೇಲಕ್ಕೆದ್ದನು. ಎಲ್ಲರಿಗೂ ಆಶ್ಚರ್ಯವಾಯಿತು; ಸಂತೋಷವೆನಿಸಿತು.

ಪೂರ್ವದಲ್ಲಿ ವಜ್ರಬಾಹುಕನೆಂಬ ಅರಸನ ಪಟ್ಟದರಸಿಯು ಗರ್ಭವಾಂತಿರಲು ಆಕೆಯ ಸವತಿಯರು ಮಾತ್ಸರ್ಯದಿಂದ ಆಕೆಗೆ ವಿಷಪ್ರಾಶನ ಮಾಡಿಸಿದರು. ವಿಷವು ದೇಹವನ್ನೆಲ್ಲ ವ್ಯಾಪಿಸಿ ನವಮಾಸದ ಗರ್ಭಿಣಿಯು ನರಳುತ್ತ ಹೊರಳುತ್ತ ವಿಷಜ್ವಾಲೆಯಂತಹ ಪಿಂಡವನ್ನು ಹೆತ್ತಳು. ವಜ್ರಬಾಹು ಸುಪ್ರಸಿದ್ಧರಾದ ವೈದ್ಯರನ್ನು ಕರೆಸಿ ಔಷಧೋಪಚಾರ ಮಾಡಿದರೆ ಏನೂ ಗುಣವಾಗದೆ ಅಂಗದಲ್ಲಿ ಹುಣ್ಣೊಡೆದು ದುರ್ಗಂಧ ನಾರಹತ್ತಿತು. ಅರಸನು ಅವನನ್ನು ನೋಡಿ ಬೇಸತ್ತು ಹೇಸಿ ಘೋರಾರಣ್ಯದಲ್ಲಿರಿಸಿದನು. ಮಗುವನ್ನು ಸಲಹುತ್ತ ತಾಯಿ ಕಂಬನಿಗರೆವುತ್ತ ಹುಲಿಕರಡಿಗಳಿಂದ ತುಂಬಿದ ಅರಣ್ಯದಲ್ಲಿರುತ್ತಿರಲು ಪದ್ಮಕರನೆಂಬ ವೈಶ್ಯನು ಕಂಡು ಕನಿಕರಬಟ್ಟು ಅವರನ್ನು ಮನೆಗೆ ಕರೆದೊಯ್ದು ಸಲಹುತ್ತಿರುವಾಗ ಬಾಲಕನು ಮೃತವಾದನು. ತಾಯಿ ಹಲುಬುತ್ತಿರಲು ವೃಷಭೇಶ್ವರನು ಅಲ್ಲಿಗೈತಂದು ಪಂಚಾಕ್ಷರಿಯನ್ನು ಜಪಿಸಿ ಭಸ್ಮವನು ಪೂಸಲು ಮಗು ಮೇಲಕ್ಕೆದ್ದನು. ರಾಜಪತ್ನಿಯ ದೇಹದ ಮೇಲೆಯೂ ಶ್ರೀ ಭಸ್ಮವನ್ನು ಧಾರಣ ಮಾಡಲು ಅವರೀರ್ವರ ರೋಗ ಹೋಗಿ ದೇಹಗಳು ಥಳಥಳಿಸತೊಡಗಿದವು. ಇಂತಹ ಕಥೆಯನ್ನು ಕೇಳ್ದು ಬಲ್ಲವರಾಗಿದ್ದೆವು. ಇಂದು ಪ್ರತ್ಯಕ್ಷ ಅದನ್ನು ಮಹಲಿಂಗಮುನಿರ್ಯನ ಮಹಿಮೆಯಿಂದ ಕಣ್ಣಾರೆ ಕಂಡೆವು. ಎಂದು ಜನರು ಆತನನ್ನು ಕೊಂಡಾಡಿದರು.

**

# ಇಪ್ಪತ್ತನೆಯ ಸಂಧಿ

ಮಾಲೋಜಿಭೂಪಾಲನು ಮಹಲಿಂಗಮುನಿವರ್ಯನ ಪಾದೋದಕವನ್ನು ಸೇವಿಸುವ ನೇಮವನ್ನು ಹಿಡಿದಿದ್ದನು. ಒಂದು ದಿನ ಇದ್ದಕ್ಕಿದ್ದಂತೆ ಆ ಪಾದೋದಕ ಕಾಣದಾಗುವದು. ಆಗ ಅರಸನು ಹೇಮಮಯ ಪಾತ್ರೆಕೊಟ್ಟು ಒಬ್ಬ ಚರನನ್ನು ಮುನಿವರ್ಯನಲ್ಲಿಗೆ ಪಾದೋದಕ ತರಲು ಕಳುಹಿದನು. ಆ ಮಹಿಮನು ನಸು ನಕ್ಕು ಬರಿ ನೀರನ್ನು ಕೊಟ್ಟು ಕಳುಹಲು ಅವನಿಗೆ ಅದು ಪಾದೋದಕವಲ್ಲವೆಂದು ಗೊತ್ತಾಗಿ ತಾನೇ ಬಂದು ಮುನಿವರನ ಪಾದಕಮಲಗಳಿಗೆರಗಿ ಕ್ಷಮೆ ಕೇಳಿ ಕೃಪೆ ಯಾಂತನು.

ಮತ್ತೊಂದು ದಿನ ಮಹಾರಾಜನೇರುತ್ತಿದ್ದ ಸ್ವರ್ಗಗಾಮಿನಿಯೆಂಬ ಕುದು ರೆಯ ಸಾಯಲು, ಅರಸನು ಶೋಕವಮಾಡುತ್ತಿರಲು, ಮಹಲಿಂಗಮುನಿರ್ಯನು ಆ ಕುದುರೆಗೆ ಪ್ರಾಣವನ್ನೀಯುವನು. ಆ ಕುದುರೆಯು ಉಚ್ಛಿಷ್ಟವನ್ನು ಮುಟ್ಟದಲೆ ಭಕ್ಷ್ಯಭೋಜಾದಿಗಳನ್ನೇ ಸೇವಿಸಿ, ಮಹಲಿಂಗಮುನಿವರನನ್ನು ಚಿತ್ತದಲ್ಲಿ ಧ್ಯಾನಿ ಸುತ್ತ ಹಯಶಿರೋಮಣಿಯಾಗಿ ಬಾಳಿತು.

ಹೀಗೆ ಮಹಲಿಂಗಮುನಿವರ್ಯನು ಭಕ್ತಾಳಿಯನ್ನು ಪಾಲಿಸುತ್ತ ಮೋದ ಪುರದಲ್ಲಿ ಸಂತೋಷದಿಂದಿದ್ದನು.

**

# ಇಪ್ಪತ್ತೊಂದನೆಯ ಸಂಧಿ

ಪತ್ರಿಪರಗಣೆಯ ದುರ್ಗಕ್ಕಾಗಿ ಯುದ್ಧ ನಡೆದಿದ್ದಿತು. ಒಂದು ದಿನ ಭೂಪತಿಯು ಶ್ರೀಮಂತರ ಆಜ್ಞೆಯ ಮೇರೆಗೆ ಮಹಲಿಂಗಮುನಿವರ್ಯನ ಆಶೀರ್ವಾದ ಪಡೆದು ಯುದ್ಧಕ್ಕೆ ಹೊರಟನು. ಹಿಂದೆ ಉಳಿದೆನೆಂದು ಆ ರಾಜತನುಜಾತ ಗೋವಿಂದಸುಕುಮಾರನು ಮಹಲಿಂಗಪದದರ್ಶನವನ್ನು ಮರೆತು ಹಾಗೆಯೇ ಹೊರಟನು. ಘನಘೋರವಾದ ಯುದ್ಧ ನಡೆಯಿತು. ತಂದೆ-ಮಕ್ಕಳಿಬ್ಬರೂ ಅತ್ಯಂತ ಪರಾಕ್ರಮದಿಂದ ಹೋರಾಡಿದರು. ಶತ್ರುಗಳು ಸಹ ಒಳ್ಳೆಯ ಬಲಿಷ್ಠರಾಗಿ ಹೋರಾಡುವ ಸಮಯದಲ್ಲಿ ಮಹಲಿಂಗಮುನಿವರ್ಯನು ಒಮ್ಮೆಲೆ ದುರ್ಗದ ಮೇಲೆ ಕಾಣಿಸಿಕೊಂಡನು. ಮಹಾಮುನಿಯನ್ನು ಕಂಡು ಮಾಲೋಜಿಗೆ ಭಕ್ತಿ ಇಮ್ಮಡಿಯಾಯಿತು. ಉತ್ಸಾಹ ಇತಿಮಿತಿಯಿಲ್ಲದಾಯಿತು. ಸಂತೋಷದಿಂದ ಮಗನಿಗೆ ಆ ಮಂಗಲಮೂರ್ತಿಯನ್ನು ತೋರಿಸಿದನು. ಆತನನ್ನು ಕಂಡೊಡನೆ ಗೋವಿಂದರಾಜನಿಗೆ ತಾನು ಆತನ ಪಾದದರ್ಶನ ಮಾಡಿಕೊಳ್ಳದೆ ಬಂದುದು ನೆನಪಾಗಿ ಪಶ್ಚಾತ್ತಾಪಪಟ್ಟನು. ಯುದ್ಧ ಮುಂದುವರಿಯಿತು. ಒಮ್ಮೆ ಅರಸನ ಕೈಯಿಂದ ಖಡ್ಗ ಜಾರಲು ಆ ಮುನಿಪತಿಯೇ ಬಂದು ಖಡ್ಗವನ್ನಿತ್ತನು. ಮಾಲೋಜಿ ಗೋವಿಂದರಾಜರಿಬ್ಬರೂ ಕೂಡಿ ವೈರಿಯನ್ನು ಹಣ್ಣುಮಾಡಿದರು. ಗೋವಿಂದ ರಾಜನು ಅತ್ಯಂತ ಪರಾಕ್ರಮದಿಂದ ಹೋರಾಡಿ ಕೋಟೆಯನ್ನು ಕೈವಶಮಾಡಿಕೊಂಡನು. ಆದರೆ, ರಣಭೂಮಿಯಲ್ಲಿಯೇ ಮಡಿದನು. ಕಾಯವಳಿದರೇನು, ಕೀರ್ತಿ ಉಳಿಯಿತೆಂದು ತಂದೆ ಮನೆಗೆ ಬಂದು ನಡೆದ ಸಂಗತಿಯನ್ನೆಲ್ಲ ಮುನಿಪತಿಗರುಹಿ ಎಲ್ಲ ಆತನ ಆಶೀರ್ವಾದವೆಂದು ನಮಸ್ಕರಿಸಿದನು.

**

# ಇಪ್ಪತ್ತೆರಡನೆಯ ಸಂಧಿ

ಮಹಲಿಂಗಮುನಿವರ್ಯನು ಯೋಗಿ ಗುರುಲಿಂಗಾರ್ಯರ ಪಾದವನ್ನು ನೆನೆದು ಇನ್ನು ಸಚ್ಚಿದಾನಂದಸ್ವರೂಪನಾದ ಪರಮಾತ್ಮನಲ್ಲಿ ಬೆರೆಯಬೇಕೆಂದು ಯೋಚಿಸಿದನು. ತಾನಿದ್ದ ಮೋದಪುರದ ಛಾತ್ರದಲ್ಲಿ ಅಮೃತಲಿಂಗವನ್ನು ಸ್ಥಾಪಿಸಲು, ಮಾಲೋಜಿಯೂ ಸಕಲ ಸದ್ಭಕ್ತರೂ ಆ ಲಿಂಗವನ್ನು ಭಕ್ತಿಯಿಂದ ಪೂಜಿಸತೊಡಗಿದರು. ಇನ್ನು ಚೆನ್ನಗಿರಿಗೆ ದಯಮಾಡಿಸಬೇಕೆಂಬ ವಿಚಾರವನ್ನು ತೆಗೆಯಲು ಮಾಲೋಜಿ ಮೊದಲಾದ ಸದ್ಭಕ್ತರು ಚಿಂತಿಸತೊಡಗಿದರು. ಲಿಂಗವನ್ನು ಭಕ್ತಿಯಿಂದ ಪೂಜಿಸಬೇಕೆಂದು ಹೇಳಿ ಅವರನ್ನು ಸಮಾಧಾನ ಮಾಡಿದನು. ಅಷ್ಟರಲ್ಲಿ ಆನೆಕಾಲೆಂಬ ದೇಶಾಧಿಪತಿಯು ಬಂದು, ಮಾಲೋಜಿಭೂಪತಿಯನ್ನುದ್ಧರಿಸಿದಂತೆ ತನ್ನನ್ನೂ ಉದ್ಧರಿಸಬೇಕೆಂದು ಮಹಲಿಂಗವರ್ಯನನ್ನು ಪ್ರಾರ್ಥಿಸಿದನು. ಶಿವನಾಜ್ಞೆಯೆಂದು ಮುನಿವರ್ಯನು ಒಪ್ಪಿ, ಅಲ್ಲಿಗೆ ಬಿಜಯಂಗೈದು ಆ ಭೂಪತಿಯ ಭಕ್ತಿಯನ್ನು ಸ್ವೀಕರಿಸಿದನು. ಸಂಸ್ಥಾನಕ್ಕೆ ಬಂದ ಬ್ರಹ್ಮಹತ್ಯೆ ತಾನೇ ನೆಲೆಗೆಟ್ಟು ಹೋಯಿತು. ವಂಶಪಾರಂಪರೆಯಿಂದ ಹೊಂದಿದ ಮಹಾದ್ರೋಹ ಬಯಲಾಗಲು ಭೂಪತಿಯು ಶಿವಭಕ್ತನಾದನು. ಚೆನ್ನಗಿರಿ ಪಟ್ಟಣವನ್ನು ನಿರ್ಮಿಸಿದಂತೆ ತಾನೂ ಭೂಮಿಯನ್ನು ದಾನಮಾಡಿ, ಪಟ್ಟಣವನ್ನು ರಚಿಸಬೇಕೆಂದು ಮುನಿಪತಿಯನ್ನು ಪ್ರಾರ್ಥಿಸಿದನು. ಮುನಿಪತಿಯು ಅಲ್ಲಿಯೇ ಕೆಲವು ಕಾಲ ಉಳಿದನು. ಆ ಊರ ಶರಣಬಸವೇಶನೆಂಬವನು ಒಂದು ಸೋಮವಾರ ಮಹಲಿಂಗಜಂಗಮಗೆ ಆರೋಗಣೆಗೆ ಬಿನ್ನಹವಿತ್ತು ಮನೆಗೆ ಕರೆತಂದನು. ಆತನ ಅರ್ಧಾಂಗಿಯು ನೀರು ತರಲು ಹೋಗಿ ಕಾಲು ಜಾರಿ ಬಾವಿ ಬೀಳುವಾಗ ಮಹಲಿಂಗನೆಂದುಸುರಲು ಆತನು ಅಲ್ಲಿಗೆ ಹೋಗಿ ಅವಳ ಕೈಹಿಡಿದೆತ್ತಿ ಪ್ರಾಣ ಉಳಿಸಿದನು. ನಡೆದ ಸಂಗತಿಯನ್ನೆಲ್ಲ ಕೇಳಿ ಸರ್ವರೂ ಆಶ್ಚರ್ಯಪಟ್ಟರು; ಭಕ್ತಿಪೂರಿತರಾದರು. ಆ ಊರಲ್ಲಿ ರಾಮ-ಲಕ್ಷ್ಮಣ ಲಿಂಗಗಳು ಪೂಜಾರ್ಪಣೆಗಳಿಲ್ಲದಲೆ ಇರುತ್ತಿರುವುದನ್ನು ಕನಸಿನಲ್ಲಿ ಅರಿತು, ರಾಮಲಿಂಗವನ್ನು ಅದೇ ಊರಲ್ಲಿ ಮತ್ತು ಲಕ್ಷ್ಮೇಶಲಿಂಗವನ್ನು ಕಾಲಾರಿಕ್ಷೇತ್ರದಲ್ಲಿ ಸ್ಥಾಪಿಸಿ, ಪ್ರಭುಲಿಂಗವೆಂದು ಕರೆದನು. ಹೀಗೆ ಮಹಲಿಂಗಮುನಿವರ್ಯನು ಆ ಊರಿನ ಭಕ್ತಜನರನ್ನು ಉದ್ಧರಿಸಿದನು.

**

# ಇಪ್ಪತ್ತುಮೂರನೆಯ ಸಂಧಿ

ಮಹಲಿಂಗಮುನಿಪತಿಯು ಚೆನ್ನಗಿರಿಗೆ ಬಂದು ಭಕ್ತಜನರನ್ನುದ್ಧರಿಸುತ್ತ ಛಾತ್ರದಲ್ಲಿ ವಾಸವಾಗಿದ್ದನು. ಒಂದು ದಿನ ಇದ್ದಕ್ಕಿದ್ದಂತೆಯೇ ಮುನಿನಾಥನು ನಸುನಕ್ಕನು. ಏಕೆಂದು ಭಕ್ತರು ಪ್ರಾರ್ಥಿಸಲು, ಕಳ್ಳನೋರ್ವನು ಚೆನ್ನಗಿರಿಲಿಂಗ ಧರಿಸಿದ ಬಟ್ಟೆ-ಭೂಷಣಗಳನ್ನು ಕದ್ದೊಯ್ಯುತ್ತಿರುವನು. ಆತನನ್ನು ಕೊಲ್ಲದೆ ತರಬೇಕೆಂದು ಅಪ್ಪಣೆಕೊಡಿಸಿದನು. ಕಳ್ಳನು ಭಯಗ್ರಸ್ತನಾಗಿ ಬಂದು ಅಡಿ ಗೆರಲು ಆ ಲಿಂಗದ ವಸ್ತ್ರ-ಭೂಷಣಗಳನ್ನು ಆತನಿಗೆ ಮರಳಿಕೊಟ್ಟನು. ಒಲ್ಲೆನೆಂದು ಕಳ್ಳನು ಅಡಿಗೆರಗಲು, ಆತನನ್ನು ಸಂತೈಸಿ, ಮತ್ತೆ ಹೊಸ ವಸ್ತ್ರ-ಭೂಷಣಗಳನ್ನು ತರಿಸಿಕೊಟ್ಟನು. ಆತನು ಮುನಿಯ ಆಶೀರ್ವಾದ ಪಡೆದು ಮನೆಗೆ ಹೋದನು.

ಮಕ್ಕಳಿಲ್ಲದ ಅರುವತ್ತು ವರುಷದ ವೃದ್ಧೆ, ಮಹಲಿಂಗವರನನ್ನು ಕೊತರ್ು ವ್ರತವನಾಚರಿಸಿ ಒಂದು ವರ್ಷದಲ್ಲಿ ಮಗುವನ್ನು ಹೆತ್ತಳು.

ಸಿದ್ಧಾಯಿಯೆಂಬವಳು ಶ್ರದ್ಧೆಯಿಂದ ಮುನಿನಾಥನನ್ನು ಪೂಜಿಸುತ್ತಿದ್ದಳು. ಒಂದು ದಿನ ಇದ್ದಕ್ಕಿದ್ದಂತೆ ಆಕೆಯ ಕಣ್ಣಿಗೆ ಜಡೆ ಕಾಣದಾದವು. ಮಹಾಮುನಿಯೇ, ನಿಮ್ಮ ಪಿಂಗಳ ಜಟಾಪಟಲ ಕಾಣದಾಗಿದೆ. ಅದನ್ನು ಕಾಣುವ ನೇತ್ರವನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಲು, ಶಾಂಡಿಲ್ಯವೃಕ್ಷದಡಿಯಿಂದ ಜಡೆಯನ್ನು ತರಿಸಿಕೊಟ್ಟನು.[೧] ಭಕ್ತರೆಲ್ಲ ಇದನ್ನು ಕಂಡು ಆಶ್ಚರ್ಯಪಟ್ಟರು.

ಹೀಗಿರಲು ಒಂದುದಿನ ಕನಸಿನಲ್ಲಿ ಪರಮಾತ್ಮನ ದರ್ಶನವಾಗಿ ಮರ್ತ್ಯ ಲೋಕದ ಲೀಲೆಯನ್ನು ಮುಗಿಸಬೇಕೆಂದು ಆತನಿಂದ ಅಪ್ಪಣೆಪಡೆದನು. ನಿದ್ರೆ ತಿಳಿದೆದ್ದು ಪರಶಿವನ ಅಪ್ಪಣೆಯಂತೆ ಚೆನ್ನಗಿರಿಯಲ್ಲಿ ಯೋಗಮುದ್ರಾನಿದ್ರಿತ ನಾದನು. ಈ ರೀತಿಯಾಗಿ ಆತನ ಸುಚರಿತೆಯನ್ನು ಪರಶಿವನು ಗಿರಿಜೆಗರುಹಿದನು.

---

೧ ಈ ಜಡೆಯನ್ನೇ ಮುಂದೆ ಭಕ್ತರು ಪೂಜಿಸತೊಡಗಿದರು. ವರುವರುಷ ಈ ಜಡೆ ಬೆಳೆಯುತ್ತದೆ ಎಂಬ ಭಾವನೆ ಈಗ ಬೇರೂರಿದೆ. ಈ ಪುರಾಣದಲ್ಲಿ ಈ ಜಡೆಯ ಪ್ರಸ್ತಾಪ ವಿಶೇಷವಾಗಿ ಬಾರದಿದ್ದುದು ಸೋಜಿಗದ ಮಾತಾಗಿದೆ.

# ಇಪ್ಪತ್ತುನಾಲ್ಕನೆಯ ಸಂಧಿ

ಚೆನ್ನಗಿರಿಯ ಮಧ್ಯದಲ್ಲಿ ಮಹಲಿಂಗಮುನಿವರ್ಯನು ನಿಷ್ಕಾಮಿಯಾಗಿ, ತ್ರಿವಿಧ ಭ್ರಾಂತಿಯನ್ನಳಿದು, ಸಂಚಲನ ಸೀಮೆಯನ್ನು ಮೀರಿ, ಪರಬ್ರಹ್ಮದೊಳ್ ಸೇರಿ, ಘನವ್ಯೋಮಮಂಡಲದಂತೆ ನಿರ್ಮಾಯನಾಗಿ ನಿಶ್ಚಲದಿಂದ ಮೆರೆದಿರ್ದನು. ನಿಜಾನಂದ ತ್ರೈಲೋಕವಿಖ್ಯಾತನೇ ಜಯವಾಗಲಿ, ಜರಾಮರಣ ಸಂಹರಣ ಸರ್ವೇಶನೇ ಜಯವಾಗಲಿ. ಶರ್ಮದಸದಾಮುಹಿಮ ತ್ರಾಹಿಮಾಂ, ಸದ್ಭಕ್ತಜನಬಂಧು ತ್ರಾಹಿಮಾಂ. ಶಾಶ್ವತ ಮೂರ್ತಿಯೇ ಶರಣು. ಮಾಯಾಧ್ವಂಸನೇ ಶರಣು. ನಿಮ್ಮ ಅಸಮಕಾರುಣ್ಯದಿಂದ ಈ ಕಾವ್ಯವನ್ನೊರೆದೆನು. ಇದು ಜಗದಲ್ಲಿ ಪೂಜ್ಯವಾಗಿರುವಂತೆ ಕರುಣೆದೋರಿ ಪಾಲಿಸುವುದು. ಸೂರ್ಯ-ಚಂದ್ರ-ನಭಗಳಿರುವವರೆಗೆ ಈ ಕೃತಿಯು ಬಾಳಲಿ. ಮಹಲಿಂಗಜಂಗಮದ ಲೀಲೆಯನ್ನು ಕೋವಿದರು ಭಕ್ತಿಯಿಂದ ಆಲಿಸಬೇಕು. ರುದ್ರಾದಿರುದ್ರರಂಘ್ರಿಯನ್ನು ಭಜಿಸಿ, ಭೂರುದ್ರನಾದ ಮಹಲಿಂಗನ ಸುಲೀಲೆಯನ್ನು ಪೇಳ್ದೆನು. ಇದು ರಸಿಕರ ಕರ್ಣಾಭರಣವೆನಿಸಿ ರಂಜಿಸಲಿ. ಅಸಮಾಕ್ಷನವತಾರರೂ, ಸಮ್ಯಕ್‌ಜ್ಞಾನ ಸಂಪೂರ್ಣರೂ ಎನಿಸಿದ ವೃಷಭಯೋಗಾಚಾರ್ಯರ ಕಾರುಣ್ಯದಿಂದ ಈ ಮಹಲಿಂಗಲೀಲೆಯನ್ನು ರಚಿಸಿರುವೆನು. ಇದು ಸುಶ್ರಾವ್ಯವಾಗಿರ್ಪುದು. ಸತ್ಕವಿಜಾಲವು ಈ ಕಾವ್ಯವನ್ನು ಕಾರುಣ್ಯದಿಂದ ನೋಡಲಿ.

ಬಸವಾದಿ ಪ್ರಮಥರ ಪದಕಮಲ ಭೃಂಗಾಯಮಾನನಾದ ಬಸವಸುಕುಮಾರನು ನಿರ್ಮಿಸಿದ ಲೀಲೆಯು ಭೂತಳದಿ ಸಂಸೇವ್ಯಮಾಗಿರುವುದು. ರಸಿಕಾವತಂಸವೆಂದೆನಿಸಿ ಸದ್ಭಕ್ತಜನವಿಸರಕ್ಕೆ ಸಂತೋಷವ ನೆರೆಪುತ್ತ ಈ ಕಾವ್ಯ ಮೆರೆಯುವುದು. ನನ್ನ ಈ ಕಾವ್ಯ ಕಿರಿದಾದರೇನು, ಕಥಾನಾಯಕನ ಅವ್ಯಯ ಮಹಿಮೆಯಿಂದ ಇದು ಮೆರೆಯುವುದು. ಸಂಸ್ಕೃತ, ಕನ್ನಡ ಈ ಉಭಯ ಶಾಸ್ತ್ರಗಳಲ್ಲಿ ಗೀರ್ವಾಣಗುರುವನ್ನು ಧಿಕ್ಕರಿಪ ವಿರಕ್ತಕುಲತಿಲಕ ಶ್ರೀ ಚೆನ್ನವೀರೇಶನ ಕರುಣೆಯಿಂದ ಈ ಕಾವ್ಯ ಸಂಪೂರ್ಣವಾಯಿತು. ಸರ್ವಭಕ್ತರು ಇದನ್ನು ಪಾಲಿಸಲಿ; ಲಾಲಿಸಲಿ. ಬಾಣ, ಮಯೂರ, ಕಾಳಿದಾಸ, ಸೋಮನಾಥ, ಹರಿಹರ, ರಾಘವಾಂಕ, ಭೀಮಕವಿ, ಷಡಕ್ಷರದೇವ ಈ ಕವಿಗಳನ್ನು ಬಣ್ಣಿಸಿ ಈ ಕಾವ್ಯ ರಚಿ

ಸಿದೆನು. ಮಹಲಿಂಗಮುನಿಯು ನನ್ನ ಮನದಲ್ಲಿ ನಿಂದು ನುಡಿಸಿದಂತೆ ಇದನ್ನು ಒರೆದಿರುವುದು.

ಈ ಲೀಲೆಯನ್ನು ಕೇಳ್ದವರಿಗೆ ಭಕ್ತಿ-ಜ್ಞಾನ-ವೈರಾಗ್ಯಗಳು ಪ್ರಾಪ್ತವಾಗುವುವು.

ಪಂಚವಕ್ತ್ರಗಣೇಶನಿಂದ ಸಂಜನಿಸಿ ಪಂಚಪದಜಾತಿವರ್ಣಾಶ್ರಮದಿಂದ ಕಂಗೊಳಿಸುವ, ತೊಂಡಿಕಟ್ಟೆ ಗ್ರಾಮಾಧಿಪತಿಯೂ, ಶಿವಭಕ್ತನೂ ಆದ ರಾಮಲಿಂಗನ ವಂಶದಲಿ ಸಂಜನಿಸಿದ ಶಿವಬಸವೇಶನ ಮಗನಾದ ಬಸವಸುಕುಮಾರನು ನಿರ್ಮಿಸಿದ ಈ ಮಹಲಿಂಗಲೀಲೆಯು ಬಸವಾದಿ ಪ್ರಮಥರ ಕರುಣೆಯಿಂದ ವಸುಧೆಯಲ್ಲಿ ಸೇವ್ಯವಾಗಲಿ. ವರವರ್ಣಗಳ ಪರ್ಣ, ಷಟ್ಚರಣಗಳ ಕುಸುಮಮಂಜರಿ, ಮಹಲಿಂಗನಸಮಮಹಿಮೆಗಳೆಂಬ ಪರಿಪಕ್ವ ಫಲಗಳಿಂದೊಡಗೂಡಿದ ನನ್ನ ಕಾವ್ಯ ಕಲ್ಪವೃಕ್ಷವು, ಸದ್ಭಕ್ತರೆಂಬ ಶುಕ, ಪಿಕ, ಭ್ರಮರಗಳಿಗೆ ಸಂತೋಷವನ್ನುಂಟುಮಾಡುವುದು.

ಬಸವಸುಕುಮಾರವಿರಚಿತವಾದ ಈ ಮಹಲಿಂಗಲೀಲೆಯನ್ನು ಸಂತೋಷದಿಂದ ಓದುವವರಿಗೂ, ಕೇಳುವವರಿಗೂ, ಪಠಿಸುವವರಿಗೂ ಮದನಹರ ಮಹಲಿಂಗದೇವನು ಸಕಲ ಸಂಪದವನ್ನಿತ್ತು, ಕೊನೆಯಲ್ಲಿ ಮೋಕ್ಷವನ್ನು ದಯಪಾಲಿಸುವನು.

**

ಶ್ರೀಗುರುಬಸವಲಿಂಗಾಯ ನಮಃ

# ಮಹಲಿಂಗಲೀಲೆ

## ಮೊದಲನೆಯ ಸಂಧಿ

**ಸೂಚನೆ** : ಶ್ರೀ[ಪರಮ]ಶಂಕರನ ಬೆಸನದಿಂದೆಯ್ದಿ ಚರ
ರೂಪದಿಂ ಭೂತಳದಿ ಬಂದು ಸಂತೋಷದಿಂ
ತಾಪತ್ರಯಾಂಭೋಧಿಬಾಡಬಂ ಮಹಲಿಂಗ ಮೆರೆದನಗಣಿತ ಮಹಿಮೆಯಿಂ

ಶ್ರೀಗಿರಿಸುತಾಲಪನಪಂಕೇಜದಿನನಾಥ
ಯೋಗಿಜನಮಾನಸಾಲಯ ಗಣಪಗುಹತಾತ
ನಾಗದೈತ್ಯಮದಾಂಬುಧರಜಾಲಸಂಹರಣಝುಂಝಾನಿಲಂ ಶಂಕರಂ
ಆಗಮೋನ್ನತಮಹಿಮ ಮರುತಸಂಜಾತವರ
ರಾಗಸಂಪ್ರೀತ [ನುತಮದನ]ಗಿರಿಪುರುಹೂತ
ಭೋಗಿವರಸೂತ್ರಸಮರೂಪ ಚೆನವೀರೇಶ ಪಾಲಿಪುದು ತ್ರೈಲೋಕಮಂ ೧

ವ್ಯೋಮಗಂಗಾಜಟಾಧಾರನಂ ಶೂರನಂ
ಸಾಮಜಾಸುರಗರ್ವನಾಶನಂ ಈಶನಂ
ಭೀಮಸುಕುಮಾರಶರದಾತನಂ ಖ್ಯಾತನಂ ದುರಿತಾಳಿಘನವಾತನಂ
ರಾಮಕಂಧರಗಮನಕಾತನಂ ನಾಥನಂ
ಸೋಮ ಸನ್ನುತಸುಗುಣಹಾರನಂ ಧೀರನಂ
ಪ್ರೇಮದಿಂ ಒಣ್ಣಿಸುತೆ ಪಡೆವೆನಾ ಪರಮಾರ್ಥ ಮುಕ್ತಿಯನು ಸಂತಸದೊಳು ೨

ವಿನುತಗುಣಮಾತೆಯಂ ಲೋಕವಿಖ್ಯಾತೆಯಂ
[೧]ಜನಪ[ದಾಧಾ]ರೆಯಂ ಸುಗುಣಮಣಿಹಾರೆಯಂ
ವನಜಕರಪ್ರೀತೆಯಂ ದುರಿತಾಳಿಧೂತೆಯಂ ದೈತ್ಯಕುಲ[ವೈ]ನಾಶೆಯಂ
ವಿನುತಸುರಪಾಲೆಯಂ ಪರಮಮುನಿಲೋಲೆಯಂ
ಕನಕಮಯಗಾತ್ರೆಯಂ ವಿಬುಧನುತಿಪಾತ್ರೆಯಂ
ಘನತರದ ಭಕ್ತಿಯಿಂ ರಕ್ತಿಯಿಂ ಕೀರ್ತಿಸೆಂ ಶ್ರೀತುಹಿನಗಿರಿಜಾತೆಯಂ ೩

ಸಕಲಗಣನಾಯಕನ ಸಿದ್ಧಿಪ್ರದಾಯಕನ
ಅಕಲಂಕಧೀವರನ ಆಖುಪತಿವಾಹನನ
ಪ್ರಕಟಲಂಬೋದರನ ಮಧುರಮೋದಕಧರನ ಮಣಿಖಚಿತಕೋಟೀರನ
ಸುಕರವಿದ್ಯಾಧಿಪನ ಸುರಜಾಲನತಪದನ
ಅಖಿಲಗುಣಗಣಯುತನ ಪರಮಶಂಕರಸುತನ
ಭಕುತಿಯಿಂ ಬಣ್ಣಿಸುತೆ ಪಡೆವೆ ಪರಮಾರ್ಥಗಳ ಮುಕುತಿಯನು ಸಂತಸದೊಳು ೪

ತಾರಕಾಸುರಗರ್ವಹಾರನಂ ಶೂರನಂ
ಮಾರಹರಪರಮಸುಕುಮಾರನಂ ಧೀರನಂ
ವಾರಿಜಾಸನಮುಖ್ಯಸುರಜಾಲಪ್ರೀತನಂ ಲೋಕಾಳಿವಿಖ್ಯಾತನಂ
ಸಾರ ಕ್ರೌಂಚಾಚಲವಿದಾರನಂ ನೀರನಂ
ಭೂರಿ ಗುಣಗಣರತ್ನಹಾರನಂ ಸಾರನಂ
ಚಾರು ಶ್ರವಣಾನದೀಜಾತನಂ ಪೂತನಂ ಷಣ್ಮುಖನ ಕೀರ್ತಿಸುವೆನು ೫

---

೧ ಜಾನಪದದೂ (ಕ. ಚ.)

ಶರಣಜನದುರಿತಜಲದಃಳಿಝಂಝಾನಿಲನ
ಪರಸಮಯಮತ್ತೇಭಕುಂಭಕಂಠೀರವನ
ಪರಮಪ್ರಮಥಾಳಿಹರ್ಷಾಬ್ಧಿವರ್ಧನಸುಧಾಕರರೂಪನೆಂದೆನಿಸುವ
ಮರಣಹರ ಮಾಯಾವಿಲೋಪ ಧರ್ಮಾಕರನ
ಗುರುಲಿಂಗಜಂಗಮದ ಭಕ್ತಿಸಂಪತ್ಕರನ
ಶರಣ ವೃಷಭೇಶ್ವರನ ಪಾದಮಂ ಕೀರ್ತಿಸುತ ಪರಮಾರ್ಥಮಂ ಪಡೆವೆನು ೬

ಕಾಮಹರನಮಳಚಿದ್ರೂಪತತ್ತ್ವಾಲಾಪ
ರಾಮಣೀಯಕಸುಗುಣಭೂಷ ಪುಣ್ಯಾವೇಷ[1]
ಸೋಮಧರಶರಣಹರ್ಷಾಬ್ಧಿವರ್ಧನಭೇನ ಪರಮಪುಣ್ಯಪ್ರಕಾಶ
ಭೀಮದುರಿತಾಳಿಜೀಮೂತಝಂಝಾವಾತ
ರಾಮಷಟ್ಸ್ಥಲಲೋಲ ಪರಸಮಯಹರಶೀಲ
ಕಾಮಿತಾರ್ಥದ ಚೆನ್ನಬಸವೇಶನಡಿಗೆರಗಿ ನಿರ್ಮಿಸುವೆನೀ ಕಾವ್ಯಮಂ ೭

ದಕ್ಷಮದಗಜಕುಂಭಹರ್ಯಕ್ಷ ಮಾಧವ ಸು
ಪಕ್ಷ ಸುರಕುಲಶಿಕ್ಷ ಮುನಿಜನಾಳಿಸುರಕ್ಷ
ಅಕ್ಷಯಾರ್ಚಿತಭಕ್ತಮೋಕ್ಷದಾಯಕ ಪರಮ ಉಕ್ಷೇಶ ದಿವ್ಯಲಕ್ಷ
ಅಕ್ಷಿಸಂಜಾತ ಸುತರಕ್ಷ[2]ರಾಕ್ಷಸಶಿಕ್ಷ
ದಕ್ಷದುರಿತೌಘವರಕಕ್ಷ ಕಾಲಾನಲವಿ
ಪಕ್ಷ ದಾನವಶಿಕ್ಷ ಋಕ್ಷಪತಿ ದಿವ್ಯಾಂಗ ರಕ್ಷಿಪುದು ವೀರೇಶ್ವರ ೮

ನಿರುಪಮ ನಿರಾಲಂಬ ನಿಗಮಾಗಮಾತೀತ
ನಿರವಯ ನಿಜಾನಂದ ನಿತ್ಯ ಚಿತ್ಸುಖದಾತ
ನಿರುಪಾಧಿ ನಿರ್ಲಯ ನಿರಾಪೇಕ್ಷ ನಿರ್ಲಕ್ಷ ನಿಶ್ಶೂನ್ಯ ನಿರುಪಾಧಿಕ
ಅರಿವರ್ಗಗಿರಿಜಾಲಸಂಹಾರಪುರುಹೂತ
ದುರಿತೌಘಕಾನನಮರುನ್ಮಿತ್ರ ನಿಜಾರ್ತ
ಮರಣಹರ ಮಾಯಾವಿಧೂತ ಶ್ರೀ ಪ್ರಭುರಾಯ ಪಾಲಿಪುದು ಪರಮಾರ್ಥಮಂ ೯

---

೧ (ಶ?) ೨ (ಕ್ಷ?)

ಹರನ ಶ್ರೀಚರಣಮಂ ಸ್ಮರಿಸುತ್ತ ಹೃದಯದೊಳ್
ಸರಸಿಜಾಸನಮುಖ್ಯಸುರಕುಲಕೆ ಪ್ರಮುದಮಂ
ಕರೆವುತ್ತ ನಾಟಕದಲಂಕಾರ ಲೀಲೆಯಿಂದಭಿನಯಗಳಂ ಮುಟ್ಟುತ
ಸರಸ ನಾಂಟ್ಯದ ಬಗೆಯ ಬೀರುತಂ ಜಾರುತಂ
ತ್ವರಿತದಿಂ ಹಸ್ತಗಳ ತೋರುತಂ ಸಾರುತಂ
ಕರುಣಮಂ ನೆರೆಗರೆದು ನರ್ತಿಸುವ ಭೃಂಗೀಶ ಕೊಡು ನಮಗೆ ಪರಮಾರ್ಥಮಂ ೧೦

ಇಂದುಧಾರಿಗೆ ಪರಮಲಿಂಗವನು ಧರಿಸಿರ್ದ
ಚೇದದಿಂದೀಶಂಗೆ ಉಪದೇಶವಿತ್ತಿರ್ದ
ಮುಂದೆವಾಳದತನದಿ ಮನಸಿಜಾರಿಗೆ ಹಡಪ ಪೊರಿಸಿರ್ದ ಪರಮೇಶಗಂ
ಬಂಧುರದಿ ಕಲ್ಲಿನಿಂದಿಟ್ಟಿರ್ದ ಮಾಧವಗೆ
ಸಂದ ಬಿಟ್ಟಿಯ ಗಂಟು ಪೊರಿಸಿರ್ದ ಶ್ರೀಶರಣ
ವೃಂದಮಂ ಧ್ಯಾನಿಸುತ ಮಹಲಿಂಗಲೀಲೆಯಂ ನಿರ್ಮಿಸುವೆ ನಾನಿಳೆಯೊಳು ೧೧

ಹೇಮಗಿರಿಚಾಪನೋಳಕ್ಷಮುಮನಾಡಿದರ್
ಕಾಮಮದನಾಶನೋಳ್ಭೋಜನವ ಮಾಡಿದರ್
ವ್ಯೋಮಪಥಕೇಶನೋಳೇಕಾಂತವಚಿಸಿದರ್ ರಾಮಕಂಧರಭೂಷನೊಳ್
ಪ್ರೇಮದಿಂ ಬೆರೆದವರ್ ದುರಿತಕುಲನುಳಿದವರ್
ಸೋಮಧಾರಿಗೆ ನಿಜದಿ ಕಾಮಿನಿಯನಿತ್ತವರ್
ರಾಮಗಂಗಾಧರಗೆ ಕುತ್ತು[ಗಳನಿ]ತ್ತವರ್ ಪಾಲಿಸುಗೆ ನಿಃಶ್ರೇಯಮಂ ೧೨

ಹುರಿದ ಬೀಜವ ಬಿತ್ತಿ ಬೆಳೆದವಭೂಮಿಯೊಳ್
ಕುರುಳುಗಳನಾರಿಸುತ ದಿನಪತಿಯ ೧[ನಿಲಿ]ಸಿದರ್
ಕರುಣದಿಂ ಮೋಟಂಗೆ ಕರಗಳಂ ಕೊಟ್ಟವರ್ ಮಾರಾರಿಯಂ ಕೋಪದೋಳ್
ಪೊರಗೆನುತ ಡಂಗುರವ ಪೊಯ್ಸಿದರ್ ಭಕ್ತಿಯಿಂ
ಪರಮನಂ ಕಾವಲದೊಳಿಟ್ಟವರ್ ಯುಕ್ತಿಯಿಂ
ಪರಮ ಪ್ರಮಥರ ಪಾದಪಂಕೇರುಹಕ್ಕೆರಗಿ ನಿರ್ಮಿಸುವೆನೀ ಕಾವ್ಯಮಂ ೧೩

---

೧ ನೆಲ (ಕ. ಚ.)

ಶಿವಭಕ್ತಿಪ್ರಾಣನಂ ಹರಭಕ್ತಿತ್ರಾಣನಂ
ನವರಸವಿಜಾಣನಂ ಪರಮಕವಿ ಬಾಣನಂ
ಭವಜಲಧಿದೂರನಂ ಭ್ರಾಂತಿಹರಶೂರನಂ ಕವಿಚಂದ್ರಮಯ್ಯೂರನಂ
ಕವಿತಾಬ್ಧಿ ರಾಜನಂ[1] ವರಮಲಯರಾಜನಂ
ಭವಮಾರ್ಗನಾಶನಂ ಅಸಮಕವಿಕೇಶನಂ
ನವಸುಗುಣವಾಸನಂ ಕವಿಕಾಳಿದಾಸನಂ ಧ್ಯಾನಿಸುವೆ ನಾ ಭಕ್ತಿಯಿಂ ೧೪

ಪರಮಸುಖಧಾಮನಂ ಪಾಲ್ಕುರಿಕೆಸೋಮನಂ
ಶರಣಜನಪ್ರೇಮನಂ ಶಾಂತಿಯುತ ಭೀಮನಂ
ಹರಸ್ತೋತ್ರಧೂರ್ಯನಂ ಹರಿಹರಾಚಾರ್ಯನಂ ಶ್ರೀಪಂಡಿತಾರಾಧ್ಯನಂ
ದುರಿತಪಥವಾರ್ಯನಂ ವರಮಲ್ಲಣಾರ್ಯನಂ
ಶರಣಸುರಭೂಜನಂ ಪರಮಕವಿ ಭೋಜನಂ
ಹರಕಾವ್ಯಜೀವನಂ ಷಡ್ವರ್ಣದೇವನಂ ಭಜಿಸಿ ಕಜ್ಜವ ನೆಗಳ್ದಪೆಂ ೧೫

ಗುರುಕುಲಾಂಭೋಧಿವರ್ಧನಚಂದ್ರ ದುರಿತಾಳಿ
ಸರಸಿಜಾಕರಸಾಮಜೇಂದ್ರ ಸದ್ಧರ್ಮನುತ
ಶರಣಸಂತಾನಗುಣಸಾಂದ್ರ ಶಾಂತಿವಿಚಾರ ಕಾರುಣ್ಯರಸಪೂರಿತ
ಪರಮಪಾವನಶೀಲ ಪುಣ್ಯಮಾರ್ಗವಿಶಾಲ
ನಿರುತನಿತ್ಯಾನಂದಚರಿತ ಚಿದ್ರಸಭರಿತ
ವರಮೋದಪುರದ ವದ್ದಾನಿ ಮಡಿವಳತಂದೆ ಪಾಲಿಪುದು ಮತ್ಕೃತಿಯನು ೧೬

ಯಮನಿಯಮ ಮೊದಲಾದ ಯೋಗಾಂಗಸಂಪ್ರೀತ
ವಿಮಲಮಂತ್ರೋಚ್ಚರಿತ ಕಾಮಾದಿಷಡ್ವರ್ಗ
ಕಮಲಪಂಚಾಸ್ಯ ಕಲಿಮಲಜಾಲಕಾಂತಾರಹರಪರಮದಾವಾನಲ
ಸುಮನಾಳಿಸಂಸೇವ್ಯ ಜೀರಕಾಮೃತಭಾತ್ರ
ರಮಣ ಮಡಿವಳತಂದೆ ಮತ್ಕಾವ್ಯಸಹಿತದಿಂ
ಪ್ರಮುದದಿಂದೆಡೆವಿಡದೆ ಕರುಣಮಂ ಸೈಗರೆದು ಪಾಲಿಪುದು ಭೂತಳದೊಳು ೧೭

---

೧ ರಾಜೀವನಂ (ಕ)

ಇಂತು ಸತ್ಪ್ರಮಥಗಣನಾಯಕರ ಪಾದಗಳ
ನಂತರಂಗದಿ ಬಿಡದೆ ಭಕ್ತಿಪೂರ್ವಕ[1][ವಾಗಿ]
ಸಂತತಂ ಸ್ಮರಿಸುತ್ತೆ ಬಳಿಕ ಬ್ರಹ್ಮಾಂಡದೊಳ್ ಸಂಪೂಜ್ಯನೆಂದೆನಿಸುವ
ಕಂತುಮದಮರ್ದನ ಮಹಾಲಿಂಗ ಜಂಗಮದ
ನಂತ ಮಹಿಮೆಯ ಪೇಳಲರಿದೆನಗೆ ಬಲ್ಲನಿತು
ಸಂತಸದಿ ಪೇಳುವೆನು ಸಕಲ ಭಕ್ತೋತ್ತಮರು ಲಾಲಿಪುದು ಭೂತಳದೊಳು ೧೮

ಪರಮಕವಿಪಾದಪಂಕೇಜಷಟ್ಪದನೆನಿಪ
ಹರಭಕ್ತ ಬಸವಸುಕುಮಾರ ಲಾಲಿಸು ಬಳಿಕ
ಧರೆಯೊಳಗೆ ನಿನ್ನ ಸವಿತಾಪಿತಾಮಹರೆಲ್ಲ ಮಹಲಿಂಗಮುನಿಚಂದ್ರನ
ಕರುಣದಿಂ ಕರ್ನಾಟಶಾಸ್ತ್ರಕೋವಿದರೆನಿಸಿ
ಮೆರೆದರಿದೆವಿಡದೆ ವರ ಸುಕುಲಾಬ್ಧಿಚಂದ್ರ ನೀಂ
ಹರುಷದಿಂ ಮಹಲಿಂಗಲೀಲೆಯಂ ಪೇಳ್ದೆಮ್ಮ ಪಾಲಿಪುದು ಭೂತಳದೊಳು ೧೯

ಎಲೆ ಬಸವಸುಕುಮಾರ ಷೋಡಶಾಬ್ದದಿ ನಿನಗೆ
ಮಲನಾಶಚೆನ್ನವೀರೇಶ್ವರನ ಕರುಣದಿಂ
ಚೆಲುವ ಶಾಸ್ತ್ರಾಂಗನೆಯು ಬಂದು ಸತ್ಕೀರ್ತಿಯಂ ನೆರಪುತ್ತ ಸಂತಸದೊಳು
ಒಲಿದು ನಾನಾವಚನರಚನೆಗಳ ಕಗರೆವುತ್ತ
ತಿಳಿಸಿ ಕವಿತಾಂಗನೆಯು ಕೈಗಿತ್ತಳಂತಲ್ತೆ
ಬಳಿಕ ನಿಜ ಮುಗ್ಧಭಾವಕ್ಕಿರದೆ ಸಂತತಂ ಮೋಹಿಪ[2][ಳು] ಭಾವಿಸುವೊಡೆ ೨೦

ಎಂದೆನುತ ಭಕ್ತಜನ ಕೊಂಡಾಡುತಿರಲಾಗ
ಚೆಂದದಿಂ ನಿರ್ಮಿಸಿದೆ ಚೆನ್ನವೀರೇಶ್ವರನ
ಸಂದ ಚರಣಾಮೃತದ ಸೇವನೆಯ ಬಲದಿಂದೆ ಮಹಲಿಂಗಮುನಿಲೀಲೆಯಂ
ಸಂಧಿಬಂಧಾದಿ ಪದ ತಪ್ಪಿರಲು ನಾ ನಿಮ್ಮ
ಕಂದನೆಂದೆನುತ ಕಾರುಣ್ಯದಿಂ ಮಮಕರಿಸಿ
ಕುಂದುಹೊಂದದ ತೆರದಿ ತಿದ್ದುವದು ಕರ್ನಾಟಕವಿಜಾಲಪಂಚಾಸ್ಯರು ೨೧

---

೧ ದಿಂದ (ಕ. ಚ.) ೨ ಳೆ (ಕ. ಚ.)

ರಾಮದುರ್ಗಾಶ್ರಿತಸರಿತ್ಸಾನುಧಾಮವರ
ಪ್ರೇಮಿ ಸಂಗನಬಸವ ವೀರಮಾಹೇಶ್ವರಂ
ಕಾಮಹರಮಹಲಿಂಗನಸಮಪೌರಾಣಮಂ ಭಾಮಿನಿಯ ಪದ್ಯಂಗಳಿಂ
ಭೂಮಿಯೊಳು ಸುಶ್ರಾವ್ಯಮಪ್ಪಂತೆ ನಿರ್ಮಿಸಿದ
ರಾ ಮಹಿಮರನುಹಿಡಿದು ವಾರ್ಧಿಕಪದಗಳಭಿ
ರಾಮವೆತ್ತಿರೆ ಪೇಳ್ದೆನೀ ಲೀಲೆಯನು ಬಿಡದೆ ಲಾಲಿಪುದು ಶಿವಭಕ್ತರು ೨೨

ಮಾರುತೋಪದ್ರವದ ರೋಗವುದು ಬಿಡದೆನ್ನ
ಘೋರಿಸುತ್ತಿರೆ ಕಂಡು ಕಾರುಣ್ಯದೇಳ್ಗೆಯಿಂ
ಜೀರಕಾಮೃತಮಠಾಧೀಶ ಗುರುಕುಲಚಂದ್ರ ಶಿವರುದ್ರಮಾಹೇಶ್ವರಂ
ಮಾರಹರಮಹಲಿಂಗಲೀಲೆಯಂ ನಿರ್ಮಿಸು ನಿ
ವಾರಿಸುವದೆಂದೆನುತ ಸೂಚಿಸಲು ಭಕ್ತಿಯಿಂ
ಪ್ರಾರಂಭಿಸಿದೆನಿಂದು ಪರಮಭಕ್ತೋತ್ತಮರು ಲಾಲಿಪುದು ಸಂತಸದೊಳು ೨೩

ಜಾರಚೋರರ ಭಯದಿ ಚಂದ್ರ ನಿಜಕಿರಣಮಂ
ತೋರಿಸನೆ ಲೋಕಬಾಂಧವನಸಮತೇಜಮಂ
ಬೀರಿಸನೆ ಮಂದೆಹರಕೌಶಿಕರ ಭೀತಿಯಿಂ ಬ್ರಹ್ಮಾಂಡಮಂಡಲದೊಳು
ಕ್ರೂರಮಾನಸರಾದ ಕುಜನಸಂಜಾತಮವಿ
ಚಾರದಿಂ ನಿಂದಿಸುವುದೆಂದೆಂಬ ಸಂಶಯದಿ
ಸೂರಿಜನರಸಮರಸವತ್ಕವಿತೆನಿರ್ಮಿಸದೆ ಮಾಣುವರೆ ಭೂತಳದೊಳು ೨೪

ರೋಗಿ ಪರಮಾನ್ನಮಂ ಗೂಗೆ ದಿವಸೇಂದ್ರನಂ
[ತ್ಯಾ೧]ಗಿ ರಸಿಕತ್ವಮಂ ರಾಗಿ ಸತ್ಕರುಣಮಂ
ಕಾಗೆಗಳು ಪಕ್ವಫಲಸಾರಮಂ ನರಿಸವಿದು ತಣಿಯಬಲ್ಲುವೆ ಪ್ರೀತಿಯಿಂ
ರಾಗಮದನಾಗಮವಿಲಾಸದುನ್ನತಸವಿಯ
ಯೋಗಮಂ ನಿಷ್ಕಾಮಿ ಸತ್ಕಾವ್ಯದರ್ಥಗಳ
ಪೂಗಮಂ ಬಲ್ಲರೇನಪ್ರಬುಧಮಾನವರ್ ಭಾವಿಪಡೆ ಸಂತಸದೊಳು ೨೫

---

೧ ಹ್ಯಾ (ಕ ಚ)

ಇಂದುಶಿಲೆಯಿಂದೀವರೋದ್ಗಮಚಕೋರಿಗಳ
ವೃಂದಗಳು ರಾಕೇಂದುವಂ ಕಂಡು ಕರಗಿ ಘನ
ಚೆಂದದಿಂದರಳಿ ನಲಿವಂತುಳಿದ ಕಲ್‌ಮಲರ್ವಕ್ಕಿಗಳ ಸಂಕುಲಗಳು
ಸಂದು ದ್ರವಿಸುತಮರಳಿ ನಲಿಯದಿರ್ದರೆ ಕುಂದೆ
ಚಂದ್ರನಿಗದೇತೆರದಿ [1]ದುರ್ಜನರ್[ಮಚ್ಚರದಿ]
ಬಂಧುರದ ಸತ್ಕೃತಿಯ ಸವಿಯರಿಯದಿರೆ ಮತ್ತೆ ಸತ್ಕವಿಗದೇಂ ಹಾನಿಯೇ ೨೬

ಗಳಿತಯೌವ್ವನಿಗನಂ ಕಾಮಿಪರೆ ಕಾಂತೆಯರ್
ಕಲಿ[2][ಯಂತೆ][2]ಹೇಡಿಯಂ ಕಾಂಕ್ಷಿಪರೆ ಖೇಚರರ್
ಛಲದಂಕವೀರಕುಲಚಂದ್ರಮರ್ ಕಾದುವರೆ ಬಲಹೀನನೊಳ್ ಜಗದೊಳು
ನಲವಿನಿಂ ಖಾತಿಪುದೆ ಪಂಚಾಸ್ಯ ತೃಣಗಳಂ
ನಲಿದು ಕ್ಷೀರಾನ್ನಮಂ ಸವಿದಾತನಂಬಲಿಗೆ
ಒಲಿವನೇನದರಂತೆ ಸತ್ಕವಿಗಳಲ್ಪಕೃತಿಯಂ ನೋಡಿ ಮೋಹಿಸುವರೇ ೨೭

ಸರಿಮಿಂಡಿಯರ ರೂಪುವಿಭ್ರಮವಿಲಾಸಗಳ
ಕಿರುನೋಟ ಸಿರಿಮೊಗದ ಸರಸಸವಿಮಾತುಗಳ
ವರ ಮಂದಹಸಿತಗಳ ಸುಸಿಲಾಸೆನೋಟಗಳ ರೀತಿಗಳ ಸಂಜಾತಮಂ
ವಿರಹಿಗಳು ಮನದಂದು ನೆರೆದು ಮೋಹಿಸುವಂತೆ
ಪರಮುಕಬ್ಬಿಗರೆಲ್ಲ ಮತ್ಕಾವ್ಯವನು ಬಿಡದೆ
ಹರುಷದಿಂದಲಿ ಒರೆದು ಮಮಕರಿಸಿ ಮನವೊಲಿದು ಭಾವಿಸರೆ ಭೂಭಾಗದೊಳ್ ೨೮

ಚಲಿತಲಂಕಾರಗಳ ಜಾತದಿಂದೆಡೆವಿಡದೆ
ಮಿಳಿತ ಸ್ಮೃತಿ ವಿಭ್ರಮದ ಭಾವಂಗಳಿಂದಿಡಿದು
ಲಲಿತಪದಗತಿರೀತಿಯಿಂದಿಡಿದು ಸಂತತಂ ಮುಕ್ತಾಸುಮಾಲಂಗಳಿಂ
ಚೆಲುವ ಶೃಂಗಾರಾದಿ ರಸಗಳಂ ಬೀರುತ್ತ
ಸುಳಿವ ಕರಪಲ್ಲವದಿ ಮತ್ಕಾವ್ಯ [3][ಕನ್ನಿಕೆಯು]
ಇಳೆಯೊಳಗೆ ಸದ್ರಸಿಕರೆದೆರಂಗಮಂಟಪದಿ ನಚ್ಚಣಿಸದೇನಿರ್ಪಳೆ ೨೯

---

೧ ಬಲಜನರ್ (ಕ. ಚ.) ೨ ರಣ (ಕ. ಚ.) ೩ ಸಾರವದು(ಕ. ಚ.)

ವೃಢಮಹಾಲಿಂಗನ ಸುಲೀಲೆಯೊಳ್ ನಾ ಮುನ್ನ
ಬಿಡದೆ ಬಣ್ಣಿಪೆನು ಮುನ್ನೀರದುನ್ನತಿಯನೆಡೆ
ವಿಡದೆ ಲಾಲಿಪುದು ಭಕ್ತೋತ್ತಮರು ಭಯಭಕ್ತಿಪೂರ್ವಕದ ಮಾನಸದೊಳು
ದೃಢದಿಂದೆ ನಡೆವ ಘನ ಹಡಗದಿಂ ಬೆಡಗ[೧]ದಿಂ
ದೆಡಬಲದೊಳೋಲೈಪ ಮೇಘದಿಂ ರಾಗದಿಂ
ದಿಡಿಕಿರಿದು ನಡೆವ ಪೆರ್ದೆರೆಗಳಿಂ ನೊರೆಗಳಿಂದೊಪ್ಪಿತ್ತು ರತ್ನಾಕರಂ ೩೦

ತಡಿವಿಡಿದು ಸಂಚರಿಪ ದಂತಿಯಿಂ ಕಾಂತಿಯಿಂ
ದಿಡಿಕಿರಿವ ಪರಮ ಪೆರ್ದೊರೆಗಳಿಂ ಕರೆಗಳಿಂ
ಪಡಿಯಿಡುವ ಮಕರ ಮತ್ಸ್ಯ[ದಿ][೨]ಗಳ ಸಂಗದಿಂ ಭಂಗದಿಂ ಕಂಗೊಳಿಸುವ
ವಡಬಾಗ್ನಿಯುಲ್ಬಣದ ನಾದದಿಂ ಮೋದದಿಂ
ದೆಡೆವಿಡದೆ ನೆರೆ ಬೆಳೆದ ಪವಳದಿಂ ಜವಳದಿಂ
ಕಡುರಮ್ಯಮಾದ ಪೆರ್ಮಡುಗಳಿಂದುಡುಗಳಿಂ ಕಡಲೆಸೆದುದೇನೆಂಬೆನು ೩೧

ಕಮಲಾಕ್ಷನಂತಬ್ಜಚಕ್ರವಿಭ್ರಾಜಿತಂ
ಕುಮುದಾಪ್ತನಂತಮಲತಾರಾವಿರಾಜಿತಂ
ಶಮನಾರಿಯಂತಸಮ ಗಂಗಾಹಿಸಂಭೃತಂ ಶರಜನ್ಮನೋಲ್ ಸಂತತಂ
ರಮಣೀಯತರವೆನಿಪ ಶಕ್ತಿಶಿಖಿರಂಜಿತಂ
ಸುಮನಪತಿಯಂತೆ ದಿವ್ಯಮಣಿಯುತಮೆನಿಸುತ್ತೆ
ಕಮಲಾಕರಂ ಕಣ್ಗೆ ಮಂಗಳವನೀವುತ್ತ ಮನಕೆ ಮಂಜುಲವಾದುದು ೩೨

ಇಂದುಪದ್ಮಜೆಹರಿಸ್ಯಂದನೋಚ್ಚೈಶ್ರವ
ಸ್ಸಿಂಧು ಚಿಂತಾರತ್ನ ಕಾಮದುಘ ಮೊದಲಾದ
ಸಂದ ವಸ್ತುನಿಕಾಯ ಮದ್ದೇಹದೊಳು ಜನಿಸಿ ಸ್ವರ್ಗಾದಿ ಲೋಕಂಗಳೊಳ್
ಬಂಧುರದ ಕೀರ್ತಿಯಂ ಸಂದು ಸುರಮಾನವರಿ
ಗಿಂದು ಹಿತಕರವಾಗಿ ಮೆರೆವುದೀ ಧಾತ್ರಿಯೊಳ್
ಎಂದುಲಿದು ಪೇಳ್ವಂತೆ ಘೋರ್ಗರೆವನಾದದಿಂದೊಪ್ಪಿತ್ತು ನೀರಾಕರಂ ೩೩

---

೧ (ಗಿನಿಂ?) ೨ ವೆ (ಜ.)

ಇಂತೆಸೆವ ಸಾಗರದ ಮಧ್ಯದೊಳ್ ಬಾಲರವಿ
ಕಾಂತಿಯಂ ಕೀಳ್ಪಡಿಸುತಾಕಾಶಮಧ್ಯದೊಳ್
ಸಂತತಂ ಹೇಮಾದ್ರಿ ಮೆರೆವುತಿರೆ ತತ್ತಟದ ತಾರಾಳಿಯಂ ಕಾಣುತ
ಸಂತಸದೊಳಮರಾಂಗನೆಯರೆಲ್ಲ ನೆರೆದು ನಿಜ
ಭ್ರಾಂತಿಯಿಂ ಮುತ್ತೆಂದು ಪಿಡಿವರೆಂದೆನಲು ನಾ
ನೆಂತು ವರ್ಣಿಪೆನಸಮ ತದ್ಭೂಧರೋನ್ನತಿಯ ಬ್ರಹ್ಮಾದಿಗಳ್ಗರಿದಲಾ ೩೪

ಮುನಿಜಾಲದಂತಸಮ ಪರಮಶೃಂಗಾನ್ವಿತಂ
ವನಮಾಲಿಯಂದದಿಂದತುಳ ಲಕ್ಷ್ಮೀಯುತಂ
ಘನಘನಾಗಮದಂತೆ ಕಂಕಣವಿರಾಜಿತಂ ಕಂಜಾರಿಯೊಲ್ಸಂತತಂ
ಅನಿಮಿಷಹಿತಂ ಪದ್ಮಹಿತನಂತೆ ಥಳಥಳಿಪ
ಘನಕಾಂತಿಮಯವೆನಿಸಿ ಮಾರಾರಿಧನುವಾದ
ಕನಕಾದ್ರಿ ಕಣ್ಗೆ ಮಂಗಳವಾದುದೇನೆಂದು ಬಣ್ಣಿಸುವೆ ಭೂತಳದೊಳು ೩೫

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರಕೃಪೆಯಿಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೩೬

ಅಂತು ಸಂಧಿ ೧ ಕ್ಕಂ ಪದ ೩೬ ಕ್ಕಂ

ಮಂಗಳಂ

ಶ್ರೀ

ಶ್ರೀ

# ಎರಡನೆಯ ಸಂಧಿ

**ಸೂಚನೆ :** ಮಾರಹರನಾಸ್ಥಾನಮಂಟಪಕೆ ಪ್ರೇಮದಿಂ
ನಾರದಂ ಬಂದು ಬಿನ್ನೈಸಲ್ಕೆ ಭಕ್ತಿಯಿಂ
ಧಾರುಣಿಗೆ ಮಹಲಿಂಗಜಂಗಮವ ಬೀಳ್ಕೊಟ್ಟ ಶ್ರೀಗಿರಿಸುತಾಕಾಂತನು

ಶ್ರೀ ಕಮಲಜಾಹಿತಸುನಾಗಮುಖಸಂಕಾಶ
ಲೋಕನಯನಪ್ರಕಾಶನಮೂರ್ತಿ ಸದ್ಗುಣಾ
ನೀಕಸಂಕಲಿತ ಹರಿಜಾತಲಂಕಾರಧರ ಪುಷ್ಕಳಾಮಳಕಂಧರ
ನಾಕಜನಸಂಸೇವ್ಯ ಕೌಶಿಕಾಭಯದಾತ
ಭೀಕರಾಮೃತರೂಪ ಪರಮಕುವಲಯಮಹಿತ
ಲೋಕೈಕನಾಥ ಶ್ರೀ ಚೆನ್ನವೀರೇಶ್ವರನೆ ಪಾಲಿಪುದು ತ್ರೈಲೋಕಮಂ ೧

ಇಂತೆಸೆವ ಹೇಮಾದ್ರಿಯೆಂಬ ದೇವಾಲಯಕ
ನಂತಮುಕ್ತಾಮಣಿಗಳಿಂದಜಂ ನಿರ್ಮಿಸಿದ
ನಂತಮಣಿವಿಧುಕೋಟಿಕಾಂ¹ತಿಯಂ ನೆರೆ ಜರೆದು ಮಿನುಪ ಮಣಿಮಯಕಲಶವೋ
ಸಂತಸದೊಳಂಬರಾಂಗನೆಯ ಬೈತಲೆಯೊಳಿಹ
ನಂತರುಚಿಯಿಂ ಮೆರೆವ ಸೀಮಂತರತ್ನವೆಂ
ಬಂತೆಸೆದು ತೋರಿದುದು ಶಿವಪುರಂ ಕಣ್ಗೆ ಮಂಗಲವೀವು[ತಾವಾ]²ಗಳುಂ ೨

---

೧ (ಕ.) ಶಾ  ೨ ತೆಲ್ಲಾ (ಕ. ಚ.)

ಮುತ್ತಿನಿಂ ತೆತ್ತಿಸಿದ ಕನಕಮಯಶಾಲಗಳ
ಬಿ¹ತ್ತರದ ಕಾಂತಿಯಿಂದೊತ್ತರಿಪ ಹೂಡೆಗಳ
ಕತ್ತಲಿಪ ನೀಲಮಣಿ ಭಿತ್ತಿಗ[ಳ]ಷೇಯದಿಂದೆಡೆವಿಡದ ತೆನೆಗಳಿಂದ
ಸುತ್ತಿಡಿದಿಹಾಳ್ವೇರಿವೊತ್ತಿನಿಂ ದ್ವಾರಗಳ
ಕತ್ತರಿಪ ಕೇತುಗಳ ವೊತ್ತದಿಂದಿಡಿಕಿರಿದು
ಎತ್ತ ನೋಡಿದಡತ್ತ ಕಣ್ಗೆ ಮಂಗಳವಾಗಿ ಕಾಮಾರಿಪುರಮೆಸೆದುದು ೩

ಆಗಮಮಹಾಭಿತ್ತಿಯಿಂದೆಸೆವ ವೇದಗಳ
ಬಾಗಿಲ್ಗಳಿಂದಸಮ ಶಾಸ್ತ್ರಸಂಜಾತದನು
ರಾಗದಿಂವೊಪ್ಪುತಿಹ ಹಡೆಗಳ ಗಡಣದಿಂ ಉಪನಿಷತ್ತ್ವದ ತೆನೆಗಳಿಂ
ಯೋಗಗಳ ಸೌಧದಿಂದಮಲ ಪೌರಾಣಗಳ
ಪೂಗದಾಳ್ವೇರಿಯಿಂ ಶ್ರುತಿಗಳತಿಧ್ವಜಗಳಿಂ
ನಾಗಕುಂಡಲನಸಮ ಮಂದಿರವು ತತ್ಪುರದಿ ಕಣ್ಗೆ ಮಂಗಲವಾದುದು ೪

ಇಂತೆಸೆವ ಮಂದಿರದ ಮಧ್ಯದೊಳ್ ಸಂತತಂ
ಕಂತುಮದನಾಶನ ಸಭಾಸ್ಥಾನಮದು ಬಳಿಕ
ನಂತಶತಕೋಟಿ ವಿಸ್ತೀರ್ಣದಿಂದೆಡೆವಿಡದೆ ಧಳಧಳಿಸಿ [ಹೊಳೆಹೊಳೆಯುವ]
ನಂತಮಣಿ ಶಶಿಕಾಂತಪಾಷಾಣಸ್ತಂಭಗಳ
ಸಂತತಿಗಳಿಂದಿಡಿದು ಮೌಕ್ತಿಕದ ಝಲ್ಲರಿಯ
ಪಂಜ್ತಿಯಿಂದಿಡಿಕಿರಿದು ಕಂಗೊಳಿಸಿತೇನೆಂದು ಬಣ್ಣಿಸುವೆನಾ ಘನತೆಯಂ ೫

ಆ ಸಭಾಮಂಟಪದ ಮಧ್ಯಪ್ರದೇಶದಿ ನ
ಭೇಶಧರ ಮೂರ್ತಿಸುವ ಪರಮ ಸಿಂಹಾಸನಂ
ಸಾಸಿರಮಹಾಪದ್ಮ ಯೋಜನದ ದೀರ್ಘದಿಂದುನ್ನತಿಗಳಂ ತಾಳುತ
ಭಾಸುರಮಹಾಮೂಲಪ್ರಣಮದಾಕಾರದಿಂ
ದಾಶಿವನ ತಳೆದಸಮತತ್ತ್ವಮಯುವಾಗುತೆ ದಿ
ನೇಶ ವಿಧುಕಾಂತಿಗಳ ತನ್ನೊಳಗೆ ತೋರುತ್ತ ಮನಕೆ ಮಂಗಲವೀವುದು ೬

---

೧ ಚಿ. (ಕ.)

ನಿರುಪಮ ನಿರಾಧಾರ ನಿರ್ಗುಣ ನಿಜಾನಂದ
ನಿರಘ ನಿರ್ಲಯ ನಿತ್ಯ ನಿರಪೇಕ್ಷ ನಿರವಯವ
ನಿರುತ ನಿಗಮಾಗಮವಿದೂರ ನಿತ್ಯಾನಂದ ನಿರ್ಭೇದ್ಯನೆಂದೆನಿಸುವ
ಪರಮೇಶ ತತ್ಸಿಂಹಪೀಠಾಗ್ರಮಧ್ಯದೊಳ್
ಗಿರಿಜಾತೆಯರ್ಧಾಂಗದೊಳಗೊಪ್ಪಿರಲ್ ಬಳಿಕ
ಪರಮಪ್ರಮಥಾಳಿ ತನ್ನೆಡಬಲದೊಳಿರುತಿರಲು ನೆಲಸಿರ್ದನಾಸ್ಥಾನದೊಳ್ ೭

ಕುಲಗಿರಿಯ ತಿರಿಕಲ್ಲನಾಡುವರ್ ಶೇಷನಂ
ಒಲವಿನಿಂ ಕಟಿಸೂತ್ರಮಾಡುವರ್ ಕಾಲನಂ
ಛಲದಿಂದೆ ಸದ[೧][ಯುವರ್][೧] ಭೂಗಗನಗಳನೊಮ್ಮೆ ಕೈತಾಳಮಂ ಮಾಡುವರ್
ಜಲಧಿಗಳ ಹೀರುವರ್ ಕಾಲಾಗ್ನಿಯಂ ತಿಕ್ಕಿ
ತಿಲಕಮಂ ಮಡಗುವರ್ ಕಾಮನಂ ಮರ್ದಿಪರ್
ಮುಳಿದಸಮಬ್ರಹ್ಮಾಂಡಗಳ ತುಳಿವ ಮಹರುದ್ರರಾಸ್ಥಾನದೊಳಗಿರ್ದರು ೮

ಹರಿಸರಸಿಜೋದ್ಭವರ ಲೆಕ್ಕಿಸರ್[೨] ಸಂತತಂ
ಸುರಪ ಮೊದಲಾದಮರಸಂಜಾತಗಳನೊಮ್ಮೆ
ಪರಿಕಿಸರ್[೩] ತಾರಾಳಿಗಳನೆಲ್ಲ ತಾಳುವರ್ ತಲೆಯೊಳಗೆ ಪೂಮಾಲೆಯೊಲ್
ಹರಿಸೋಮಬಿಂಬಗಳ ಪಿಡಿವರಂಗುಲಿಗಳಿಂ
ಹರನೆಣಿಕೆಗೊಳ್ಳರ್ ಮಹಾರುದ್ರಪುಂಗವರ್
ಹರುಷದಿಂದಿರ್ದರಾ ಸಭೆಯೊಳಗೆ ಶತಕೋಟಿಗಣನೆಯನು ನೆರೆಮೀರುತ ೯

ದ್ವಿಮುಖರ ದಶಮುಖರ ಶತಮುಖದವರ ಬಳಿಕೆ
ತ್ರಿಮುಖರ ಷಣ್ಮುಖರ ಶತಕೋಟಿ ಮುಖದವರ
ಗೋಮುಖದ ಹರಿಮುಖದ ಮೃಗನಾಥನೊಲ್ ಮಿನುಪ ವದನಪಂಕೇಜಾತರ
ಆ ಮಹಾಪ್ರಮಥಗಣನಂತ ಖರ್ವವ ಮೀರಿ
ವ್ಯೋಮಕೇಶನ ಸಭಾಮಧ್ಯದೊಳಗೊಪ್ಪಿಹುದು
ಪ್ರೇಮದಿಂ ಬಣ್ಣಿಪಡೆ ಫಣಿನಾಥಗರಿದಾಯ್ತು ನನಗೆಂತು ಪವಣಪ್ಪುದು ೧೦

---

೨-೩ ಲ್ (ಕ. ಜ.)  ೧ ಬಡಿದು (ಕ. ಚ.)

ದ್ವೀಬಾಹು ದಶಬಾಹು ಶತಭುಜದವರ್ ಬಳಿಕ
ತ್ರೀಬಾಹು ಷಡ್‌ಬಾಹು ಶತಲಕ್ಷಭುಜದವರ್
ಚೌಬಾಹು ಬಹುಬಾಹುಗಳನುಳ್ಳ ಪ್ರಮಥಾಳಿ ಪದ್ಮಗಣನೆಯು ಮೀರುತ
ಆಬಲಂ ಚಂದ್ರಧರನೆಡಬಲದೊಳಿರ್ದರಿನೆ
ಭೂಭಾಗದೊಳಗಾವ ಕಬ್ಬಿಗರು ಬಣ್ಣಿಪರಿ
ಳಾಭಾರವನು ತಾಳ್ದ ಶೇಷಶಾರದೆಯರಿಗೆ ನುತಿಸಲಸದಳವಾದುದು ೧೧

ಇಂತಸಮ ಪ್ರಮಥಗಣಚಂದ್ರಮರ್ ಕಣ್ಗೆಸೆಯೆ
ಸಂತತಂ ಚಕ್ರಕೌವೋದಕಿಯು ಶಂಖಗಳ
ನಾಂತ ಚತುರ್ಭುಜದ ಲಕ್ಷ್ಮೀಕಾಂತರಿದ[೧]ರಾಸ್ಥಾನದಲಿ ನವಲಕ್ಷದಿ
ಸಂತಸವನಾಂತಿಹರ್ ಚತುರ್ಭುಜವನಾಂತಿಹರ್
ಕುಂತು ತೋರುವ ಪರಮ ಶಾರದಾವಲ್ಲಭರ್
ಕಂತುನಾಶನ ಸಭಾಮಂಡಲದಿ ನವಕೋಟಿ ಕಮಲಸಂಭವರಿರ್ದರು ೧೨

ಸುರಧೇನುಸುರಕುಜದಿ ರಾಜಿಪರ್ ಸಂತತಂ
ಪರಮಶಚಿಯೊಡಗೂಡಿ ಸುರಪುರವನಾಳುವರ್
ನಿರುತ ಪುರಹೂತರಲ್ಲಿರ್ದರಗಣಿತಲಕ್ಷ ಮಹಲಕ್ಷಗಣಿತಂಗಳಿಂ
ಮರುತಾಪ್ತರಹ ತಗರದೇರಧ್ಯೈದಶಲಕ್ಷ
ತರಣಿಸಂಭವರೋ[೨]ಷ್ಟ್ರ ಭೀಕರದ ಮುಖದವರ್
ಕರಕಮಲದಶದಂಡದಕ್ಷಿಣಾಶಾವರರು ದಶಲಕ್ಷಮಿರುತಿರ್ದರು ೧೩

ನರವಾಹರೆಂದೆನಿಪ ನಿರುತಿಗಳು ದಶಲಕ್ಷ
ವರನಕ್ರಸ್ಯಂದನದ ಪಶ್ಚಿಮಾಶಾವರರು
ಪರಿಕಿಸಲ್ ದಶಲಕ್ಷ ಸಾರಂಗವಾಹನದ ಮಾರುತರು ದಶಲಕ್ಷದಿ
ವರ ಶಿವನ ಮಿತ್ರರೆಂದೆನಿಪ ಯಕ್ಷೇಶ್ವರರ್
ಪರವೃಷಭವಾಹಕರ್ ದಶಲಕ್ಷಗಣನೆಯಲಿ
ಗಿರಿಜೆಯಾಣ್ಮನ ಸಭಾಮಧ್ಯದೊಳ್ ನಿಂತಿಹರದೇನೆಂಬೆನಚ್ಚರಿಯನು ೧೪

---

೧ ದೋ (ಕ. ಚ.)    ೨ ಕ್ಷನಾ (ಕ.)

ತಾರಾಧಿಪತಿಗಳೆಂದೆನಿಪಸಮುಚಂದ್ರಮುರ್
ವಾರಿಜಾಹಿತರೆನಿಪ ಭಾನುಗಳು ದಶಲಕ್ಷ
ಮಾರಮರ್ದನರೆನಿಪ ಮನುಮುನಿಗಳಗಣಿತಮಹಾಲಕ್ಷಮಂ ಮೀರುತ
ಗೌರಿಯಾಣ್ಮನ ಸಭಾಮಧ್ಯದೊಳಗೊಪ್ಪುತಿರೆ
ವಾರದಿಂ ನಂದಿಮಹಕಾಳರೆಂದೆನಿಸಿರ್ಪ
ಸಾರತರವೇತ್ರಧಾರಿಗಳಲ್ಲಿ ಸರಿಸಮಾನವ ಮಾಡುತಿರುತಿರ್ದರು ೧೫

ಯಕ್ಷರಕ್ಷಾದಿಸುರಗರುಡಗಂಧರ್ವರುಂ
ಪಕ್ಷದಿ ಮಹಾಭೀತಿಯಿಂ ಸಂತತಂ ಸರ್ವ
ಯಕ್ಷಪತಿಮಿತ್ರನ ಸಭಾಮಧ್ಯದೊಳು ಹಸ್ತಪತ್ರಗಳ ನೆರೆ ಮುಗಿಯುತ
ಅಕ್ಷಯ ಮಹಾ ಉಕ್ಷವಾಹನನಿರೂಪವನು
ಈಕ್ಷಿಸುತ ಮನ್ಮಾಥ ಬೆಸಸೆನುತ ತವಕದಿಂ
ಲಕ್ಷದ ಮಹಾಶಂಖಮಂ ಮೀರಿ ನೆಲಸಿರ್ಪರೇನೆಂದು ಬಣ್ಣಿಸುವೆನು ೧೬

ನಂದಿ ಮೊದಲಾದಸಮ ಪ್ರಮಥರೇ ಸುಮ್ಮನಿರಿ
ಬಂಧುರದ ಮಹರುದ್ರಗಣ ಮೂರ್ತಗೊಳ್ಳಿರೈ
ಕುಂದದ ಮಹಾಮುನಿಗಳೇ ನೀವು ಕೋಪಿಸದೆ ಮೌನತ್ವದಿಂಧಿರ್ಪುದು
ಇಂದುಶಕಲಾವತಂಸನ ಸಭಾಮಧ್ಯದೊಳ
ಗೆಂದು ಕರಕಂಜಗಳ ನೆರೆ ಮುಗಿದು ಭಕ್ತಿಯಿಂ
ನಂದಿಮಹಕಾಳರುಂ ಬಿನ್ನೈಸುತಿರ್ದರಾ ಪರಶಿವನ ಸಮ್ಮುಖದೊಳು ೧೭

ವಾರಿಜಾಕ್ಷಾದಿಗಳು ನಿಜಸ್ಥಾನದೊಳಗಿಹುದು
ಶಾರದೆಯ ಕಾಂತರುಂ ಸುಮ್ಮನಿಹುದೀಕ್ಷಣಂ
ವಾರದಿಂ ವಜ್ರಿಗಳು ನಿಜತಾಣದೊಳಗಿಹುದು ಪಾವಕರು ಸ್ವಸ್ಥಾನದೊಳ್
[1][ಸೂ]ರ್ಯಸಂಭವರೆಲ್ಲ ದಕ್ಷಿ[2]ಣದಿ ನಿಂತಿಹುದು
ನೈರುತ್ಯರೀಕ್ಷಣಂ ನಿಮ್ಮ ತಾಣದೊಳಿಹುದು
ಭೂರಿ ವರುಣರು ನೀವು ಪಶ್ಚಿಮಾಶಾಸ್ಥಲದಿ ನಿಂತಿರ್ಪುದೆಂದುಸುರ್ದರು ೧೮

---

೧ ಸು (ಕ. ಚ.) ೨ ಕ್ಷ (ಕ. ಚ.)

[೧]ಹರಿ[ಸುಪು]ತ್ರಾದಿಗಳು ಸ್ವಸ್ಥಾನದೊಳಗಿಹುದು
ವರ ಯಕ್ಷ[೨][ಕಿನ್ನರ]ರ್ ಉತ್ತರಕಾಷ್ಟದೊಳಿಹುದು
ಪರ ವೃಷಭವಾಹನರ್ ನಿಮ್ಮ ತಾಣದೊಳಸವು ಸಂತೋಷವಿಂದಿರ್ಪುದು
ಸುರಗಣವು ಸದ್ಭಕ್ತಿಭಾವದಿಂದೆಡೆವಿಡದೆ
ಕರಕಂಜಗಳ ಮುಗಿದು ಕೀರ್ತಿಸುವುದೆನುತಾಗ
ಹರುಷದಿಂ ನಂದಿ ಮಹಕಾಳರುಂ ಕಣ್ಸನ್ನೆಯಂ ಬೀರಿ ಗರ್ಜಿಸುವರು ೧೯

ಇಂತೆಸೆವ ಘನಸಭಾಮಂಡಲದ ಮಧ್ಯದೊಳ್
ಕಂತುಮದಮರ್ದನ ಮಹಾಮಹಿಮ ಕಾಲಹರ
ನಂತಗುಣಮಣಿಹಾರ ಪರಮಚಿದ್ರಸಪೂರ ಲಿಂಗಾಂಗ ಸಂಪತ್ಕರ
ಶಾಂತಿದಾಂತಿವಿಹಾರ ಸಂಗೀತರಸಪೂರ
ಭ್ರಾಂತಿಹರನೆಂದೆನಿಪ ಭೃಂಗೀಶ್ವರಂ ಬಳಿಕ
ಸಂತಸದಿ ಭರತಕಟ್ಟಳೆಗಳಂ ನೆರೆ ತಿಳಿದು ನರ್ತಿಸುವ ಹರನಿದಿರೊಳು ೨೦

ಕರಕಂಜಗಳನಾಗ ಡಾಳಿಸುತ ಚಾಳಿಸುತ
ಕರಿಹಸ್ತದಭಿನಯುವ ತೋರುತಂ ಹಾರುತಂ
ಚರಣದ್ವಂದ್ವದ ಗತಿಯ ಬೀರುತಂ ಜಾರುತಂ ಭ್ರಮಣಿಗಳ ನೆರೆ ತೋರುತಂ
ವರವದನಕಂಜಮಂ ತಿರುವುತಂ ಮುರಿವುತಂ
ಹರಿಣಲಂಘನೆಗಳಂ ನೆಗಳುತಂ ಜಗುಳುತಂ
ಹರುಷದಿಂ ನರ್ತಿಸಿದ ಭರತಶಾಸ್ತ್ರಾಚಾರ್ಯನೆಂಬಂತೆ ಶಿವನಿದಿರೊಳು ೨೧

ಇಂತು ನಾನಾ ತೆರದಿ ಪರಮ ಭೃಂಗೀಶ್ವರನು
ಸಂತಸದಿ ನರ್ತಿಸುತ ನವರಸಗಳಂ ಸಭೆಗೆ
ಸಂತತಂ ಬೀರುತಿರಲಾ ಸಮಯದೊಳು ಸೋಮಶತಕೋಟಿಸಂಕಾಶದೊಲ್
ಕಾಂತಿಕಾಯದ ಕರ್ಣಕುಂಡಲದ ಕಿರುನಗೆಯ
ನಾಂತ ಮೊಗದಾವರೆಯ ಕರದ ವೀಣಾಧ್ವನಿಯ
ಭ್ರಾಂತ ಮಾಯಾಪಹಾರಿ ತ್ರೈಲೋಕಸಂಚಾರಿ ಬಂದ ನಾರದ ಮುನಿಪನು ೨೨

---

೧ ಹರಿಪತ್ರಾ (ಕ. ಚ.) ೨ ಕರ್ತಮ (ಕ. ಚ.)

ಹಾರ ಹೀರ ತುಷಾರ ಮಂದಾರ ಸುರಧೇನು
ತಾರಕಾಮೃತ ಕುಂದ ಹರಿಚಂದನೇಂದು ಸುರ
ವಾರಣೋಚ್ಚೈಃಶ್ರವ ಮರಾಳ ಮರುತಾಹಾರ ವರ ಪರಮ ಸುರದೀರ್ಘಿಕಾ
ಶಾರದಾಂಬುದ ಸೋಮ ತಾರಾಗವರದಾತ
ಸಾರ ಗೌರಶರೀರ ಮಾರಾರಿ ಶರಣೆಂದು
ನಾರದ ಮುನೀಶ್ವರಂ ನಮಿಸಿ ಭಯಭಕ್ತಿಯಿಂ ಕೈಮುಗಿದು ಕೊಂಡಾಡಿದಂ ೨೩

ಶ್ರೀಧರಸುತಾನಯನ ಶ್ರೀಧರಸುಧಾಸೂತಿ
ಶ್ರೀಧರಸುತಾಮಿತ್ರ ಶ್ರೀಧರಾಂಬಕವರದ
ಶ್ರೀಧರಾಸುರಗರ್ವಮತ್ತೇಭಪಂಚಾಸ್ಯ ಶ್ರೀಧರಾಹಿತಕಂಧರ
ಶ್ರೀಧರಾಹಿತಪುತ್ರ ಕದನಲಂಪಟಮಿತ್ರ
ಶ್ರೀಧರಾಹಿತ ಜಾತವೇದಾಕ್ಷ ಮುನಿಪಕ್ಷ
ಶ್ರೀಧರಾಪ್ತಕುಮಾರಸಂಹಾರ ಜಯತೆಂದು ಕೀರ್ತಿಸಿದನಾ ಮುನಿಪನು ೨೪

ಎಂದು ಪಲವಂದದಿಂ ಪೊಗಳುವ ಮಹಾಮುನಿಯ
ನಂದು ಮದನಾರಿ ಮುಂದಕೆ ಕರೆದು ಮೈದಡವಿ
ಕುಂದಮಂದಾರಹರಿಚಂದನಾಮಲಕಾಯ ಬಂದ ಕಜ್ಜಮದೇನೆನೆ
ಇಂದುಧರ ಲಾಲಿಸೆನ್ನಯ ಪರಮ ಬಿನ್ನಪವ
ನೆಂದು ತತ್ಸಭೆಯೊಳಗೆ ಸರ್ವರಾಲಿಸುತಿರಲು
ಮಂದಹಾಸನ ಮುಂದುವರಿವುತಿರೆ ಪೇಳಿದಂ ಶಿವನಿದಿರೊಳಾ ಮುನಿಪನು ೨೫

ಕಲಧೌತಗಿರಿಯಧೋಭಾಗದೊಳಗೊಪ್ಪುತಿಹ
ಚೆಲುವ ಜಂಬೂದ್ವೀಪಮಧ್ಯದೊಳು ರಾಜಿಸುವ
ತೆಲುಗುಮಾತಂಗಮಾಗಧವಂಗಕಾಳಿಂಗಬಂಗಾಲ ವರ ದ್ರಾವಿಡ
ಕಲಿತಪಾಂಚಾಳನೇಪಾಳಬರ್ಬರಲಾಟ
ಮಲಯಹಮ್ಮೀರಗಾಂಧಾರಖರ್ಪರಸಿಂಧು
ಪೇಲ ಮೀರತವತುಳ ವಿಂಧ್ಯಾದ್ರಿದೇಶಗಳ ಮಧ್ಯದಲಿ ಕಂಗೊಳಿಸುವ ೨೬

ಕರ್ನಾಟದಿಂ ಬಂದೆನೆಲೆ ದೇವ ದೇವೇಶ
ದುರ್ನಾಮದಿಂದಿಡಿದು ಕಂ[೧][ಗೆಡಿ]ಪುದಾದೇಶ
ವರ್ಣಾಶ್ರಮದೊಳಿರ್ಪ ಫಲದಂತೆ ಕನ್ನೆಯರ ಮನದ ಕಡುಸ್ನೇಹದಂತೆ
ಪೂರ್ಣಾಮಲಜ್ಞಾನಿಗಳು ಕಣ್ಗೆ ಕಾಣಿಸದೆ
ನಿರ್ನಾಮವಾಗಿಹರು ಸನೆಯ ಪರಿಮಳದಂತೆ
ಪೂರ್ಣಾಮೃತದೊಳಿರ್ಪ ಘೃತದಂತೆ ಧೂರ್ತರಿಗೆ ಮರೆಯಾಗಿಹರು ಶಂಕರ ೨೭

ಜೈನಚಾರ್ವಾಕಾದಿ ಪಾಷಂಡಿಗಳು ಬಿಡದೆ
ಮೌನದಿಂದಿರ್ಪ ನಿಜಭಕ್ತರನು ದೂಷಿಪರ್
ದಾನಧರ್ಮವಿಚಾರವರಸತ್ಯಸಾಧುಗಳನಣಕಿಪರು ಪಾಪಾತ್ಮರು
ಧ್ಯಾನಧಾರಣಮುಖ್ಯ ಯೋಗಗಳ ಸಾಧಿಸುವ
ಧ್ಯಾನಸ್ಥರನು ಕಂಡು ಕರುಬದಿಂ ಸ್ವೈರಿಸರ್
ನಾನೆಂಬ ಭ್ರಾಂತಿಯಿಂವೊಡಗೂಡಿ ಬಾಳುವರ್ ಬಾಲೇಂದುಧರ ಶಂಕರ ೨೮

ಗುರುಲಿಂಗಜಂಗಮದ ಪದಭಕ್ತರಂ ಬಳಿಕ
ವರಭಸಿತರುದ್ರಾಕ್ಷಿಮಾಲೆಗಳ ಯುಕ್ತರಂ
ಹರಮಂತ್ರವನು ಬಿಡದೆ ಜಪಿಸುತಿಹ ಮುಕ್ತರಂ ಕಡು ಕೋಪದಿಂ ನೋಡುತ
ಮರುಳುಗಳು ನೀವೆಂದು ಜರಿವ ದುರುಳಾತ್ಮರನು
ಪೊರಲಾರೆನೆಂದಿಳಾಕಾಂತೆ ಮರಗುವಳಭವ
ಕರುಣಿಸೆಂದೆನುತ ಸುರಮುನಿಪತಿಯು ಬಿನ್ನೈಸೆ ಪರಮೇಶನಿಂತೆಂದನು ೨೯

ನಿನ್ನ ಬಿನ್ನಪವೆನಗೆ ನಲವೆತ್ತುದೆಲೆ ಮುನಿಪ
ಧನ್ಯಕಾಣಾ ಸ್ವರ್ಗಮರ್ತ್ಯಪಾತಾಳದೊಳ
ಗಿನ್ನು ಪರಪುರುಷಾರ್ಥಿಯಹರಾರು ನಿನ್ನಂತೆ ಲೋಕಕಾರಣಪುರುಷರು
ಮನ್ನಣೆಯ ಕಜ್ಜಮಿದು ಬಾರೆಂದು ಕರುಣದಿಂ
ಮನ್ನಿಸುತುಮಾಕಾಂತನಾಸ್ಯಾಬ್ಜವನು ನೋಡಿ
ಭಿನ್ನವಿಲ್ಲದೆ ನಂದಿ ಮೊದಲಾದ ಪ್ರಮಥರಿಗೆ ಪೇಳಿದನದೇನೆಂಬೆನು ೩೦

೧ ಗೊಳಿ (ಕ. ಚ.)

ನಂದಿವಾಹನ ಮುಖ್ಯ ಪಂಚವಿಂಶತಿಯಾದ
ಸಂದ ಲೀಲೆಗಳ ತ್ರೈಭುವನಂಗಳರಿವಂತೆ
ಚೆಂದದಿಂ ಮೆರೆದೆನು ಕಣಾ ಗಿರಿಜೆ ಬಳಿಕಿಂದು ನಿರಘಜಂಗಮಲೀಲೆಯಂ
ನಂದದಿಂ ತೋರಬೇಕೆಂದು ಮನ್ಮನದಿಚ್ಛೆ
ಕಂದಮುದು ಕವಲಾಯ್ತು ನಾರದನ ಬಿನ್ನಪಕೆ
ಇಂದು ಭೂಭಾರವನು ತವಿಸಿ ಮದ್ಭಕ್ತರನು ಪಾಲಿಸುವೆನೆಂದುಸುರಲು ೩೯

ಚಂಡಿಕಾದೇವಿ ಕರಪುಂಡರೀಕವ ಮುಗಿದು
ಖಂಡಪರಶಿವನಡಿಗೆ ಭಕ್ತಿಯಿಂ ನಮಿಸುತ್ತ
ಚಂಡಕರಕೋಟಿಪ್ರಭಾಕಾಯ ನೀ ಪೇಳ್ದ ಶಿವಜಂಗಮದ ಮಹಿಮೆಯು
ಪುಂಡರೀಕಭವಾಂಡಮಂಡಲದೊಳರಿದೆನಗೆ
ಪುಂಡರೀಕಾಕ್ಷಸುರಮನುಮುನಿಮಹಾಗಣರ
ತಂಡಮರಿವಂತೆನಗೆ ನಿರವಿಸೆನೆ ಕೇಳೆಂದು ಬಾಲೇಂದುಧರ ಪೇಳ್ದನು ೩೦

ಕಾಮಿಕಾದ್ಯಸಮ ವರ ವಾತುಲಾಂತ್ಯಾಗಮದ
ಸ್ತೋಮಂಗಳುಲಿಗು ಶಿವಜಂಗಮದ ಮಹಿಮೆಯು
ಹೈಮವತಿ ನಾನರಿದು ಪೇಳಲಸದಳವಾಯ್ತು ಭೂವ್ಯಾದಿ ತತ್ತ್ವಂಗಳು
ಸೋಮರವಿತಾರಾಳಿದಿಕ್ಪತಿಗಳಿಲ್ಲಂದು
ಹೇಮಗರ್ಭಾದಿ ಸುರಮನುಮುನಿಗಳಿಲ್ಲಂದು
ತಾಮರಸನೇತ್ರರುದ್ರಾದಿಮಹಗಣರಿಲ್ಲವಾ ಕಾಲದೊಳ್ ನೋಳ್ಪೊಡೆ ೩೧

ಸಾಗರಗಳಿಲ್ಲಂದು ಸಪ್ತದ್ವೀಪಗಳಿಲ್ಲ
ನಾಗಪತಿಕೂರ್ಮಚಿಚ್ಛಕ್ತಿಗಳುಮಿಲ್ಲಿಳಾ
ಭಾಗವನು ತಾಳ್ದಸಮದಿಗ್ಗಜಗಳಿಲ್ಲಂದು ಕುಲಶೈಲಚಕ್ರಂಗಳ
ತಾಗ ಬಿಗುಹುಗಳಿಲ್ಲ ಸಕಲಸಚರಾಚರದ
ಆಗುಹೋಗುಗಳಿಲ್ಲದಾಕಾಲದೊಳಗಿರ್ದು
ದಾಗಿ ಜಂಗಮವೆನ್ನ ಪ್ರಾಣಕ್ಕೆ ಚೇತನಮದೆಲೆ ಗಿರಿಜೆ ಲಾಲಿಸುವದು ೩೨

ಪಂಚವಿಂಶತಿಲೀಲೆಗಳು ಎನಗೆ ಇಲ್ಲೆಂದು
ಪಂಚಮುಖ ಪಂಚದಶನೇತ್ರಗಳುಮಿಲ್ಲೆಂದು
ಕಾಂಚನಲತಾಭಜಟ ದಶಬಾಹುಗಳು ಮುಖ್ಯ ಭೂಮ್ಯಾದಿ ತತ್ತ್ವಂಗಳ
ಅಂಚಿತಾಮಲದೇಹಮಿಲ್ಲೆನಗೆ ಶತಕೋಟಿ
ಮಿಂಚಿನ ಮಹಾಬೆಳಗಿನಿಂದಿರ್ದೆನಾದಿಯೊಳ್
ಸಂಚಿತಾದಿಗಳೇನುಮಿಲ್ಲದೀ ಧರ್ಮರೂಪನಹ ನಂದೀಶನೊಳಗೆ ೩೫

ತಿಲದೊಳಗೆ ತೈಲಮುಂ ಕಾಷ್ಠದೊಳಗಗ್ನಿಯುಂ
ಮಲಯಜದಿ ಶೀತಳಂ ಮರುತನೊಳ್ ಪರಿಮಳಂ
ಶಿಲೆಯೊಳಗೆ ಕನಕಮುಂ ಕದಳಿಯೊಳ್ ಕರ್ಪುರಂ ಸಂತತಂ ವಂಶದೊಳಗೆ
ಒಲುವಪ್ಪ ಮೌಕ್ತಿಕಂ ಮರೆಗೊಂಡು ನೆಲಸಿದೊಲ್
ಮಲಹರಾತ್ಮಕ ವೃಷಭನಂತರಂಗದಿ ನಾನು
ಒಲವಿನಿಂದಿರ್ದನೆಲೆ ಗಿರಿಜಾತೆ ಕೇಳೆಂದು ಸೂಚಿಸಿದನಾ ಶಂಕರಂ ೩೬

ಬೀಜವೃಕ್ಷನ್ಯಾಯದಂತೆ ಬೇರ್ಪಡಿಸದಿಹ
ಸ್ವೈಜಗುಣಗಣಬೀಜ ಘನಮಹಿಮ ಶ್ರೀ ವೃಷಭ
ರಾಜನ ಮಹಾಹೃದಯಕಂಜಕಿಂಜಲ್ಕದೊಳ್ ತತ್ಕಾಂತಿಯಂ ಬೀರುತ
ರಾಜಿತಾಮಲಶೂನ್ಯಕಾಯ ಜಂಗಮವಾಗಿ
ಭ್ರಾಜಿಸುತ್ತಾನಿರ್ದು ಬಳಿಕೀಗ ಬ್ರಹ್ಮಾಂಡ
ರಾಜಿಗಳ ನಿರ್ಮಿಸುವ ರಚನೆಗೋಸ್ಕರವಾಗಿ ಸಾಕಾರಮುಂ ತಳೆದೆನು ೩೭

ಇಂತುಸುರುತಿರೆ ಕೇಳ್ದು ಭಕ್ತಿಯಿಂದಲೆ ಹರನ
ಕಾಂತೆ ಮುದವೆತ್ತು ಮನದೊಳಗೆ ಕಡುತವಕದಿಂ
ಕಂತುಮದಮರ್ದನ ಮಹಾದೇವ ದೇವೇಶ ಪಾವನ ವೃಷಭೇಶನ
ಅಂತರಂಗದೊಳಿರ್ಪ ಘನತರದ ಜಂಗಮವ
ನೆಂತು ಕಾಣುವೆನೆಂಬ ನುಡಿಗೆ ಸಂತಸವಟ್ಟು
ಅಂತಕಾಂತಕನರಿವುತೀ ಪ್ರಶ್ನೆ ಲೋಕಹಿತಕರವಾದುದಗಜಾತೆಯೇ ೩೮

ಎಂದು ಶ್ರೀನಂದಿಕೇಶನ[ಹಸಿತ] ವದನಾರ
ವಿಂದಮಂ ಕರುಣಾಕಟಾಕ್ಷದಿಂ ನೋಡುತಿರ
ಲಂದು ಹೃತ್‌ಪಂಕೇಜವಿಕಸನಮದಾಗುತ್ತ ಸೋಮಾರ್ಕಸಂಕಾಶಮಂ
ನಿಂದಿಸುವ ತೇಜದಿಂ ನಿಷ್ಕಲಮಹಾತತ್ತ್ವ
ಸುಂದರಾಂಗವನಾಂತು ಮುಂದೆಸೆಗೆ ಬಂದಾಗ
ನಿಂದಿರಲು ಹರಿಬ್ರಹ್ಮನೊದಲಾದ ಗೀರ್ವಾಣರೀಕ್ಷಿಸುತ ಸಂತೋಷದಿಂ ೩೯

ಕುಸುಮವೃಷ್ಟಿಯಕರೆದು ಕೈವಾರಿಸುತ್ತಮಲ
ವೃಷಭನಸುವಿಂಗೆ ಚೇತನವಾಗಿ ಸಂತತಂ
ಮಿಸುಗುತಿಹ ಶೂನ್ಯಕಾಯದ ವೀರಶೈವಷಟ್‌ಸ್ಥಲಬ್ರಹ್ಮಜಂಗಮವಿದು
ಅಸಮನೇತ್ರನ ಲೀಲೆ ಪೊಸತೆಂದು ಪೊಗಳುತಿರ
ಲಸಮ ಸಂತೋಷದಿಂ ಪರಮೇಶ[ನುರಿ]ಮೆಚ್ಚು
ತೆಸಕದಿಂದಾ ಮೂರ್ತಿಯನು ಬಾಚಿದಪ್ಪುತ್ತಲಿಂತೆಂದನಾ ಶಂಕರಂ ೪೦

ನಾಮರೂಪಕ್ರಿಯಾಕಲಿತ ನಿಷ್ಕಲತತ್ತ್ವ
ಧಾಮ ನೀನೆನ್ನ ಚೇತನಮೂರ್ತಿಯೆಂದು ಸ-
ತ್ಪ್ರೇಮದಿಂ ಕೊಂಡಾಡಿ ಮುಂಡಾಡುತಿರಲಾಗ ಕೋಮಲಾಂಗನ ಮುದದೊಳು
ಹೈಮವತಿ ನೋಡುತಿರೆ ಮಹಲಿಂಗನೆಂದೆಂಬ
ನಾಮಕರಣಂಗೈದು ಭೂತಳದಿ ನೀಂ ಪೋಗಿ
ತಾಮಸರ ಪರಿಹರಿಸಿ ಮದ್ಭಕ್ತರನು ಪೊರೆದು ಚರಲೀಲೆಯಂ ನಟಿಪುದು ೪೧

ಜೈನಚಾರ್ವಾಕಮಾಯಾವಾದಿಗಳ ಕುಹಕ
ಮಾನಮಂ ಮುರಿದು ಮನ್ಮಾನಸವು ಸಮ್ಮುದವ
ನಾನುವಂತಸವು ಗುರುಲಿಂಗಜಂಗಮಮಹಿಮೆಗಳ ತೋರುತಾ ಲೋಕದೊಳ್
ಭೂನಾಥರಿಂ ಪೂಜ್ಯನಾಗಿರುವುದೆಲೆ ದೇವ
ದಾನವನರಾನಿಮಿಷರೆನ್ನಾಜ್ಞೆಯೊಳಗಿಹರು
ಆನಿರ್ಪೆ ನಿನ್ನಾಜ್ಞೆಯೊಳಗೆಂದು ಬಿನ್ನೈಸೆ ಮಹಲಿಂಗನಿಂತೆಂದನು ೪೨

ಕರ್ಮಸಂಕುಲದ ಘನ ಪೆರ್ಮೆಯಿಂದೆಡೆವಿಡದ
ಧರ್ಮದಾಗರವೆನಿಪ ಕರ್ಮಿಗಳು ಬಾಳುತಿಹ
ಧರ್ಮಿಗಳ ಕಂಡು ನಿಂದಿಸುವ ದುರ್ಮದರ ಜಗವೆನಗೇಕೆ ಗಂಗಾಧರ
ಶರ್ಮದಪ್ರದಧರ್ಮನಂತರಂಗವ ಬಿಟ್ಟು
ನಿರ್ಮಿಸಿಳೆಯೊಳು ಪೋಗಿ ಕೂರ್ಮೆಯಿಂದಿರಲಾರೆ
ಭರ್ಮಗಿರಿಧರ್ಮ ಚಿತ್ತೈಸೆಂದು ಬಿನ್ನೈಸೆ ಪರಮೇಶನಿಂತೆಂದನು ೪೩

ಜಲಜಾಪ್ತನಿದಿರಲ್ಲಿ ಘನ ತಿಮಿರದಟ್ಟುಳಿಯು
ಕಲಭಸಂಕುಳದಳ್ತಿ ವರಸಿಂಹನಿರ್ಪಲ್ಲಿ
ನೆಲೆಗೆಟ್ಟು ಪೋಪಂತೆ ನಿಮ್ಮಿದಿರೊಳಿರಬಲ್ಲರೇನಸಮ ಪಾಪಾತ್ಮರು
ಮಲಹರಾತ್ಮಕ ಮೂರ್ತಿ ತಂತುಪಟದಂತೆ ನಾಂ
ಒಲಿದಿರ್ಪೆ ಯೋಗಿ ಗುರುಲಿಂಗಜಂಗಮವಾಗಿ
ಒಳಿಕ ಸಂಶಯವಿಲ್ಲ ಪೋಗೆನಲು ಪ್ರಮಥರಿಗೆ ಶರಣೆಂದು ಬೀಳ್ಕೊಂಡನು ೪೪

ನಿರುಪಮ ನಿರಾಧಾರ ನಿರ್ಗುಣ ನಿಜಾನಂದ
ನಿರವಯ ನಿರಾತಂಕ ನಿರ್ಮಲ ನಿರಾಭಾರ
ನಿರಘ ನಿಃಶೂನ್ಯ ನಿರ್ನಾಮ ನಿರ್ಲಯ ನಿತ್ಯ ನಿಜಾರ್ತ ನಿರುಪಾಧಿಕ
ನಿರುತ ನಿಗಮಾಗಮಾಭೇದ್ಯ ಜಂಗಮನಾಥ
ಧರೆಯೊಳಗೆ ಚರಲೀಲೆಯಂ ಬೀರುತಂತ್ಯದೊಳ್
ಹರನೊಳಗೆ ಬೆರೆಯೆಂದು ಪ್ರಮಥಗಣ ಪರಸುತಂ ಬೀಳ್ಕೊಟ್ಟರಾ ಮಹಿಮನ ೪೫

ಇಂತಸಮನೇತ್ರನಾ ಬೆಸನದಿಂ ಕೈಲಾಸ
ದಿಂದಿಳಿದು ಬರಲಿತ್ತ ಅಂತಕಾಂತಕನತ್ತ
ನಂದೀಶ ಮುಖ್ಯ ಸತ್ಪ್ರಮಥ ಸಂಕುಲ ಮಧ್ಯದೊಳ್ ಸಂತಸಂ ಪೆರ್ಚಲು
ಕಂತುಮದಮರ್ದನ ಮಹಾಲಿಂಗ ಜಂಗಮದ
ನಂತ ಮಹಿಮೆಯ ಪೇಳುತಿರ್ದನಗಜಾತೆಯೊಳ್
ಸಂತತಂ ನೀವದನು ಭಕ್ತಿಪೂರ್ವಕದಿಂದೆ ಲಾಲಿಪುದು ಶಿವಭಕ್ತರು ೪೬

ಇದು ಬಸವಸುಕುಮಾರ ವಿರಚಿತದಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥ ಸಂಪದಗಳ
ಮದನಹರಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳನೀಗಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿರ್ಪರು ೪೬

ಅಂತು ಸಂಧಿ ೨ ಕ್ಕಂ ಪದ ೪೬ ಕ್ಕಂ
ಮಂಗಳಂ
ಶ್ರೀ

ಶ್ರೀ

# ಮೂರನೆಯ ಸಂಧಿ

ಸೂಚನೆ : ಭೂತಳದೊಳಿಹ ಪರಮ ಪುಣ್ಯಮಯ ಕ್ಷೇತ್ರಗಳ
ಜಾತಮಂ ನೋಡುತಲ್ಲಲ್ಲಿ ವರ ಲಿಂಗಗಳ
ವ್ರಾತಮಂ ನೆಲೆಗೊಳಿಸಿ ಮಹಲಿಂಗ ಬಳಿಕ ಗುರುಕಾರುಣ್ಯಮಂ ಪಡೆದನು

ಮಿತ್ರಾಬ್ಜಹವಿನೇತ್ರ ಸುತ್ರಾಮಸತ್ಪುತ್ರ
ಪತ್ರದಾಹಿಪಸೂತ್ರ ಗೋತ್ರ[೧]ಪುತ್ರ್ಯಾಸ್ಯಾಬ್ಜ
ಮಿತ್ರಮಂಡಲ ಕಂಜಪುತ್ರಕಂಪಾತ್ರಕರ ಉಪವನಂ ಚಿತ್ರಭಾನು
ಊತ್ರಕಾಷ್ಟಾಧಿಪತಿಮಿತ್ರ ವೃಷಪತ್ರವರ
ಪತ್ರಾಕ್ಷನುತಿಪಾತ್ರ ಚಿತ್ರ ಚಾರಿತ್ರ ಗುಣ
ಸತ್ರ ಮಂದಾಕಿನೀ ನೇತ್ರ ಚೆನವೀರೇಶ ಪಾಲಿಪುದು ತ್ರೈಲೋಕಮಂ ೧

ಲಾಲಿಸೆಲೆ ಗಿರಿಜಾತೆ ಮಹಲಿಂಗಜಂಗಮದ
ಲೀಲೆಯಂ ಪೇಳಲಸದಳಮೆನಗೆ ಬಳಿಕೊಂದು
ನಾಲಿಗೆಯನಾಂತ ನರಗೆಂತು ಪವಣಾದಪುದು ಭಾವಿಪೊಡೆ ಭೂತಳದೊಳು
ಕಾಲಕವರ್ಮಾರಣ್ಯದಾವಾಗ್ನಿಯೆಂದೆನಿಪ
ಶೀಲದಿಂದಾಚರಿಸುತಖಿಳದೇಶಂಗಳಸು
ಜಾಲಗಳ ಪಾಲಿಸುತ ಪರಮ ಸಂತಸದಿಂದೆ ಮೆರೆದಿರ್ದನೇನೆಂಬೆನು ೨

---

೧ ಸೂತ್ರಾ (ಕ. ಚ.)

ಸೋಮಧರನಾಜ್ಞೆಯಿಂ ಮಹಲಿಂಗಜಂಗಮಂ
ಹೇಮಾದ್ರಿಯಿಂದಿಳಿದು ಬರಲಾಗ ಭೂಕಾಂತೆ
ಪ್ರೇಮದಿಂದಡಿಗಡಿಗೆ ಪುಳಕಂಗಳಂ ತಾಳ್ದು ಧನ್ಯಳಾದೆನು ಎನುತಿರೆ
ಆ ಮಹಿಮನಾಗಮದ ಕಾಲಕ್ಕೆ ಕಲಿಯುಗದ
ತಾಮಸಂ ಬಿಟ್ಟು ಕೆಟ್ಟೋಡಿತ್ತು ಭರದಿಂದೆ
ಧಾಮನಿಧಿಯಂ ಕಂಡ ತಿಮಿರಮಂತಲಿದಂತೆ ನಿಮಿಷನೊಳಗೇನೆಂಬೆನು ೩

ಜೈನ ಚಾರ್ವಾಕ ಮಾಯಾವಾದಿ ಬೌದ್ಧರ ವಿ-
ತಾನ ಮೊದಲಾದಸವು ಕಲಿಯುಗದ ಕರ್ಮಿಗಳು
ಮಾನಗೇಡಿಗಳಾಗಿ ಮದವಳಿದು ತಮತಮಗೆ ಮೌನತ್ವದಿಂದಿರ್ದರು
ಮಾನಿತೋತ್ತಮಭಕ್ತಮಾಹೇಶ್ವರಾವಳಿಯ
ಮಾನಸದ ವಾಂಛಿತವು ಕೈಸಾರ್ದುದಾಕ್ಷಣವೊ
ಳೇನೆಂದು ಬಣ್ಣಿಸುವೆನಾ ಮಹಿಮನಾಗಮದ ಕಾಲಕ್ಕೆ ಭೂತಳದೊಳು ೪

ಗೌಳದ್ರಾವಿಡ ಮಗಧ ಕುಂತಳಂ ಕಾಶ್ಮೀರ
ಚೋಳ ವಂಗ ಕಳಿಂಗ ಹಮ್ಮೀರ ತೆಲಗ ನೇ-
ಪಾಳ ಗುರ್ಜರ ಸಿಂಧು ಗಾಂಧಾರ ಖರ್ಪರಂ ಮಾತಂಗ ಕಾಂಭೋಜವು
ಮಾಳವಂ ಮಲಯ ಘೋಟಿಕ ಲಾಟ ಬರ್ಬರಂ
ಸೀಲವಂ ಬಂಗಾಳ ಕಲಿತ ವಿಂಧ್ಯ ಕರಾಟ
ಚೋಳ ಪಾಂಚಾಲಾದಿ ದೇಶಪರ್ಯಾಟನವ ಮಹಲಿಂಗನೊಪ್ಪಿರ್ದನು ೫

ವರ ಕಾಶಿ ರಾಮೇಶ್ವರಂ ವಿಂಧ್ಯ ಮಾಧವಂ
ನಿರುತ ಹೈಮಾಚಲಂ ನೈಮಿಷಾರಣ್ಯ ಶ್ರೀ
ಗಿರಿ ದಾರುಕಾಕ್ಷೇತ್ರಮಿಂದ್ರಕೀಲಾಚಲಂ ಅರುಣಾದ್ರಿ ಶಿವಗಂಗೆಯ
ಪರಮ ಪಂಚಕ್ಷೇತ್ರ ಮಧುರಾಪುರಂ ಕಂಚಿ
ಸ್ಥಿರಕಾಳಹಸ್ತಿ ಗೋಕರ್ಣಮುಳಿವ್ಯಾದ್ಯಸವು
ಶರಣಾವಾಸಗಳ ನೋಡುತ್ತ ಮಹಲಿಂಗ ಸಂಚರಿಸುತಿರುತಿರ್ದನು ೬

ಸುರಗಂಗೆ ಯಮುನಾ ಸರಸ್ವತಿಯು ಭೀಮರತಿ
ನರುಮದೆಯು ಗೋದೆ ನಿರುಪಮಕೃಷ್ಣೆ ಕಾವೇರಿ
ವರ ವರದೆ ಗಾರ್ಘ್ಯೆಘನ ಮಲಪ್ರಹರಿ ತುಂಗೆ ಮುಂತಾದಸಮ ನದ್ಯಂಗಳ
ಪರಿಕರಂಗಳನಂಘ್ರಿಸ್ಪರ್ಶನದ ಮಾತ್ರದಿಂ
ಕರುಣದಿಂ ಪಾವನಂಗೈವುತ್ತ ಮಹಲಿಂಗ
ಹರುಷದಿಂ ಸಂಚರಿಸುತಿರುತಿರ್ದ ಗಿರಿಜಾತೆ ಲಾಲಿಪ್ಪುದು ಸಂತಸದೊಳು ೭

ಆವಾವ ದೇಶದೊಳಗೆಡೆವಿಡದೆ ರಾಜಿಸುವ
ಪಾವನಾಮಲಪುಣ್ಯ ಕ್ಷೇತ್ರಗಳ ಮಧ್ಯದೊಳ್
ಠೀವಿ ಕಂಗೊಳಿಸುತಿಹ ಪರಮ ತೀರ್ಥಂಗಳೊಳ್ ಮಿಂದಲ್ಲಿ ಪರಿಣಾಮದಿಂ
ಭಾವಿಸುತೆ ಜಪತಪಂಗಳನಿರದೆ ವಿವರಿಸುತ
ಭಾವಜಾಂತಕರೂಪ ಮಹಲಿಂಗಜಂಗಮಂ
ಭೂವಲಯಸದ್ಭಕ್ತರನು ಬಿಡದೆ ಪಾಲಿಸುತ ಮೆರೆದಿರ್ದನೇನೆಂಬೆನು ೮

ಅಲ್ಲಲ್ಲಿ ತಪವನಾಚರಿಸುತಾಕ್ಷಣದೊಳಗೆ
ಅಲ್ಲಲ್ಲಿ ಪರಮ ಶಿವಲಿಂಗಗಳ ನೆಲೆಗೊಳಿಸು
ಕಲ್ಲಲ್ಲಿ ಘನ ಮಹಿಮೆಗಳ ಬೀರುತೆಡೆವಿಡದೆ ಛಪ್ಪನ್ನ ದೇಶಂಗಳೊಳ್
ಸಲ್ಲಲಿತ ಶಿವಭಕ್ತ ಸಂಕುಳವ ಪಾಲಿಸುತ
ಖುಲ್ಲರಂ ನೆಲೆಗೆಡಿಸಿ ಕುವಲಯದ ಮಧ್ಯದೊಳ್
ಎಲ್ಲಿ ನೋಡಿದಡಲ್ಲಿ ತಾನಾಗಿ ಮೆರೆದಿರ್ದ ಗಿರಿಜಾತೆ ಲಾಲಿಸುವದು ೯

ಇಂತಖಿಳ ದೇಶಗಳ ಪಾವನಂಗೈಯುತ್ತ
ಸಂತತಂ ಮಹಲಿಂಗ ದೇಶಪರ್ಯಾಟನದಿ
ಮುಂತೆಬರೆ ಗಾರ್ಘ್ಯತಟಿನೀತಟದಿ [1]ರಾಜಿಸುವ ಕುರುಶೈಲಮಂ ಕಾಣುತ
ಸಿಂತೆ ಪಾಂಡವರಿರ್ದ ತಾಣವಿದುಯೆಂದು ಘನ
ಸಂತಸದಿ ನಿಂದಲ್ಲಿ ತಪವನಾಚರಿಸುತ್ತ
ಚಿಂತಿತಾರ್ಥದ ತಟೇಶ್ವರನೆಂಬ ಲಿಂಗಮಂ ನೆಲೆಗೊಳಿಸುತಾ ತಾಣದೊಳ್ ೧೦

---

೧ ರಂ (ಜ.)

ತನ್ನಗದ ತಟವೊಳಿಹ ಗೋರಕ್ಷಪಟ್ಟಣದ
ಜಿನ್ನನಾಲಯದಲ್ಲಿ ಗೋಳಕೇಶ್ವರನೆಂಬ
ಚೆನ್ನ ಶಿವಲಿಂಗಮಂ ನೆಲೆಗೊಳಿಸಿ ಜಗವರಿಯೆ ತನ್ನಸಮವರ ನೇತ್ರದಿ
ನನ್ನಿಯಿಂ ರಾಜವೃಕ್ಷವ ತೋರಿ ಸಪ್ತಕ್ತ್ರ
ರಂ ಮುದದಿ ಪಾಲಿಸುತ ಮಹಲಿಂಗಜಂಗಮಂ
ಬಿನ್ನಣದ ಮಹಿಮೆಗಳ ಬೀರುತ್ತ ಬಂದನಲ್ಲಿಂ ದಂಡಕಾರಣ್ಯಕೆ ೧೧

ದಂಡಧರ ಮದಮ[೧][ತ್ಸರಕೆ][೧] ದಂಡ ವರಪಂಚ
ರುಂಡ ಕರ್ಮಾಳಿಘನತಿಮಿರಮಾರ್ತಂಡ ಮುನಿ
ಮಂಡಲಾಶ್ರಿತ ದಂಡ ಕಾರಣ್ಯವನು ಕಂಡು ಮಹಲಿಂಗ ಚರವರ್ಯನು
ಖಂಡಶಶಿಧರನಂಘ್ರಿಪುಂಡರೀಕವ ಭಜಿಸಿ
ಪಾಂಡುಕುಮಾರನವ ಭೀಮ ತಾನಿಲ್ಲಿ ವರ
ಚಂಡಗದೆಯಂ ಪಡೆದನೆಂದೆನುತ ಮನದೊಳಗೆ ಧ್ಯಾನಿಸುತೆ ಸಂತಸದೊಳು ೧೨

ಮುನಿಕುಲಲಲಾಮ ಮಾರ್ಕಂಡೇಯನೆಡೆವಿಡದೆ
ಮನಸಿಜಾಂತಕನಂಘ್ರಿಯಂ ಭಜಿಸಿ ಭಕ್ತಿಯಿಂ
ದಿನಪತನಯನ ಬಾಧೆಯಂ ಗೆಲ್ದು ಮೃತ್ಯುವಿನ ಸದೆಬಡೆದು ಸಂತಸದೊಳು
ವಿನುತ ಪರಮಾಯುವನು ನೆರೆ ಪಡೆದನೀವನದೊ
ಳೆನುತ ಮಹಲಿಂಗಜಂಗಮನಲ್ಲಿ ಬಿನದದಿಂ
ಮನವೊಲಿದು ಪಾವನಾಮಲ ತಾಣದೊಳ್ ನಿಂದು ತಪವನೆಸಗುತ್ತಿರ್ದನು ೧೩

ಕಂದಮೂಲಾದಿಗಳ ಸೇವಿಸುತ ಪಲವು ದಿನ
ಸಂದು ಮಾರ್ಕಂಡೇಯನಾಶ್ರಮದಿ ವರ ತಪವ
ಚಂದದಿಂ ನಿರ್ವಹಿಸುತ ಬಳಿಕೊಂದು ವಾಸರದಿ ತನುಶೋಷಣೆಯ ಶ್ರಮವನು
ಪೊಂದಿ ಶಿವಯೋಗನಿದ್ರಾಮುದ್ರಪರವಶದಿ
ಕುಂದದಮಲಾನಂದ ಮಹಲಿಂಗನಿರಲಂದು
ಬಂದು ಗಂಗಾಧರಂ ನಿಜರೂಪಮಂ ತೋರಿ ಸ್ವಪ್ನದೊಳ್ ಸೂಚಿಸಿದನು ೧೪

---

೧ ತ್ಯಭವೆ (ಕ. ಚ.)

ಎಲೆ ಮಹಿಮ ಮಹಲಿಂಗ ಜಂಗಮವೆ ಚಿತ್ತೈಸು
ಬಳಲದಿರು ಘನತಪವನಾಚರಿಸಿ ಧಾತ್ರಿಯೊಳ್
ಮಲಹರಾತ್ಮಕಮೂರ್ತಿ ಮದ್ರೂಪ ಶಿವಯೋಗಿ ಗುರುಲಿಂಗಜಗದಾರ್ಯನು
ಒಲವಿನಿಂ ಡಪಳಾಪುರೀ ಕ್ಷೇತ್ರ ಮಧ್ಯದೊಳ್
ನೆಲೆಸಿಪ್ಪನಾತನ ಸುಕರುಣಮಂ ಪಡೆಯೆಂದು
ಜಲಜಾಕ್ಷಶರ ಪೇಳ್ದು ಬಯಲಾಗಲೆ[೧]ಳ್ಚತ್ತು ಸುಜ್ಞಾನದಿಂದರಿವುತ ೧೫

ಮುನ್ನ ಕೈಲಾಸದಾಸ್ಥಾನದೊಳ್ ಪೇಳ್ದಂತೆ
ಪನ್ನಗಧರಂ ಬಂದು ಸ್ವಪ್ನದೊಳ್ ಸೂಚಿಸುತ
[ಮುನ್ನ]ಬಯಲಾದನಿದು ಸತ್ಯವೆಂದೆನುತ ನಿಶ್ಚಯಿಸು[ತಂ] ಮಾನಸದೊಳು
ಇನ್ನು ಶ್ರೀ ಗುರುವಿನಂ ಕಂಡು ತತ್ಕರುಣಮಂ
ಸನ್ನಿಯಿಂ ಪಡೆಯುವುದೆ ಸನ್ಮಾರ್ಗ ಭೂತಳದಿ
ಬಿನ್ನಣದ ತಪವದಿನ್ನೇಕೆನುತ ದಂಡಕಾರಣ್ಯಮಂ ಬಿಟ್ಟಾಕ್ಷಣಂ ೧೬

ನಿಲ್ಲದಡಿಯಿಡುತ ಮಹಲಿಂಗ ಜಂಗಮನಾಥ
ಸಲ್ಲಲಿತ ಯೋಗಿ ಗುರುಲಿಂಗ ಮಹಿಮನ ಪಾದ
ಪಲ್ಲವಂ ಕಾಣಬೇಕೆಂಬ[ಧಿಕ]ತವಕದಿಂದಾ ದಂಡಕಾರಣ್ಯದ
ಸಲ್ಲಲಿತ ಪೂರ್ವದಿಗ್ಭಾಗದೊಳಗೆಡೆವಿಡದೆ
ಎಲ್ಲಾಗಳುಂ ಮೆರೆವ ಡಪಳಾಪುರೀಕ್ಷೇತ್ರ
ಕುಲ್ಲಾಸದಿಂದಿರದೆ ಬರುತಿರ್ದನತ್ತಲಿತ್ತೇನೆಂಬೆ ಜಗಮರಿಯಲು ೧೭

ಯೋಗಿ ಗುರುಲಿಂಗ ಜಂಗಮವರ್ಯ ಪರಮಶಿವ
ಯೋಗನಿದ್ರಾಸಕ್ತನಾಗಿರಲುಮದರಂತೆ
ಶ್ರೀಗಿರಿಸುತಾಲಪನಚಂದ್ರಬಿಂಬಚಕೋರ ಬಂದಾಗ ಸೂಚಿಸಿದನು
ಭೂಗಗನಪಾತಾಳಸಂಪೂಜ್ಯ ಮಹಲಿಂಗ
ಯೋಗಿವರಶ್ರೀಕರುಣಮಂ ಪಡೆಯಲೋಸುಗಂ
ರಾಗದಿಂ ಬರ್ಪನಾತನ ಪಾಲಿಸೆಂದೆನುತ ಪೇಳ್ದು ನಿರ್ವಯಲಾದನು ೧೮

೧ ಲೀಳುತ್ತ (ಕೆ.)

ಶಿವಯೋಗನಿದ್ರೆಯಿಂದೇಳುತ್ತ ಗುರುವರಂ
ಸುವಿವೇಕದಿಂದರಿದು ಲಿಂಗದೊಳಗಾ ಮಹಿಮ
ನವಿರಳಾಕಾರವನು ಕಾಣುತ್ತ ಶಿವ ಪೇಳ್ದ ಸೂಚನೆಯು ನಿಜವಾದುದು
ಭವಮರಣಹರಶೀಲ ಬರ್ಪನೆಂದೆನುತಾಗ
ಪ್ರವಿಮಲಾನಂದದಿಂದಿರಲಿತ್ತ ತವಕದಿಂ
ಕುವಲಯಮಹಾಪೂಜ್ಯ ಬಂದು ತನ್ನಗರವನು ಒಳಪೊಕ್ಕು ಸಂಭ್ರಮದಲಿ ೧೯

ಶುದ್ಧ ಷಟ್ಸ್ಥಲಬ್ರಹ್ಮ ಚೆನ್ನಬಸವೇಶನಿಂ
ಸಿದ್ಧಪತಿ ಇಷ್ಟಲಿಂಗೋಪದೇಶವನಂದು
ಸಿದ್ಧವಾಗಿಯೆ ಪಡೆಯಬೇಕೆಂದು ಪ್ರಭು ಪೇಳೆ ಕಲ್ಯಾಣಕೈತಂದವೊಲ್
ಬದ್ಧ ಭವಮರಣಹರ ಯೋಗಿ ಗುರುಲಿಂಗ ವರ
ಉದ್ಧತ ಸುಕರುಣಮುಂಪಡೆಯೆಂದು ಶಿವನೊರೆಯೆ
ಶ್ರದ್ಧೆಯಿಂ ಬಂದ ಡಪಳಾಪುರಕೆ ಮಹಲಿಂಗಮುನಿವರ್ಯ ಸಂತೋಷದಿಂ ೨೦

ಬಂದು ಕೈವಲ್ಯಕಾಂತಾರಮಣನಾಶ್ರಮವ
ನಂದು ಒಳಹೊಕ್ಕು ತದ್ಗುರುವರನ ಪನ್ನಳಿನ
ದ್ವಂದ್ವಗಳಿಗೆರಗಲ್ಕೆ ಕಾರುಣ್ಯದಿಂದವರ ಯೋಗಿಗುರುಲಿಂಗಾರ್ಯನು
ಮುಂದುವರಿಧಾ ಮಹಿಮನಂ ಬಾಚಿದಪ್ಪಿ ಶರ
ಣೆಂದು ಕರಕಂಜಮಂ ಪಿಡಿದೊಡನೆ ಮನ್ನಿಸುತ
ಸಂದ ಮೃಗಪೀಠದೊಳ್ಮೂರ್ತಿಗೊಂಡೀರ್ವರುಂ ಪರಮ ಸಂತಸದಿಂದಲಿ ೨೧

ಪರಮೇಶ ಪೇಳ್ದಸವು ಸ್ವಪ್ನಸೂಚನೆಗಳಂ
ಹರುಷದಿಂದರುಹುತ್ತ ತಮ್ಮೊಳಗೆ ತಾವಂದು
ವರಯೋಗಿ ಗುರುಲಿಂಗ ಮಹಲಿಂಗ ಜಂಗಮರ್ ಶಿವನಾಜ್ಞೆಯೆಂದೆನುತಲಿ
ಸರಸಾನುಭವಗೋಷ್ಠಿಯೊಳಗಾಳುತೇಳುತ್ತ
ನಿರುತ ಬ್ರಹ್ಮಾನಂದಶರಧಿಯೊಳಗೋಲಾಡಿ
ಮೆರೆದಿರ್ದರಾ ಮಹಿಮರಿಂಗಿತವನೇನೆಂದು ಬಣ್ಣಿಸುವೆನಗಜಾತೆಯೇ ೨೨

ಬಳಿಕ ಸ್ನಾನಂಗೈದು ಘನ ಮಹಿಮರೀರ್ವರುಂ
ಮಲಹರಾತ್ಮನ ಪೂಜೆಯಂ ಬಿಡದೆ ನಿರ್ವಿಸುತ
ಒಲವಿನಿಂ ತೀರ್ಥಪ್ರಸಾದಗಳ ನೆರೆ ಸವಿದು ತಣಿಪುತ್ತಲಾನಂದದಿ
ಕಲಿತ ಪರಮಾನುಭವ ಮಂಟಪದ ಮಧ್ಯದೊಳು
ನೆಲೆಗೊಂಡು ನೈಜದಿಂ ಪರಮಾರ್ಥಗೀತೆಗಳ
ಬಳಿವಿಡಿದು ಯೋಗಿ ಗುರುಲಿಂಗೇಶ ಪೇಳುತಿರೆ ಕೇಳುತ್ತ ಮಹಲಿಂಗನು ೨೩

ನಲವಾಂತು ಮನದೊಳಗೆ ಭಕ್ತಿಯಿಂ ಬಿನ್ನೈಸು
ಕೆಲೆ ದೇವ ಯೋಗಿ ಗುರುಲಿಂಗ ಜಗದಾರಾಧ್ಯ
ಕಲಧೌತಶೈಲಾಗ್ರಭಾಗದೊಳ್ ಶಿವ ಪೇಳ್ದ ಸೂಚನೆಯು ನಿಜವಾದುದು
ಬಳಿಕೀಗ ನೆನೆವೆಣಿಕೆ ಕೈಸಾರ್ದುದಿಳೆಯೊಳಗೆ
ಚೆಲುವಾಯ್ತು ತ್ವತ್ಪಾದದರ್ಶನಂ ಸಿದ್ಧಿಸಿತು
ಕಲಿತ ಗುರುವರ್ಣಗಳ ಮಹಿಮೆಯಂ ನೆರೆ ಪೇಳ್ವು ಪಾಲಿಪುದು ನೀವೆಂದೆನೆ ೨೪

ಆನಂದಜಲಧಿಯೊಳಗಾಳುತ್ತ ಯೋಗಿವರ
ಮಾನನಿಧಿ ಮಹಲಿಂಗ ಮಹಿಮನಂ ಮನ್ನಿಸುತ
ಲಾನತಾಮರಭೂಜ ಸರ್ವಜ್ಞಮೂರ್ತಿ ನಿಮಗೇನೆಂದು ತನ್ಮಹಿಮೆಯಂ
ಕೂನಿಟ್ಟು ಕೇಳಬೇಕೆಂಬುವ ಸುಲೀಲೆ ಮ
ನ್ಮಾನಸಾಂಭೋಜಕ್ಕೆ ನಲವಿತ್ತುದೆನೆ ದೇವ
ಮೌನಿವರ ಕೇಳೆಂದು ಕಾರುಣ್ಯದಿಂದಿರವೆ ಸೂಚಿಸಿದನೇನೆಂಬೆನು ೨೫

ಗುರುಲಿಂಗಚರಪಾದತೀರ್ಥಗಳ ನೆರೆನಂಬಿ
ವರಭಸಿತರುದ್ರಾಕ್ಷಿಮಂತ್ರಗಳು ಮೊದಲಾದ
ಪರಮಾಷ್ಟವರ್ಣಗಳ ಮಹಿಮೆಗಳ ನೆರೆ ನಂಬಿ ಧನ್ಯರಾದರ ಚರಿತಮಂ
ಪರಿವಿಡಿದು ಯೋಗಿ ಗುರುಲಿಂಗ ಜಗದಾರಾಧ್ಯ
ಕರುಣದಿಂ ಪೇಳುತಿರೆ ಮಹಲಿಂಗ ಮುನಿವರಂ
ಹರುಷದಿಂ ಚಿತ್ತೈಸುತಿರ್ದನೆಲೆ ಗಿರಿಜಾತೆ ಕೇಳೆಂದನಾ ಶಂಕರಂ ೨೬



ಯೋಗಿ ಶ್ರೀ ಗುರುಲಿಂಗಾರ್ಯರ ತಪೋಭೂಮಿ (ಧಪಳಾಪುರ)
(ಮಹಲಿಂಗಮುನಿನಾಥನು ಗುರುಕಾರುಣ್ಯವಡೆದ ಸ್ಥಳ)

ಧರೆಯೊಳಗೆ ದುಷ್ಕುಲಜರಾದ ಮುನಿಗಳು ಬಿಡದೆ
ಪರಮ ಗುರುವಾದ್ಯಷ್ಟವರ್ಣಗಳ ಸರಿ ನಂಬಿ
ಪರಿಪೂತರಾಗಿ ತ್ರೈಭುವನ ಪೂಜಿತರಾದರೇನೆಂದು ಬಣ್ಣಿಸುವೆನು
ವರ ವಸಿಷ್ಠಮುನೀಶ ಸರ್ವವಲ್ಲಭೆಗೆ ಘನ
ತರುಳನಾಗಂದುದಿಸಿ ಶೈವದುಪದೇಶದಿಂ
ದುರಿತಮಾರ್ಗವನಳಿದು ಸರ್ವ ಮುನಿವರನಾಗಿ ನೆರೆ ಮೆರೆದನೀ ಜಗದೊಳು ೨೭

ಮೊಚ್ಚಿಗರ ಕುಲದಲ್ಲಿ ಸಂಭೂತನಾದಸವು
ನಿಶ್ಚಲದ ಪರಮವಿಶ್ವಾಮಿತ್ರಮುನಿವರ್ಯ
ಬಚ್ಚಬಯಲಾದ ಪರಬ್ರಹ್ಮೋಪದೇಶದಿಂ ತ್ರೈಭುವನಮರಿವಂದದಿ
ಮುಚ್ಚರವನೀಗುತ್ತ ಮಹರಾಜ ಋಷಿಯಾದ
ನಚ್ಚರಿಯನೇನೆಂದು ಬಣ್ಣಿಸುವೆ ಕುವಲಯದಿ
ಸಚ್ಚರಿತ ಮಹಲಿಂಗ ಜಂಗಮವೆ ಕೇಳೆನುತೆ ವರ ಯೋಗಿ ಸೂಚಿಸಿದನು ೨೮

ಗೌತಮಮುನೀಶ ಪಾಂಚಾಲಕುಲದಲಿ ಜನಿಸಿ
ಪೂತ ಪರಬ್ರಹ್ಮೋಪದೇಶದಿಂ ಜಗಮರಿಯೆ
ಖ್ಯಾತಮುನಿಜಾತನೊಳ್ ಸಂಪೂಜ್ಯನಾಗುತ್ತ ನೆರೆ ಮೆರೆದನಾ ಮಹಿಮನು
ಮಾತಂಗವಂಶದೊಳ್ ಜನಿಸಿದಾಸಾಂಖ್ಯಮುನಿ
ಪ್ರೀತಿಯಿಂ ಶೈವೋಪದೇಶಮಂ ನೆರೆ ಪಡೆದು
ಜಾತಕರ್ಮವ ಮೀರಿ ಘಸಿತರುದ್ರಾಕ್ಷಿಗಳ ತಳೆದು ಪಾವನನಾದನು ೨೯

ಕಂಚುಗಾರರ ಕುಲದಿ ಜನ್ಮಿಸಿದ ರೋಮಜನು
ಪಂಚಾಕ್ಷರಿಯ ಪರಮ ಮಂತ್ರೋಪದೇಶದಿಂ
ಸಂಚಿತಾಗಾಮಿ ಪ್ರಾರಬ್ಧಗಳನತಿಗಳೆದು ತ್ರೈಭುವನಮರಿವಂದದಿ
ಅಂಚಿತ ಮಹಾಪ್ರಳಯಕೊಂದೊಂದು ರೋಮಗಳ
ಸಂಚಯಗಳುದುರಿದವು ಬಳಿಕ ಪ್ರಳಯಂಗಳಿಗೆ
ವಂಚಿಸದೆ ಪರಮ ಪಂಡಿತನಾದನೆಲೆ ದೇವ ಮಹಲಿಂಗ ಲಾಲಿಸುವದು ೩೦

ಬೇಡನಹ ವಾಲ್ಮೀಕಿ ಶೈವಲಾಂಛನಗಳಿಂ
ಕೂಡಿ ವಿಪ್ರಕುಲಕ್ಕೆ ವರನಾದ ಜಗಮರಿಯೆ
ಬೇಡಾದ ಶಿವನಸನ್ಮಾರ್ಗಕ್ಕೆ ತನ್ಮಹಿಮೆ ಭಾವಿಸಿಪತೆ ಭೂತಳದೊಳು
ರೂಢಿಯೊಳು ಕೌಂಡಲ್ಯಮುನಿ ನಾವಿದಂ ಬಳಿಕ
ಗಾಡಿಯಿಂ ಭಸಿತರುದ್ರಾಕ್ಷಿಗಳ ನೆರೆ ತಳೆದು
ಗೂಢಪದಕಂಕಣನ ಭಜಿಸುತ್ತ ಲೋಕದೊಳು ಮನುಬ್ರಹ್ಮ ತಾನಾದನು ೩೧

ಭಾರದ್ವಜಂ ಬಡಗಿಮಗನಾಗಿ ಸಂಜನಿಸಿ
ಮಾರಹರನಂಘ್ರಿಯಂ ಭಜಿಸುತ್ತ ಲೋಕದೊಳು
ಸಾರ ಮಂತ್ರೋಪದೇಶವನಾಂತು ಸಕಲ ವರ್ಣಂಗಳಿಗೆ ಗುರುವಾದನು
ನಾರದಮುನೀಶ ದಾಸಿಯ ಗರ್ಭದೊಳಗೊಗೆದು
ಗೌರಿಯರಸನ ಪಾದಮಂ ನಂಬಿ ಭೂತಳದ
ಸಾರಶ್ರೋತ್ರಿಯರ ಗುರುವಾದನೆಲೆ ಮಹಲಿಂಗ ಜಂಗಮನೆ ಲಾಲಿಸುವುದು ೩೨

ಮಾಂಡವ್ಯಮುನಿವರಂ ಮಾದಿಗಂ ಭಾವಿಪೊಡೆ
ಚಂಡಿಕಾವರನ ಲಾಂಛನಗಳಂ ತಳೆದು ಭೂ
ಮಂಡಲದಿ ಸಂಪೂಜ್ಯನಾಗುತ್ತೆ ಸರ್ವ ಗೋತ್ರಂಗಳಿಗೆ ವರನಾದನು
ಪಂಡಿತೋತ್ತಮ ವ್ಯಾಸ ಕಬ್ಬಿಲಿಗನೆಂದೆನಿಸಿ
ಖಂಡಶಶಿಧರನಂಘ್ರಿಗಳ ಕೀರ್ತನಂಗೈದು
ಮಂಡಿತ ಮಹಾಭಸ್ಮರುದ್ರಾಕ್ಷಿಗಳ ತಳೆದು ಮುನಿಜಾಲವರನಾದನು ೩೩

ಇಂತಖಿಳ ಋಷಿವರರು ಬ್ರಹ್ಮೋಪದೇಶದಿಂ
ಸಂತತಂ ಶಿವಲಿಂಗಮಂ ಭಜಿಸಿ ಧಾತ್ರಿಯೊಳ್
ಸಂತಸದಿ ಭಸ್ಮರುದ್ರಾಕ್ಷಿಗಳನಂಗದೊಳ್ ನೆರೆ ತಳೆದು ಭಯಭಕ್ತಿಯಿಂ
ಕಂತುಹರನಂಘ್ರಿಜಲಶೇಷನಿರ್ಮಾಲ್ಯಗಳ
ಸಂತತಿಯನಾಂತು ಸೇವಿಸಿ ಸಕಲ ಲೋಕದೊಳ್
ಭ್ರಾಂತ ಮಾಯಾವಿಡಂಬನರಾಗಿ ಮೆರೆವಿರ್ದರೆಲೆ ದೇವ ಮಹಲಿಂಗನೇ ೩೪



ಯೋಗಿ ಶ್ರೀ ಗುರುಲಿಂಗಾರ್ಯರ ಗದ್ದುಗೆ

ನವಮುಗ್ಧ ನವಚೋಳ ಬಲ್ಲಾಳರುಂ ಬಿಡದೆ
ಶಿವಲಿಂಗಮುಂ ಭಜಿಸಿ ಶೈವ ಸನ್ಮಾರ್ಗದಿಂ
ಕುವಲಯದಿ ಸತ್ಕೀರ್ತಿಯುತರಾಗಿ ಕೈಲಾಸಮುಂ ಸಾರ್ದರಂತಲ್ಲದೆ
ವಿವಿಧಾನುರಾಗದಿಂ ವೀರಶೈವದಿ ಕೆಲರು
ಭವಮರಣಹರಗುರುವಿನ ಮುಖಕರುಣವನಾಂತು
ಪ್ರವಿಮಲಾಷ್ಟಾವರ್ಣಗಳ ಸಂತತಂ ನಂಬಿ ಮುಕ್ತರಾದರು ಜಗದೊಳು ೩೫

ಗುರುವಿನಿಂ ಲಿಂಗಮುಂ ಲಿಂಗದಿಂ ಜಂಗಮುವ
ಪರಿವಿಡಿಯೊಳರಿದು ಬ್ರಹ್ಮೋಪದೇಶವನಾಂತು
ಪರಮಪಾವನರಾಗಿ ಮೆರೆವುದೇ ಸನ್ಮಾರ್ಗವೆಲೆ ದೇವ ಮಹಲಿಂಗನೇ
ಹರುಷದಿಂ ಕೇಳೆಂದು ಯೋಗಿ ಗುರುಲಿಂಗವಿಭು
ಕರುಣದಿಂ ಪೇಳಲ್ಕೆ ಲಾಲಿಸುತ ಭಕ್ತಿಯಿಂ
ಕರಕಂಜಗಳ ಮುಗಿವುತೆಲೆ ಮಹಿಮ [ಗುರುನಾಥ ಸಕಲಕಾದಿಯು ನೀನಲಾ] ೩೬

ಅದರಿಂದ ತ್ವತ್ಕರುಣಮುಂ ಪಡೆವುದೇ ವಿಹಿತ
ಸದಮಲ ಮಹಾ ಇಷ್ಟಲಿಂಗ ಸತ್ಕಳೆಗಳಂ
ಮುದದಿಂದೆ ಪರಕಿಸುವದೆಂದೆನುತೆ ತೋರಲ್ಕೆ ಗುರುನಾಥನೀಕ್ಷಿಸುತಲಿ
ಒದವಿರ್ದ ಕರುಣದಿಂ ಮಹಲಿಂಗ ಜಂಗಮದ
ವದನಾರವಿಂದಮುಂ ನೋಡುತೆಲೆ ಮಹಿಮಾಂಕ
ಇದು ತೇಜದೊಬ್ಬುಳಿಯು ಕ್ಷೀರದೊಳ್ ಸವಿಯನರಸುವುದೆ ಈ ಭೂತಳದೊಳು ೩೭

ಅನ್ನದೊಳು ರುಚಿಯನರಸುವದುಂಟು ಲೋಕದೊಳ್
ನನ್ನಿಯಿಂ ರುಚಿಯೊಳಗೆ ಪರಕಿಸುವದೇನಿಹುದು
ಬಿನ್ನಣದ ತೇಜದಿಂ ಥಳಥಳಿಪ ಲಿಂಗದೊಳ್ ಚಿತ್ಕಳೆಗಳೇಂ ನೋಳ್ಪುದು
ಚೆನ್ನಾಗಿ ಕಾಣುವದು ಮಲನಾಶ ಮಹಲಿಂಗ
ಮುನ್ನ ಹರನಾಜ್ಞೆಯಾದಂತಿಹುದು ನಿಜವೆಂದು
ಮನ್ನಿಸುತ ಮಂತ್ರೋಪದೇಶಮುಂ ಲಾಲಿಸುತ ಯೋಗಿ ಗುರುಲಿಂಗಾರ್ಯನು ೩೮

ಕರುಣಪ್ರಸಾದದಿಂ ತಣಿಸುತ್ತ ಪ್ರೇಮದಿಂ
ಪರಮಾನುಭವಗೀತೆಗಳನಿರದೆ ಪೇಳುತ್ತ
ನಿರುತ ಬ್ರಹ್ಮಾನಂದದಿಂ ಬೆರೆದು ಸಂತತಂ ಧವಳಾಪುರೀ ಕ್ಷೇತ್ರದೋಳ್
ಶರಣಜನ ಸಂಸೇವ್ಯರಾಗಿರ್ಪರಗಜಾತೆ
ಪರಿಕಿಸುವರಾರವರ ಘನತೆಯನು ಲೋಕದೊಳು
ಹರುಷದಿಂ ಕೇಳೆಂದು ನಂದಿಮುಖ ಪ್ರಮಥರಿಗೆ ಶಿವ ಪೇಳ್ದ ಕಾರುಣ್ಯದಿ ೩೯

ಇದ: ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳಂ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರಕೃಪೆಯಿಂತು ಬಾಳ್ದು ಕಡೆಗಾಲದೊಳ್ ಮೋಕ್ಷಮಾರ್ಗವ
ನೆಯ್ದುವರ್ ೪೦

ಅಂತು ಸಂಧಿ ೩ ಕ್ಕಂ ಪದ ೧೨೩ ಕ್ಕಂ
ಮಂಗಳಂ
ಶ್ರೀ

ಶ್ರೀ

# ನಾಲ್ಕನೆಯ ಸಂಧಿ

**ಸೂಚನೆ :** ಯೋಗಿ ಗುರುವರ್ಯನಿಂ ಬೀಳ್ಕೊಂಡು ಮಹಲಿಂಗ
ವೇಗದಿಂ ದೇಶಪರ್ಯಾಟನಂಗೈವುತ್ತ
ರಾಗದಿಂ ಬಂದು ನರಗಟ್ಟಿಶೈಲಾಗ್ರದೊಳ್ ಶಿವಯೋಗದಿಂದಿರ್ದನು

ಪಿಂಗಳಜಟಾಪಟಲಸಂಗತಮಹಾದೇವ
ಗಂಗಾತರಂಗರಾಜಿತಮೌಳಿ ಕಾಲಮದ
ಭಂಗ ರಾಕೇಂದುನಯನಾಂಗಭವನಾಶ ವರಗುಣಕೋಶ ನಂದಿಕೇಶ
ಲಿಂಗ ನಿಗಮತುರಂಗ ನಿತ್ಯ ಸುಖಧಾಮ ಮಾ
ತಂಗ ದಾನವಚರ್ಮಚೇಲ ವರ ಪ್ರಮಥಗಣ
ಪುಂಗವಾರ್ಚಿತಪಾದ ಚೆನ್ನವೀರೇಶ್ವರನೆ ಪಾಲಿಪುದು ತ್ರೈಲೋಕಮಂ ೧

ಲಾಲಿಸೆಲೆ ಗಿರಿಜಾತೆ ಮಹಲಿಂಗ ಜಂಗಮದ
ಲೀಲೆಯಂ ಬಳಿಕ ತನ್ನಗರಭ್ರಾತ್ರಾಂತರದಿ
ಪಾಳಿಯಿಂ ಪರಮಾರ್ಥಗೀತೆಗಳ ಸಂತತಿಯನಾಲಿಸುತ ಸಂತಸದೊಳು
ಕಾಲಹರಯೋಗಿ ಗುರುಲಿಂಗಜಗದಾರ್ಯನ ವಿ-
ಶಾಲಕರುಣಾಂಬುಧಿಯೊಳೇಳುತ್ತ ಸರ್ವಮುನಿ
ಜಾಲಸಂಪೂಜ್ಯ ಮಹಲಿಂಗಜಂಗಮನಾಥ ಮೆರೆದಿರ್ದನಾನಂದದಿ ೨

ಚಂದನದಿ ಶೀತಳಂ ಚಿನ್ನದೊಳು ಬಣ್ಣವುಂ
ಚಂದ್ರನೊಳಗಮೃತಂ ಕುಸುಮದೊಳಗೆ ಪರಿಮಳಂ
ಸಂದ ಸಕ್ಕರಿ ಪಾಲಿನೊಳಗಿರ್ದು ಹೊಂದಿರ್ಪ ತೆರದಿಂದೆ ಜಗಮರಿಯಲು
ಚೆಂದದಿಂ ಗುರುಲಿಂಗಯೋಗಿ ಘನಮಹಿಮನೊಳ್
ಕಂದರ್ಪಮದನಾಶ ಮಹಲಿಂಗ ಜಂಗಮಂ
ಕುಂದದಮಲಾನಂದದಿಂ ಬೆರೆದು ಮೆರೆದಿರ್ದ ನಿರ್ಭಿನ್ನಮಾನಸದೊಳು ೩

ಈ ಪರಿಯೊಳುಂ ಪರಮ ಗುರುವಿನೊಳ್ ಮೆರೆದಿರ್ದು
ತಾಪತ್ರಯಾರಣ್ಯದಾವಾಗ್ನಿ ಮಹಲಿಂಗ
ತಾಪಸೋತ್ತಮನಿರ್ದ ಸದ್ಭಕ್ತಸಂತತಿಯ ಪಾಲಿಸುತ ಭೂತಳದೊಳು
ಮಾಪಸುಕುಮಾರಹರನಾಜ್ಞೆಯಾದಂತಿನ್ನು
ಭೂ ಪವಿತ್ರವ ಮಾಡಬೇಕೆಂಬ ಮನದೆಣಿಕೆ
ಜ್ಞಾಪಕತ್ವದೊಳೊಂದು ದಿನ ಪರಮ ಗುರುವಿನೊಳ್ ಬಿನ್ನೈಸುತಾಕ್ಷಣದೊಳು ೪

ಎಲೆ ದೇವ ಗುರುಲಿಂಗ [ಮುನಿವರನೆ] ಚಿತ್ತಯಿಸು
ಮಲಹರಾತ್ಮಕನಾಜ್ಞೆಯಾದಂತೆ ನಿಮ್ಮ ಕೃಪೆ
ಒಲವಿನಿಂ ಸಿದ್ಧಿಸಿತು ಜಗದೊಳೀ ಜಂಗಮಂ ಧನ್ಯಮಾದುದು ತಿಳಿವಡೆ
ಬಳಿಕಟ್ಟು ತನುವಾದ ಜಂಗಮಂ ಚರಿಸಿದರೆ
ಇಳೆಯೊಳಗೆ ನಿರ್ಮಲಾಗಿಹುದಂತುಮಲ್ಲದಲೆ
ಜಲವು ನಿಂದಿರೆ ಮಲಿನವಾಗುವದು ಮುಂದೆನಗೆ ಸಂಚರಿಪುದೇ ಧರ್ಮವು ೫

ಅದರಿಂದ ಪರಮ ನಿರುಪವನೀಯಬೇಕೆಂದು
ಮದನಹರನಾಜ್ಞೆಯಾದಂತುಭಯ ಪಕ್ಷದೊಳ್
ಮುದದಿಂದೆ ಮೇದಿನಿಗೆ ಬಂದ ಕಾರಣವೃಕ್ಷ ಫಲಿಸಿತೀಗೆಂದೆನುತಲಿ
ಸದಮಲಾನಂದದಿಂ ಬಣ್ಣಿಸುತ್ತಿರಲಾಗಿ
ಪದುಳದಿಂ ಯೋಗಿಗುರುನಾಥ ತಜ್ಜಂಗಮದ
ವದನಾರವಿಂದಮಂ ಕಾರುಣ್ಯದಿಂ ನೋಡುತೆಲೆದೇವ ಮಹಲಿಂಗನೆ ೬

ನಾರಿಕೇಳಂಗಳೊಳಮೃತಮಂ ಎರೆಪರಾರ್
ಕ್ಷೀರದೊಳು ಮಧುರಮಂ ಬೆರೆಸುವವರಾರ್ ಬಳಿಕ
ಸಾರಕಸ್ತೂರಿಯೊಳು ಕಂಪುಮಂ ಸೇರಿಸುವರಾರಿರದೆ ಭೂತಳದೊಳು
ಮಾರಹರಮಹಿಮ ಘನ ಮಹಲಿಂಗ ನಮ್ಮಿಂದ
ಚಾರು ಬ್ರಹ್ಮೋಪದೇಶವನಾಂತೆನೆಂಬ ಸುವಿ
ಚಾರವಿದು ಕೌತುಕಂ ಭಾವಿಪಡೆ ಬಳಿಕಿನ್ನು ಶಿವನಾಜ್ಞೆಯೇ ಕಾರಣಂ ೭

ದಾನವನರಾನಿಮಿಷರೆನ್ನಾಜ್ಞೆಯೊಳಗಿಹರು
ನಾನು ನಿನ್ನಾಜ್ಞೆಯೊಳಗಿಹೆನೆಂದು ಶಿವ ಮುನ್ನ
ಕೂನಿಟ್ಟು ಕೈಲಾಸದೊಳು ಪೇಳ್ದ ಬಳಿಕಿನ್ನು ನಾವೀಗ ನಿಮ್ಮಾಜ್ಞೆಯಂ
ಏನೆಂದು ನಿರವಿಪುದು ಮಹಲಿಂಗ ಜಂಗಮವೆ
ನಾನು ನೀನೆಂದೆಂಬ ಭ್ರಾಂತಿಗಳನಳಿದಮಲ
ಮಾನಿತೋತ್ತಮ ಮಹಿಮ[ನ][೧]ಸಮ ಸಂಗವನಗಲಿ ಜೀವಿಸುವರಾರಿಳೆಯೊಳು ೮

ಎಲ್ಲಿರ್ದಡೀ ಜಂಗಮದ ಚಿತ್ತ ತ್ವತ್ಪಾದ
ಪಲ್ಲವದೊಳಿಹುದಸಮತಂತುಪಟದಂತೆವೋಲ್
ಸಲ್ಲಲಿತ ಘನ ಕೃಪಾಲೋಕನದಿ ನಲವೇರೆ ಕೂರ್ಮಪೃಥಕನ್ಯಾಯದಿ
ಫುಲ್ಲಶರಹರನಸಮಲೀಲೆಯಿರ್ಪನ್ನೆಬರ
ಖುಲ್ಲರಿಂ ಕೊರತೆಗಳು ಬರದಂತೆ ಲೋಕದೊಳ್
ನಿಲ್ಲದಲೆ ಪಾಲಿಸುವದೆಂಬ ಮಹಿಮನ ನುಡಿಗೆ ಗುರುನಾಥ ನಸುನಗುತಲಿ ೯

ಕತ್ತಲೆಗೆ ದಿನಪ ಮುಂಗಾಣದಿರೆ ಸತ್ಪ್ರಭೆಯ
ಬಿತ್ತರದಿ ತೋರ್ಪರಾರ್ಮರುತನುಬ್ಬಸದಳೆಯೆ
ಒತ್ತರಸಿ ವ್ಯಜನವಾತದಿ ಬೀಸಿ ತಾಪಮಂ ಪರಿಹರಿಪರಾರಿಳೆಯೊಳು
ಕೃತ್ರಿಮದ ಗರಳದಿಂ ಖಗನಾಥನಸುವಳಿಯೆ
ಮತ್ತಿರದೆ ಮಂತ್ರಿಸುವರಾರಿನ್ನು ಮಹಲಿಂಗ
ಮೃತ್ಯುಹರ ಲೋಕಪಾವನಶೀಲ ನಿಮ್ಮ ನುಡಿ ಕೌತುಕವು ಭಾವಿಸುವಡೆ ೧೦

೧ ದ (ಕ. ಚ.)

ಗೌರಿಯರಸನು ಪೇಳ್ದ ತೆರದಿಂದೆ ಸಂತತಂ
ಚಾರುತರ ಲೀಲೆಯಂ ನಟಿಸುತ್ತ ಭುವನದೊಳ್
ಸಾರ ಶಿವಭಕ್ತ ಸಂಜಾತಮಂ ಪಾಲಿಸುತ ಘನ ಮಹಿಮೆಗಳ ಬೀರುತ
ಧಾರುಣೀ ಪತಿಗಳಿಂ ಸಂಪೂಜ್ಯನಾಗುತ್ತ
ಭೂರಿಸಂಭ್ರಮದಿಂದ ಸತ್ಕೀರ್ತಿಯುತನೆನಿಸಿ
ಮಾರಹರ ಮಹಲಿಂಗ ಜಂಗಮನೆ ಚರಿಸೆಂದು ಪರಸುತ್ತ ಬೀಳ್ಕೊಟ್ಟರು ೧೧

ಆ ಪರಮ ಗುರುವಿನಾಜ್ಞೆಯನಾಂತು ಸಂತಸದಿ
ಮಾಪಸುಕುಮಾರಹರ ಮಹಲಿಂಗಜಂಗಮಂ
ಭೂಪವಿತ್ರವ ಮಾಡಲೋಸುಗದಿ ಸರ್ವ ಜಗಮರಿಯೆ [ತಾಂ] ಸಂಭ್ರಮದೊಳು
ಪಾಪಸಂಹರಮೂರ್ತಿ ಸದ್ಭಕ್ತಸಂತತಿಯು
ತಾಪತ್ರಯಂಗಳಂ ಹರಿಸುತ್ತ ಚರಿಸುತ್ತ
ತಾಪಸೋತ್ತಮನಂಘ್ರಿಗಳ ಬಿಡದೆ ಧ್ಯಾನಿಸುತೆ ಕರ್ನಾಟಕಕೆ ಬಂದನು ೧೨

ಸಕಲಜಗದಾರಾಧ್ಯನೆಂದೆನಿಸಿ ಧಾತ್ರಿಯೊಳ್
ಸುಕವಿಸನ್ನುತಪಾದಪಂಕೇಜ ನಿರ್ಮಾಯ
ನಕಳಂಕಮಹಿಮ ನಿಜ ಲೀಲೆಗಳ ಬೀರುತ್ತ ಬರುತಿರಲು ಮುಂದೆಸೆಯೊಳು
ಸುಕರ ಛಪ್ಪನ್ನ ದೇಶಾದಿಗಳ ಸೌಭಾಗ್ಯ
ನಿಕರಕ್ಕಿದೇ ಜನ್ಮಭೂಮಿಯೆಂಬಂತೆ ತಾ
ನಕುಟಿಲಾತ್ಮನ ಮನಕೆ ಮಂಜುಳವನೀವುತ್ತ ತದ್ದೇಶ ಕಣ್ಗೆಸೆದುದು ೧೩

ಲಿಂಗದಿಂ ಕಂಗೊಳಿಪ ಪರಮ ಭುವನಂಗಳಿಂ
ತುಂಗಫಲಭಾರದಿಂ ಬಗ್ಗುತಿಹ ಬನಗಳಿಂ
ಸಂಗತಾಮಲಪುಷ್ಪ ಪರಿಮಳದ ವನಗಳಿಂ ನಿರ್ಝರದ ಕೊಳ್ಳಂಗಳಿಂ
ಪಿಂಗದಲೆ ನೆರೆಪರಿವ ಪರಮ ಪೆರ್ದೊರೆಗಳಿಂ
ಮಂಗಲ ಮಹಾತಪೋಧನರಿರ್ಪ ಗಿರಿಗಳಿಂ
ಭಂಗದಿಂ ಕಂಗೊಳಿಪ ಪದ್ಮಾಕರಂಗಳಿಂದಾ ದೇಶ ಕಣ್ಗೆಸೆದುದು ೧೪

ಕದಳಿ ಕಂಟಕ ಕರಕ ಜಂಬು ಚೂತ ಕಪಿತ್ಥ
ಮಧುರ ಪಲಸೀಳೆ ಜೆಂಬೀರ ಪನ್ನೀರಲವು
ವಿದಿತ ಪೀರುವ ನಾರಿಕೇಳದ್ರಾಕ್ಷಾಂಜೀರ ತರುವಲ್ಲರಿಗಳಿಂದಲಿ
ಮುದಿತ ಚಂಪಕ ಜಾಜಿ ಬಕುಳ ಯೂಥಿಕೆ ಕುಂದ
ಒದಗಿರ್ಪ ಸೌಗಂಧ ಕನಕಕೇತಕಿ ಮುಖ್ಯ
ಮಧುರಸಕೆ ಮಾತೃಕಾಸ್ಥಾನವೆಂಬಂದದಿಂ ಮನಕೆ ಮಂಜುಲವಾದುದು ೧೫

ಅರಗಿಳಿಗಳಿಂ ದಳಿತ ಚೂತ ದ್ರಾಕ್ಷಾರಸವು
ಮರುತಹತಿಯಿಂ ಬೀಳ್ದ ಜಂಬು ದಾಳಿಮ ಸಾರ
ತರ ಘರ್ಷಣದ ಘಾತದಿಂ ಧರೆಗೆ ಬೀಳ್ದೊಡೆದ ತೆಂಗಿನೆಳೆನೀರಂಗಳು
ವರ ಸರಸ್ವತಿ ಭಾಗಿರಥಿ ಯಮುನೆಯೋಲ್ ಬಿಡದೆ
ಪರಿವುತಿರೆ ತದ್ದೇಶ ನರರೀಂಟಿ ಬಾಳುತ್ತ
ಮರಳಿ ತತ್ತರುಗಳಿಗದೇ ಸಾರನುಣಿಸುತ್ತ ಪೊರೆವರುದ್ಯಾವನಗಳ ೧೬

ತನಿವಣ್ಣುಗಳನುಂಡು ಚಪ್ಪರಿವ ಶುಕಗಳಿಂ
ಕೊನರುಗಳ ತಿಂದುಲಿದು ನಲಿವುತಿಹ ಪಿಕಗಳಿಂ
ಬನ ಪೂವುಗಳ ತಿಂದು ಉಂಡು ಝೇಂಕರಿಸುತ್ತ ಪಾಡುತಿಹ ಷಟ್ಪದಗಳಿಂ
ಇನಿದಾದ ಶಬ್ದಕಿದೆ ಪರಮಪಾವನಮಾದ
ಜನನಧರೆಯಂತೆ ಕೇಳ್ವರ ಕರ್ಣಕಿನಿದೆನಿಸಿ
ಮನಕೆ ಮಂಜುಲವಾಗಿ ತದ್ದೇಶದಾರಾಮಗಳು ಬಿಡದೆ ಕಣ್ಗೆಸೆದವು ೧೭

ಆರಾಮದೊಳಗಿರ್ದು ವೃಹಿಪಾತಿಗಳ ಕಾವ
ರಾರಾಮಸತಿಯಂತೆ ಕಂಗೊಳಿಪ ಚೆಲ್ವೆಯರ್
ಶ್ರೀರಾಮವಾಹನಗಳಂ ಬಿಡದೆ ಪಾರಿಸಲ್ ಬಳಿಕವರ ಚೆಂದುಟಿಗಳ
ನಾ ರಾಮಬಿಂಬ ಫಲವೆಂದಸಹ್ಯ ಭ್ರಾಂತಿಯಿಂ
ದಾ ರಾಮವದನೆಯರ ಮೃದುನ್ನೆಳಿಗೆ ಮೋಹಿಸು
ತ್ತಾರಾಮದಿಂದೆರಗೆ ಬಾಯ್ದಂಬುಲವನೀಯೆ ತತ್ತುಟಿಯು ಕೆಂಪಾದುದು ೧೮

ಇಂತಲ್ಲದೆಂತಾದುದೆಂಬಂತೆ ಮುಗ್ಧೆಯರ್
ಕಂತುರಾಜನ ಮಹಾಪಟ್ಟದಾನೆಗಳಂತೆ
ಸಂತತಂ ಮುಡಿವೊಲೆಯು ಪಚ್ಚಳದ ಭಾರದಿಂ ಬಳುಕುತಿಹ ಬಡನಡುವಿನಾ
ನಂತ ಒಯ್ಯಾರದಿಂ ಪಾಮುರಿಯುರಪ್ಪುಳಿಸಿ
ಮುಂತಿರುವ ಗಿಳಿವಿಂಡ ಸೋವಣದಿ ಪಾರಿಸುತ
ನಿಂತಿಹರು ತದ್ಗಂಧಶಾಲಿವನ ಪಾಲಿಸುತ ನೀಲಾಕ್ಷಿಯರ್ ಬೆಡಗಿನಿಂ ೧೯

ಪರಿಮಳದ ಪನ್ನೀರುಗಳ ನೆಗಳುತಿಹ ಪರಮ
ತರಳಾಕ್ಷಿಯರ ಬೆಡಗಿನಿಂದೊಪ್ಪುತಿಹ ದಿವ್ಯ
ತರಮಾದ ಅರವಟಿಗೆಗಳು ಅನ್ನಛತ್ರಂಗಳಿಂದಿರದಲೊಪ್ಪುತಿರುವ
ಪರಿವುತಿಹ ನದನದಿಗಳಿಂ ಪಲ್ವಲಂಗಳಿಂ
ಪರಮ ಪಟ್ಟಣಗಳಿಂದಗ್ರಹಾರಂಗಳಿಂ
ಧರಿದೆನಿಸುತಿಹ ದೇಶ ಮಹಲಿಂಗ ಮುನಿವರನ ಕಣ್ಗೆ ಮಂಜುಲವಾದುದು ೨೦

ಎಲ್ಲಿ ನೋಡಿದಡಲ್ಲಿ ಹರಧ್ಯಾನಮಂ ಮಾಳ್ಪ
ರೆಲ್ಲಿ ನೋಡಿದಡಲ್ಲಿ ಶಿವಲಿಂಗಮಂ ಭಜಿಪ
ರೆಲ್ಲಿ ನೋಡಿದಡಲ್ಲಿ ಶಂಕರನ ಲೀಲೆಗಳ ಭಕ್ತಿಯಿಂದಲಿ ಪೇಳ್ವರ್
ಎಲ್ಲಿ ನೋಡಿದಡಲ್ಲಿ ವೇದಗಳನುಚ್ಚರಿಪ
ರೆಲ್ಲಿ ನೋಡಿದಡಲ್ಲಿ ಧರ್ಮಶಾಸ್ತ್ರವನೊರೆವ
ರಲ್ಲದಿಲ್ಲಾದೇಶದೊಳಗೊಪ್ಪುತಿಹ ಮರ್ತ್ಯರೇನೆಂದು ಬಣ್ಣಿಸುವೆನು ೨೧

ಪರಮ ಸೌಭಾಗ್ಯದಿಂ ಸುರಪತಿಯನೇಳಿಪರ್
ವರದ್ರವ್ಯದಿಂದೀಶಮಿತ್ರನಂ ನಿಂದಿಪರ್
ವಿರುಪ ಸೌಂದರ್ಯದಿಂ ಕಾಮನಂ ದೂಷಿಪರ್ ವಿತರಣದ ಗುಣಶೀಲದಿಂ
ತರಣಿಜನ ತೆಗಳುವರ್ ಗಾಂಭೀರ್ಯದಿರವಿನಿಂ
ಶರನಿಧಿಯು ಜರಿವ ಜನರಿಂದಿರಿದು ತದ್ದೇಶ
ಮೆರೆದುದು ಮಹಾಲಿಂಗ ಮುನಿಚಂದ್ರಮನ ಕಣ್ಗೆ ಸಂತಸವನೀವುತ್ತಲಿ ೨೨

ಹರಿ ಮರುತ್ಸಖನಂತೆ ಪೌರುಷದ ಶೀಲರುಂ
ಧರಣಿ ಶಶಿಯಂತಮಲ ಶಾಂತಿಗುಣಮೂಲರುಂ
ನರ ಬೃಹಸ್ಪತಿಯಂತೆ ವಾಗ್ಜಾಲಲೀಲರುಂ ತುಂಬುರಾಜಕುಮಾರರೋಲ್
ಪರಮ ಸಂಗೀತ ರಸಲೋಲರುಂ ಕಲ್ಪಕುಜ
ಸುರದುಘುವಿನಂತೀವ ದಾನಗುಣಶೀಲರುಂ
ಪರುಷದಿಂದಿಹರು ತಜ್ಜನಪದದಮಧ್ಯದೊಳಗೇನೆಂದು ಬಣ್ಣಿಸುವೆನು ೨೩

ಕಾಂತಪದಭಕ್ತೆಯರ್ ಕರ್ಮಪಥಮುಕ್ತೆಯರ್
ಶಾಂತಿರಸಲೋಲೆಯರ್ ಸುಗುಣಮಣಿಮಾಲೆಯರ್
ಭ್ರಾಂತಜನದೂರೆಯರ್ ಭವಮಾರ್ಗಹಾರೆಯರ್ ಭಾಳಾಕ್ಷನಂ ಧ್ಯಾನಿಪರ್
ಸ್ವಾಂತಿಯರ್ ಮದನಹರನಂತಸಮ ಚೆಲ್ವಿಕೆಯ
ನಾಂತಿಹರು ತದ್ದೇಶದೊಳಗಿರ್ಪ ಘನತರದ
ಕಾಂತೆಯರು ನಿರುತ ನಿಶ್ಚಿಂತೆಯರು ತಾವಲ್ಲದಿಲ್ಲ ದುಷ್ಟಸ್ತ್ರೀಯರು ೨೪

ವಿಧಿಪತ್ನಿಯಂತಸಮ ಚಾತುರ್ಯಯುಕ್ತೆಯರ್
ವಿಧುಕಾಂತಿಯಂತಮಲ ಸೌಭಾಗ್ಯರಕ್ತೆಯರ್
[ವಿಧು]ಸತಿಯರಂತಿರದೆ ಲೋಕೋಪಕಾರಿಯರ್ ದುರ್ಮಾರ್ಗಸನ್ಮುಕ್ತೆಯರ್
ವಿದಿತಾನುಸೂಯ್ಯರುಂಧತಿಯಂತೆ ಸಾಧ್ವಿಯರ್
ಮದನಸತಿಯಂತಿರದೆ ಸೌಂದರ್ಯನಾಂತಿಹರು
ಮದವಳಿದ ಮಾನಿನಿಯರಲ್ಲದಿಲ್ಲಾ ದೇಶಮಂಡಲದಿ ದುಃಸ್ತ್ರೀಯರು ೨೫

ಬಡತನವು ಮಾಂದ್ಯ ಬಂಧನ ಕುಟಿಲ ಕರ್ಕಶಂ
ಕಡಿತಾಡನೆಂಬ ನುಡಿ ವಾರ ನಾರಿಯರ ಘನ
ನಡು ನಡೆಯು ರತಿ ಕೇಶ ಸ್ತನ ಹೃದಯ ಮಧ್ಯದೊಳು ವರ್ತಿಸುವವೇನೆಂಬೆನು
ಬಿಡದೆ ತಜ್ಜನಪದದ ಪೊರವಳಯದೊಳಗಿರ್ಪ
ದೃಢಜನದ ಗಡಣದೊಳಗಿಲ್ಲಿಲ್ಲಮೆಂದೆನಲು
ಪೊಡವಿಯೊಳು ಬಣ್ಣಿಸುವ ಕವಿಯಾವನಾದೇಶದುನ್ನತಿಯ ವರ್ಣಿಸುವಡೆ ೨೬

ಅಳಿಯೆಂಬರಾ ತೈಲಗಾರ್ತಿಯರ ಜಾಲದೊಳ್
ಎಳಿಯೆಂಬರಂಬಕವಿಶೇಷದೊಳಗೆಡೆವಿಡದೆ
ಎಳಿಯೆಂಬರಮಲಗುಣಜಾತದೊಳ್ ಸುಲಿಯೆಂಬರಿಕ್ಷುವಿನಸಂಘಾತದೊಳ್
ತುಳಿಯೆಂಬರು ಕುಲಾಲಕ್ರಿಯೆಯದೊಳ್ಸಂತತಂ
ಚಳಿಯೆಂಬ ನುಡಿ ಹಿಮದೊಳಲ್ಲದಿಲ್ಲಾ ದೇಶ
ದೊಳಗೆನಲು ಮಹಲಿಂಗ ಮುನಿವರನ ಮನಕೆ ಮಂಜುಲವಾಗಿ ಕಂಗೊಳಿಸಿತು ೨೭

ಇಂತಪ್ಪ ಸೌಭಾಗ್ಯದಿಂದೊಪ್ಪುತಿಹ ದೇಶ
ಕಾಂತೆಯ ಮುಖಾಬ್ಜಮಂಡಲದಂತೆ ಥಳಥಳಿಪ
ಸಂತಮಣಿಗಣಖಚಿತ ತಿಲಕವೆಂಬಂತೆವೊಲ್ ಸಿಂಗರಂ ಪಡೆದೊಪ್ಪುತ
ಸಂತತಂ ರವಿಕೋಟಿ ಕಿರಣಮಂ ತೆಗಳುತ್ತ
ಕಂತುಹರ ಮಹಲಿಂಗ ಮುನಿಚಂದ್ರಮನ ಮನಕೆ
ಸಂತಸವನೀವುತ್ತ ನರವಾಲವೆಂದೆಂಬ ಸದ್ಗ್ರಾಮ ಕಂಗೆಸೆದುದು ೨೮

ಆ ಪುರದ ಬಹಿರೋಪದೇಶದೊಳಗೊಪ್ಪುತಿಹು
ದಾ ಪರಮ ಹರನಿರ್ಪ ಹೇಮ ರಜತಾದ್ರಿಗಳ
ರೂಪಿನಿಂದಮೃತ ಮಂದಿರದಂತೆ ಯೋಗಿಗಳ ಯೋಗಂಗಳಂ ಸಾರಿಪ
ಸ್ಥೈಪಿನಾಲಯದಂತೆ ಪುಣ್ಯದಾಗರದಂತೆ
ತಾಪಸರ ತಪದ ನೆಲೆವನೆಯಂತೆ ಸಂತತಂ
ವಾಪಹರರೂಪ ಮಹಲಿಂಗ ಮಹಿಮನ ಕಣ್ಗೆ ಕಾಣಿಸಲು ಸಮ್ಮುಖದೊಳು ೨೯

ಹರಿಯಂತೆ ಮುನಿಯಂತೆ ಶಿವನಂತೆ ಶಶಿಯಂತೆ
ಹರಿಯಂತೆ ಹರಿಮಿತ್ರನಂತೆ ಮರುಜನದಂತೆ
ಸ್ಮರನಂತೆ ಶಿಖಿಯಂತೆ ಶಚಿಯಂತೆ ರವಿಯಂತೆ ಸುರನಾಥನೊಲ್ ಸಂತತಂ
ಸುರದಂತಿಯಂತಸಮ ಕರ್ಣಸಾರಥಿಯಂತೆ
ವರದ್ರೋಣಸುತನಂತೆ ಪರಮ ಗರ್ಭಿಣಿಯಂತೆ
ನಿರುತದಿಂದೀಸಾಮಗಳನಾಂತ ಕುಜಗಳಿಂದಿಡಿಕಿರ್ದುದಾ ಭೂಧರಂ ೩೦

ವನದಂತೆ ನಾಗನಾಗಾಳಿ ಸದ್ರಾಜಿತಂ
ಘನದಂತೆ ಬಾಣ ಬಾಣೌಘ ಸಂಭ್ರಾಜಿತಂ
ಘನ ಮರುತ್ಪಥದಂತೆ ಸಂತತಂ ಕುಮುದ ಕುಮುದಾಶ್ರಿತಮದೆಂದೆನಿಸುವ
ವನದಂತೆ ಸೋಮ ಸೋಮಾಲಯಂ ಸುಂದರೀ
ಜನದಂತೆ ಕಂಕಣಸುಕಂಕಣವಿರಾಜಿತಂ
ವನಜಾಂತ ಸಮಗೋಪ ಗೋಪವೀರಾಜಮೆಂದೆನಿಸಿರ್ದುದಾ ಭೂಧರಂ ೨೧

ಇಂದು ರವಿಮಂಡಲವನಳ್ಕಿರಿದು ಕಂಗೊಳಿಸಿ
ಇಂಧುಧರ ಚಿದ್ರೂಪ ನೋಡುತ್ತ ಮನದೊಳಗೆ
ಚೆಂದಮಿದು ಚೆನ್ನಗಿರಿಯೆಂದಾಗ ನಿಶ್ಚೈಸಿ ನಿಜ ಲೀಲೆಯಂ ಮೆರೆವಡೆ
ಸಂದುದು ಕಣಾ ದೇವ ಸಿಂಧುಧರನಾಜ್ಞೆಯಿಂ
ಬಂದೆನು ಮಹಾ ದೇವ ದೇವ ದೇವಾಧೀಶ
ನೆಂದು ತತ್ಪರ್ವತವನೇರುತ್ತ ಸಾರುತ್ತ ಮುಂದೆಸೆಗೆ ಬರುತಿರ್ದನು ೩೨

ಎಡಬಲದೊಳೊಪ್ಪುತಿಹ ಜರಿಗಳಿಂ ದರಿಗಳಿಂ
ಬಿಡದೆ ಕಂಗೊಳಿಸಿರ್ದ ಮರೆಗಳಿಂ ಅರೆಗಳಿಂ
ಕಡುರಮ್ಯವಾದ ಪೆರ್ಗಿಡುಗಳಿಂ ಜಡುಗಳಿಂ ಸಂತತಂ ಪರಿದೊಪ್ಪುವ
ಎಡೆವಿಡದ ನಿರ್ಝರದ ವಾರಿಯಿಂ ಧಾರಿಯಿಂ
ತೊಡಕಿರಿದ ಬಳ್ಳಿಗಳ ಸೊಂಪಿನಿಂ ತಂಪಿನಿಂ
ಮೃಡಮಹಾಲಿಂಗಮುನಿಚಂದ್ರಮನ ಮನಕೆ ಮಂಜುಲವಾದುದಾ ಪರ್ವತಂ ೩೩

ಅಲ್ಲಿ ಪೆರ್ಬಳ್ಳಿಯಿಂ ಪರ್ಬಿದ ಮಹಾಪುಷ್ಪ
ಸಲ್ಲಲಿತ ಮಂಟಪದಿ ಸಂತೋಷದೊಳಗಿಂದು
ವಲ್ಲಭನ ಮೂರ್ತಿಯಂ ಹೃತ್ಕಂಜ ಕಿಂಜಲ್ಕಮಧ್ಯದೊಳು ಧ್ಯಾನಿಸುತಲಿ
ನಿಲ್ಲದೆ ಮಹಾತಪವನಾಚರಿಸಲೆಂದು ಯಮಿ
ವಲ್ಲಭ ಮಹಾಲಿಂಗನುಜ್ಜುಗಿಸಲಾ ವ್ರತವ
ಬಲ್ಲವನದಾವ ಕಬ್ಬಿಗನಿಂದು ಬಣ್ಣಿಸುವ ಭೂತಳದೊಳಗಜಾತೆಯೋ ೩೪

ಪಂಚೇಂದ್ರಿವಿಷಯಗಳನತಿಗಳೆದು ಶೀಘ್ರದಿಂ
ಮುಂಚುವ ದಶೇಂದ್ರಿಯದ ಸಂಚಲವ ನೆರೆ ಮುರಿದು
ಸಂಚಿತುಪಕಾಂಕ್ಷೆಗಳನೀಡಾಡಿ ಶ್ರೀಯೋಗಿ ಗುರುನಾಥನಂ ಧ್ಯಾನಿಸಿ
ಮಿಂಚುತಿಹ ಮಲತ್ರಯವ ಮುನ್ನವೇ ಕೀಳ್ಪಡಿಸಿ
ಸಂಚಿತಾಗಾಮಿ ಪ್ರಾರಬ್ಧಗಳ ಕಡೆನೂಂಕಿ
ಮಿಂಚುವ ಮಹಾಬೆಳಗಿನೊಳು ಬೆರೆದು ಮಹಲಿಂಗ ಮುನಿನಾಥನಿರುತ್ತಿರ್ದನು ೩೫

ಮೂಲ ತತ್ತ್ವಾಧಾರವನು ಬಲಿದು ಒಳಗಿರ್ಪ
ಕೀಲು ಕುಂಡಲಿಯೆಂಬ ಸರ್ಪನ ಮಹಾಮುಖವ
ಮೇಲಕೆಬ್ಬಿಸಿ ಪರಮ ಷಟ್ಚಕ್ರಗಳ ಸೇರಿ ಆನಂದಚಿನಿವಾಲುವಂ
ಲೋಲ ಜಿಹ್ವಾಗ್ರದಿಂದೀಂಟಿ ಪರವಶನಾಗಿ
ಬಾಲೇಂದುರವಿಕೋಟಿ ಮನ್ಮನೀಜಾಲೆಯಂ
ಲೀಲೆಯಿಂದೊಡಗೂಡಬೇಕೆಂಬವ್ರೋಲಿರ್ದನಾ ಮಹಿಮನಾ ಗಿರಿಯೊಳು ೩೬

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳಂ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿ ಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿರ್ಪರು ೩೭

ಅಂತು ಸಂಧಿ ೪ ಕ್ಕಂ ಪದ ೧೬೦ ಕ್ಕಂ
ಮಂಗಳಂ
ಶ್ರೀ



ಮಹಲಿಂಗಮುನಿನಾಥನ ತಪೋಭೂಮಿ

ಶ್ರೀ

# ಐದನೆಯ ಸಂಧಿ

ಸೂಚನೆ : ಆ ಗಿರಿಯ ಬಹಿರೋಪಕಂಠಸ್ಥ ಕತ್ಪುರದಿ
ರಾಗದಿಂದಿಹ ನಾಗಪತಿ ಮುಪ್ಪಿನಾಯುಗಳ
ರಾಗ ಶಿವಕರುಣದಿಂ ಮಹಲಿಂಗ ವ್ಯೈದೋರಿ ಘನಮಹಿಮೆಯಿಂ ಮೆರೆದನು

ಕ್ಷಿತಿ ಜಲಾನಲ ವಾಯು ಗಗನಾತ್ಮ ಮಿತ್ರಾಬ್ಜ
ಶಿತಕಾಯ ಜಿತಮಾಯ ಪರಮಾತ್ಮ ಪರಿಪೂರ್ಣ
ಯತಿಮನೋವನಜಭಾಸ್ಕರ ಭಗೀರಥ ಮನೋಭಿಷ್ಟ ಸಂದಾಯಕ [ಶಿವ]
ಶಿತಕಂಠ ವೈಕುಂಠ ಸುರಮಾರಹರ ಕಾಲ
ಜಿತಪಾಲ ವರನೇತ್ರ ನಲಜ್ವಾಲಿಸಂಕಲಿತ
ಪ್ರತಿರಹಿತ ಪರಮೇಶ ಪರಿತೋಷ ಶ್ರೀ ಚೆನ್ನವೀರೇಶ ಪಾಲಿಸು ಸದಾ ೧

ತನ್ನ ತಾನರಿದಸಮ ಪರಬ್ರಹ್ಮರೂಪ ತಾಂ
ನನ್ನಿಯಿಂ ತಪವನಾಚರಿಸುತ್ತಲಿಡೆವಿಡದೆ
ಚೆನ್ನಗಿರಿ ಮಧ್ಯದೊಳಗೊಪ್ಪುತಿರಲತ್ತಲಾ ತನ್ನಗದ ಕಂದರದೊಳು
ಚಿನ್ನದಿಂ ಥಳಥಳಿಪ ನವರತ್ನಪದಕದೋಲ್
ಬಿನ್ನಣದಿ ನರಕಾಲವಾಲೆಂಬ ಪಟ್ಟಣಂ
ಬಣ್ಣಿಸುವಡರಿದಾಗಿ ಬಗೆಬಗೆಯ ಸೊಬಗಿನಿಂ ಮೆರೆದಿರ್ದುದಗಜಾತೆಯೆ ೨

ಆ ಪುರದೊಳಿರುತಿರ್ಪ ಪರಮ ಸದ್ಭಕ್ತಕುಲ
ದೀಪ ನಿರುಪಮ ನಿತ್ಯ ಸದ್ಗುಣಾ[ಮಲ]ಮಣಿಕ
ಲಾಪ ಘನ ಕರ್ಮಸಂಕುಲ ಬಲಾಹಕ ಜಾಲಸಂಹಾರ ಜಂಝಾನಿಲ
ವ್ಯಾಪ ಸುಕುಮಾರಹರ ಪದಪತ್ರ ಷಟ್ಚರಣ
ರೂಪ ಸನ್ನುತಕೀರ್ತಿಭರಿತ ಪಾವನಚರಿತ
ತಾಪಹರ ಸದ್ಧರ್ಮರೂಪನಹ ನಾಗಾಖ್ಯ ಸದ್ಭಕ್ತನಿರುತಿರ್ದನು ೩

ಪಂಚಾಸ್ಯಪದಭಕ್ತ ಪಾತಕೇಂಧನ ಧಾವ
ಪಂಚಾಸ್ಯಗಣವರೋದ್ಭೂತ ಸತ್ಕುಲದೀಪ
ಪಂಚಮೋನ್ನತಜಾತ ಪಂಡಿತಜನಪ್ರೀತ ಶಿವಶರಣ ಕರುಣಾಕರ
ಪಂಚಾಕ್ಷರೋಚ್ಚಾರ ಫಾಲಾಕ್ಷಮತಶೂರ
ಸಂಚಿತಾಗಾಮಿ ಪ್ರಾರಬ್ಧಾದಿ ಕರ್ಮಗಜ
ಪಂಚಾಸ್ಯನೆಂದೆನಿಪ ಸದ್ಭಕ್ತನೆಸೆವುತಿರಲಾತಂಗೆ ಪುಣ್ಯಾಂಗನೆ ೪

ಪುರುಷಭಕ್ತಿವಿಚಾರಿ ಪುಣ್ಯಮಾರ್ಗವಿಹಾರಿ
ದುರಿತಸಂಕುಲದೂರಿ ಧೂರ್ತಜನಸಂಹಾರಿ
ಗುರುಮತಾಂಬುಜಸೂರಿ ಸುಗುಣಮಣಿಗಣಹಾರಿ ಸುಜನಾಳಿ ಸುವಿಚಾರಿಯು
ಶರಣಜನಸಂಸಾರೆ ಸದ್ಧರ್ಮದಾಗಾರೆ
ಕರುಣಾಂಬುರಸಪೂರೆ ಪರಜಂಗಮಾಧಾರೆ
ನಿರುತ ಚಿದ್ರಸಪೂರೆ ತಾನೆನಿಸಿ ಮುಪ್ಪಿನ ಮಹಾತಾಯಿ ಮೆರೆದಿರ್ದಳು ೫

ರತಿಕಾಮರೀರ್ವರುಂ ಪ್ರತಿರಹಿತ ರೂಪದಿಂ
ಕ್ಷಿತಿಯೊಳತಿ ಪ್ರೀತಿಯಿಂ ಜತಿಯಾಗಿ ಜನಿಸಿದೋಲ್
ಸತಿಪತಿಗಳೀರ್ವರುಂ ಬಾಳುತ್ತ ಭಾವದೊಳಗೊಂದು ನೇಮವ ನೆನೆವುತ
ಶ್ರುತಿ ಪುರಾಣಾಗಮದಿ ಪೇಳ್ದ ಶಿವಜಂಗಮದ
ಪ್ರತತಿಯ ಪದಾಂಬುಶೇಷವೆಪ್ರಾಣಮೆಂದೆಂಬ
ವ್ರತದಿಂದೆ ರತದಿಂದೆ ನಿತ್ಯಜಂಗಮಪೂಜೆ ದಾಸೋಹಗಳ ಮಾಡುತ ೬

ಧರ್ಮಕಾಯಕದಿಂದೆ ತಂದಮಲದ್ರವ್ಯದಿಂ
ಕರ್ಮಹರಗುರುಲಿಂಗಜಂಗಮವನರ್ಚಿಸುತ
ನಿರ್ಮಲಸ್ವಾಂತದಿಂದವರ ಚರಣಾಂಬುಶೇಷವ ಸವಿದು ಸನ್ಮಾರ್ಗದ
ಮರ್ಮವರಿದಾಚರಿಸುತಿರಲವರ ಸತ್ಕೀರ್ತಿ
ಕೂರ್ಮೆಯಿಂ ಕುಡಿವರಿದು ತ್ರಿಭುವನದಿ ಪರ್ಬತ್ತೆ
ಕರ್ಮಹರನಾ ವಾರ್ತೆಯನು ಕೇಳಿ ಮನ್ಮಹಿಮೆ ಕುಜಕಿಂದು ಸತ್ಫಲವಿದು ೭

ಘಟಿಸಿತೆಂದಗಜಾತೆ ಮುಖ್ಯ ಪ್ರಮಥರಿಗೊರೆದು
ದಿಟದಿಂದಲಾ ಕಾದಲರ ಭಕ್ತಿಯಂ ಜಗದಿ
ನಟಿಸಬೇಕೆಂದು ಶಿವ ನಿಶ್ಚೈಸೆ ಜಂಗಮವು ದೊರೆಯದಿರೆ ಸಂತಾಪಮಂ
ಕಟಿಸುತ್ತ ಮನದೊಳಗೆ ಶಿವ ಶಿವ ಮಹಾದೇವ
ಜಠರ ಕ್ಷುಧೆಯಲ್ಲಿ ಮಗೆ ಪಿಡಿದ ನೇಮವ ಬಿಡದ
ಧಟವೆಮ್ಮದೆಂದಸಮಧೈರ್ಯದಿಂದೆಡವಿಡದೆ ನಿಜಪತ್ನಿಗಿಂತೆಂದನು ೮

ಜಡಜಾಕ್ಷಿ ಕೇಳಿಂದು ಜಂಗಮವು ದೊರೆಯದಿರೆ
ಬಿಡುವೆನೆನ್ನಯ ಪ್ರಾಣಮಂತಲ್ಲದೀ ಕೇಹ
ಪೊಡವಿಯೊಳು ಪೊತ್ತುಬಾಳುವದಲ್ಲ ಘನಪ್ರಮಥರಾಚರಣೆಗುಚಿತಲ್ಲವು
ಬಿಡು ಮನದ ಸಂದೇಹ ಸಾನಸಮ ಮೂರ್ತಿಯಂ
ಬಿಡದೆ ತರ್ಪೆನು ಎಂದು ಹುಡುಕುತಿರೆ ತತ್ಪುರದಿ
ಮೃಡಮಹಾದೇವನಾಣತಿಯಿಂದೆ ದೊರೆಯದಿರೆ ಮಂದಿರಕೆ ತಾಬಂದನು ೯

ಬಂದ ಕಾಂತನ ಬರವ ನೋಡುತ್ತ ಮನ್ನಾಥ
ಕಂದುಗೊರಲನು ಬಲ್ಲನಲ್ಲದೆಮ್ಮಯ ನೇಮ
ಕಿಂದು ಶ್ರೀವೀರಮಾಹೇಶ್ವರರು ದೊರೆಯದಿಹರೇನು ಕಾರಣ ಜಗದೊಳು
ಸಂದೇಹ ಬಿಡು ನಿಮ್ಮ ಸತ್ಯಸದ್ವರ್ತನೆಗೆ
ಕುಂದು ತಾಹುವಳಲ್ಲ ಚಂದ್ರಧರನಾಜ್ಞೆಯಿಂ
ಸಂಧಿಸಿತು ಶಿವಯೋಗಮೆಂದು ಸತಿಪತಿಗುಸುರಲಿಂತೆಂದನಾ ಕ್ಷಣದೊಳು ೧೦

ಇಂಗದಿರ ಬಿಸುಗೈಯ ತಳೆದೊಡಂ ಪಗಲೆರೆಯ
ತಂಗದಿರನಾದೊಡಂ ಧಗಧಗಿಸಿ ಪಜ್ವಳಿಪ
ಇಂಗಳವು ಕಡುತಂಪನಾಂತೊಡಂ ಸುಧೆಯು ಬಿಸವಾದೊಡಂ ಮುನ್ನೀರು ತಾ
ಇಂಗಿದೊಡೆ ಬೆಟ್ಟ ಮಿದುವಾದೊಡಂ ಮುಗಿಲಿಳೆಗೆ
ತೆಂಗಳಿಸಿ ಬೀಳ್ದೊಡಂ ನುಡಿದ ನುಡಿ ಪಿಡಿದವ್ರತ
[ಹಿಂಗ]ದಿಹುದೆಲೆಕಾಂತೆ ಮುನ್ನಿನ ಮಹಾಪ್ರಮಥರಾಚರಣೆ ಇಂತೆಂದನು ೧೧

ಆನೆಯುರೆಯಟ್ಟಿದೊಡೆ ಪುಲಿಯು ಘರ್ಜಿಸಿದೊಡಂ
ಭೂನಾಥ ಮುನಿದೊಡಂ ಕುಜನಾಳಿ ಜರಿದೊಡಂ
ಕಾನನದಮಧ್ಯದೊಳು ಕಳ್ಳ ತಾ ಕಾದೊಡಂ ಕಲಿಕರ್ಮಗಳುಕಾಡಲುಂ
ಭಾನುಜಾತನ ಭಟರು ಕೇಣದಿಂ ಮುನಿದೊಡಂ
ದಾನವಾಹಿತನೇತ್ರಪದಪುಷ್ಪ ಜರಿದೊಡಂ
ತಾ ನುಡಿದ ಘನ ಭಾಷೆ ಶೀಲಗಳ ಬಿಡದಿಹುದೆ ಸನ್ಮಾರ್ಗವೆಲೆ ಪ್ರೀಯಳೇ ೧೨

ಸತ್ಯಮಿದು ಮತ್ಕಾಂತ ನಿನ್ನ ನುಡಿ ಧಾತ್ರಿಯೊಳ್
ನಿತ್ಯಮೆನಗೀ ವ್ರತಂ ತಪ್ಪಿರುವಳಲ್ಲಲ್ಲ
ಭೃತ್ಯಜನಬಂಧು ಶ್ರೀ ವೀರಮಾಹೇಶ್ವರರ ತೀರ್ಥಶೇಷಗಳಿಲ್ಲದೆ
ಪ್ರತ್ಯಕ್ಷ ಶಿವಪೂಜೆ ಸತ್ಕರ್ಮವಿಧಿಯಲ್ಲಿ
ಮತ್ತೆಮಗಹಿತವಿಲ್ಲಮೆಂಬ ನುಡಿಗೇಳುತ್ತ
ಮೃತ್ಯುಹರನಂಘ್ರಿಯಂ ಧ್ಯಾನಿಸುತ ಚಿಂತೆಯಿಂ ದಂಪತಿಗಳಿರುತಿರ್ದರು ೧೩

ಆ ಸಮಯದೊಳು ಕಮಲ ಬಾಂಧವನು ಪಶ್ಚಿಮಕೆ
[ಓ೧]ಸರಿಸುತಾಕ್ಷಣದಿ ತದ್ವಾರ್ತೆಯನು ಪೇಳ
ಲೋಸುಗಂ ಬಿಡದೆ ಫಣಿಪುರಕೆ ಪೋದನೊ ಬಳಿಕಮಂತಲ್ಲದಾ ಭಕ್ತರಾ
ಮೀಸಲಳಿಯದ ಮನದ ಘನಭಕ್ತಿಧೈರ್ಯಗಳ
ವಾಸನೆಗಳಂ ನೋಡಬೇಕೆಂದು ಶಿವ ತನ್ನ
ಭಾಸುರದ ನಯನಮಂ ಬಾಸಣಿಸಿದಂತಸ್ತಗಿರಿಯಲ್ಲಿ ಮರೆಯಾದನು ೧೪

೧ ವಾ (ಕ. ಚ.)

ಪೂಸರನ ತಾಪದಿಂ ನೇಸರನ ನೆರೆ ನೆರೆದ
ವಾಸರಾಂಗನೆಯ ವರ ಚಂದ್ರಗಾವಿಯ ಸೀರೆ
ಓಸರಿಸಿ ಬೀಳ್ದಂತೆ ಬಳಿಕವಳು ತುರುಬಿನೊಳ್ ಸಿಂಗರದಿ ನೆರೆ ತಾಳಿದ
ಪೂಸರವು ಪರಿದು ಪರಿಕಲಿಸುತ್ತ ಜಗುಳ್ದಂತೆ
ಭಾಸುರವು[೧]ದಾಗೆ ಸಂಧ್ಯಾರಾಗ ತಾರಾಳಿ
ಯಾ ಸಮಯದೊಳು ಶೈತ್ಯ ಸೌಭಾಗ್ಯಮಾಂದವ್ಯದಿಂ ಮರುತ ಸಂಚರಿಸಿದಂ ೧೫

ಕುಮುದಕ್ಕೆ ಮುದವೇರೆ ಕಮಲಂಗಳೆದೆಯಾರೆ
ಭ್ರಮರಗಳು ಪಾರಾಡೆ ಚಕ್ರಗಳ ಮುಖಬಾಡೆ
ಪ್ರಮುದವದು ಜೊನ್ನವಕ್ಕಿಗೆ ಕೂಡೆ ನಭದಲ್ಲಿ ತಾರಾಳಿಗಳು ಮೂಡಲು
ತಿಮಿರಾಳಿ ತಲೆದೋರೆ ಪಕ್ಷಿಗಳು ನೆರೆ ಸಾರೆ
ಭ್ರಮಿಸಿ ಕಳ್ಳರು ಕೂಡೆ ಪಾಣ್ಬೆಯರು ನಲಿದಾಡೆ
ಕಮಲಾಪ್ತನಸ್ತಮಯಕಾಲದೊಳಗಿಂತಾಗುತಿರಲತ್ತಲಾ ಕಾದಲರ್ ೧೬

ಚಿತ್ತದನುತಾಪದಿಂ ಚಿಂತಿಸುತಲೆಡೆವಿಡದೆ
ಚಿತ್ತಜಾಂತಕನಂಘ್ರಿಕಮಲಗಳ ಧ್ಯಾನಿಸುತ
ಮತ್ತೆ ಶ್ರೀಜಂಗಮದ ತೀರ್ಥಪ್ರಸಾದಗಳ ಸೇವಿಸುವ ಸದ್ಭಕ್ತಿಯ
ಗೊತ್ತಾಳಿಯತಿ ಹಸಿವುತೃಷೆಗಳಿಂ ಬಾಡಿ ಬಳ
ಲುತ್ತ ನಿಶ್ಚೇತನದ ಮೂರ್ತಿಯಿಂದೊಡಗೂಡು
ತುತ್ತಮಾಂಗನೆ ಸಹಿತ ಶಯನಮಂದಿರದೊಳಗೆ ಮಲಗಿರ್ದನಾ ರಾತ್ರಿಯೊಳ್ ೧೭

ಶ್ರೀ ಗಿರಿಸುತಾಕಾಂತನಾ ಸಮಯಮಂ ತಿಳಿದು
ರಾಗದಿಂದಗಜಾತೆ ಮುಖ್ಯ ಪ್ರಮಥರಿಗೊರೆದು
ಭೂಗಗನಮರಿವಂತೆ ಬಂದನಾನತಭಕ್ತಪರಿಪಾಲನೆಂದೆಂಬುದ
ಈಗ ತೋರುವ ತೆರದಿ ಸ್ವಪ್ನದೊಳಗೆಚ್ಚರಿಸಿ
ನಾಗಪತಿ ಮುಪ್ಪಿನಾಯಕರಿಂಗೆ ಪ್ರೇಮದಿಂ
ಭೋಗಿಪತಿಸೂತ್ರ ಸೂಚಿಸಿದನದನೇನೆಂಬೆನಚ್ಚರಿಯಃ ಭೂತಳದೊಳು ೧೮

---

೧ ದಗಾ (ಕ. ಚ)

ಕೋಡದಿರಿ ಮನದೊಳಗೆ ನಿಮ್ಮಗಳ ಭಕ್ತಿಫಲ
ನೋಡಬೇಕೆಂದು ನಾ ಮಾಡಿದೆನು ಕೃತಕಮಂ
ಕಾಡಿದೆನು ಬಳಿಕೊಂದು ಲೀಲೆಗೋಸ್ಕರವಾಗಿ ಕೇಳೆಂದು ಭೂತಳದೊಳು
ರೂಢಿವೆತ್ತಸಮ ಶ್ರೀ ಚೆನ್ನಗಿರಿಯೊಳ್ ತಪವ
ಮಾಡುತಿಹ [ಚಿದ್ರೂಪ][1] ಮಹಲಿಂಗ ಮುನಿವರನು
ಗಾಢಿಯಿಂದಾರರಿಯದಂತಿರ್ಪನೆಂದು ದಂಪತಿಗಳಿಗೆ ಸೂಚಿಸುತಲಿ ೧೯

ನಿರುಪಮ ನಿರಾಲಂಬ ನಿರ್ಮಾಯನೆಂದೆನಿಪ
ಪರಮ ಮಹಿಮನ ಲೀಲೆ [2][ಯಚ್ಚರಿಯು][2] ನರರಿಂಗೆ
ನಿರುತ ನಿಮ್ಮಯ ಭಕ್ತಿ ಕಲ್ಪಕುಜವೆಂಬಂತೆ ಪರಿರಮ್ಯವಾಗಿರುತಲಿ
ಭರದಿಂದ ತತ್ಪಾದ ತೀರ್ಥಪ್ರಸಾದಗಳ
ತರಣೆಂದು ಸೇವಿಸುತ [3][ಪೂಜಿಸುತ][3] ಸಂತತಂ
ಹರುಷದಿಂದಿಹುದೆಂದು ಹರ ಪೇಳ್ದು ಸ್ವಪ್ನದೊಳ್ ನಿಜರೂಪಮಂ ತೋರುತ ೨೦

ಎಚ್ಚರಿಸಿ ಪೋಗಲ್ಕೆ ಸತಿಪತಿಗಳೀರ್ವರುಂ
ಅಚ್ಚರಿಯಲಾ ಭ್ರಾಂತ ಸ್ವಪ್ನದಿಂಗಿತಮೇನು
ಕಿಚ್ಚುಗಣ್ಣನು ಪೇಳ್ದ ಬಚ್ಚ ಬರಿ ಪರ ಬೊಮ್ಮದಚ್ಚಾದ ಜಂಗಮವಿದು
ಸಿಚ್ಚವಾಗಿಹ ಮಾತು ನಿಜವೆಂದು ಭಾವದೊಳ್
ಮೆಚ್ಚುತ್ತ ಮನದ ಸಂಶಯದ ಗಂಟಂ ಬಿಡದೆ
ಬಿಚ್ಚುತ್ತಿರಾ ಸಮಯದೊಳು ನೇಮ ಕೈಗೂಡಿತೆಂಬಂತೆ ಮುಂಗೋಳಿಯು ೨೧

ಬೀರಿತ್ತು ಕತ್ತಲೆಯು ಜಾರಿತ್ತು ಮುಂಬೆಳಗು
ತೋರಿತ್ತು ತಂಗಾಳಿ ಬೀರಿತ್ತು ಚಕ್ರ ನಲ
ವೇರಿತ್ತು ಜನ್ನವಕ್ಕಿಗೆ ದುಗುಡ ಹೇರಿತ್ತು ತಾವರೆಗೆ ಸಂತಸವದು
ಸೇರಿತ್ತು ನೈದಿಲೆದೆಯಾರಿತ್ತು ಭ್ರಮರಾಳಿ
ಪಾರಿತ್ತು ವಿಹಗತತಿ ಹಾಡಿತ್ತು ಪೊಳ್ತುದಲೆ
ದೋರಿತ್ತು ಬಳಿಕವರ ನೇಮ ಕೈಸಾರಿತ್ತು ತತ್ಕಾಲದೊಳ್ ಜಗದಲಿ ೨೨

---

೧ ಯ. ಮ. (ಕ. ಚ.) ೨ ಯಂಬರ (ಕ. ಚ.) ೩ ನಾಲ್ಯಿಸಿ (ಕ. ಚ.)

ಇಂದಿವರ ಮನದೆಣಿಕೆಕಲ್ಪಕುಜ ಫಲವಾಯ್ತು
ಚೆಂದದಿಂ ನೋಡಬೇಕೆಂದು ನಿಜನೇತ್ರಮಂ
ಕಂದುಗೊರಲನು ತೆರೆದನೆಂಬಂತೆ ದಿನಪನುದಯಾಚಲದಿ ಮೆರೆದಿರ್ದನು
ಸಂದ ಸಂತೋಷದಿಂದಂದುಮಾ ಕಾದಲರ್
ಕುಂದದೇ ಮಹ ಸ್ವಪ್ನಸೂಚನೆಯ ಸದ್ಭಕ್ತ
ವೃಂದಕೆಡೆವಿಡದೆ ಪೇಳುತ್ತ ಕೌತುಕವಮಾಂತು ತದ್ಗಿರಿಗೆ ಬರುತಿರ್ದರು ೨೩

ಪರಿಜನಂ ಪುರಜನಂ ಮೊದಲಾದ ಸರ್ವಜನ
ಹರಹರ ಮಹಾದೇವ ಕೌತುಕವಲಾ ಜಗದಿ
ನಿರಘ ಮಹಲಿಂಗ ಜಂಗಮವರ್ಯ ತಾ ಬಂದು ಎಂತಿರ್ಪನೋ ಗಿರಿಯೊಳು
ಪರಮ ದಂಪತಿಗಳಿಗೆ ಸ್ವಪ್ನಸೂಚನೆಯೆಂತೊ
ಪರಮೇಶ ತಾನಿರದೆ ಪೇಳ್ವನೆಂತೋ ಬಳಿಕ
ನಿರುತ ಶೀಲಮದೆಂತೊ ದೃಢಭಕ್ತಿಫಲವೆಂತೊ ಪ್ರತ್ಯಕ್ಷ ತಾನಾದನು ೨೪

ಚಂಡಿಕಾವರನ ಕೃಪೆಯಾಯ್ತು ಸದ್ಭಕ್ತರಿಗೆ
ಮಂಡಿತದ ಮಧ್ಯದೊಳು ಮಹಲಿಂಗಮುನಿ ತಪಕೆ
ಮಂಡಿಸಿರ್ದಪನೆಂದು ತಮತಮಗೆ ಸಾರುತ್ತ ತದ್ಗಿರಿಯನೇರುತ್ತಿರೆ
ಪುಂಡರೀಕಾಕ್ಷಿಸಹ ನಾಗಾಖ್ಯ ಮುಂಬರಿದು
ಖಂಡಪರಶಿವನ ಮಹಿಮಾವಲಂಬನ ಘನಕ
ರಂಡನೆಂಬಂತೆ ಥಳಥಳಿಪ ಚಿನ್ಮಯನಿರವಕಂಡಾಗ ಸ್ವೈಗೆಡೆದನು ೨೫

ತನುಧರ್ಮಗಳ ಮೀರಿ ತಾಮಸವ ನೆರೆ ತೂರಿ
ಮನದ ಮಾಯವ ಮೀರಿ ಮಲತ್ರಯಂಗಳ ಕೇರಿ
ಜನನಮರಣವ ಮೆಟ್ಟಿ [ಕಾಲಕರ್ಮವ ಕುಟ್ಟಿ] ಕಾಮಾದಿ ವರ್ಗಂಗಳ
ಘನತೆಗಳ ಜರೆವುತ್ತ ವರ್ಗಗಳ ಮುರಿವುತ್ತ
ಮಿನುಪ ಮಹಲಿಂಗಾಂಗಸಮರಸದ ಸದ್ಭಾವ
ಘನಕೆ ಘನವಾದ ಚಿನ್ಮಯನಿರವ ನೋಡುತ್ತ ದಂಪತಿಗಳಾಕ್ಷಣದೊಳು ೨೬

ಕರ್ಮಹರ ಮಹಲಿಂಗ ಜಂಗಮೋತ್ತಮ ಇಂದು
ನರ್ಮನರಿಯದ ಮಹಾ ಮುಗ್ಧರಿಗೆ ಸ್ವಪ್ನದೊಳ್
ಧರ್ಮಗಿರಿಧರ್ಮ ತಾ ಕೃಪೆಮಾಡಿ ಬಂದಾಗ ಸೂಚಿಸಿದ ನಿವ್ಮಿರವನು
ಕರ್ಮಬಾಧ್ಯರನೆಂದು ದಯದಿಂದೆ ಪಾಲಿಪುದು
ಶರ್ಮದ ಸದಾನಂದ ಮೂರ್ತಿಯೆಂದೆಡೆವಿಡದೆ
ಕೂರ್ಮೆಯಿಂ ಕೊಂಡಾಡುತಿರೆ ಒಳಿಕ ಕಣ್ದೆರೆದು ಸರ್ವಜ್ಞ ನಿಟ್ಟಿಸುತಲಿ ೨೭

ಮೃದುವಚನರಚನೆಯಿಂ ಮುಂದೆಸೆಗೆ ಕರೆವುತ್ತ
ಸದಮಲಾನಂದ ಕರಪದ್ಮ ಶಿರದೊಳಗಿಟ್ಟು
ಮದನಹರನಾಜ್ಞೆ ನಿಮಗಾದಂತೆ ಲಿಂಗದೊಳು ತೋರಿತ್ತು ಸಂತಸದೊಳು
ವಿದಿತ ದೃಢನೇಮಗಳು ಸಫಲವಾದಂತೀಗ
ಒದಗಿತೀ ಜಂಗಮಂ ಬೆದರಬೇಡೆಂದಾಗ
ಪದುಳದಿಂ ಸಂತೈಸುತಿರೆ ಸರ್ವಜನ ಕಂಡು ನಮಿಸಿ ಪೊಗಳುತ್ತಿರ್ದರು ೨೮

ನಾಗಾಖ್ಯ ಮುಪ್ಪಿನಾಂಬೆಯರಾಗ ನಮಿಸುತಿರೆ
ಯೋಗಿವರ ಮಹಲಿಂಗನಡಿಗಳ್ಗೆ ಭಕ್ತಜನ
ರಾಗ ಕೊಂಡಾಡುತ್ತೆ ಸಕಲ ಸೌರಂಭದಿಂದಾ ಪುರವ ಸಿಂಗರಿಸಲು
ನಾಗಧರ ಕನಕಾದ್ರಿಯನ್ನಿಳಿವನೆಂಬಂತೆ
ರಾಗದಿಂ ಚೆನ್ನಗಿರಿಯಿಂದಿಳಿದು ಮುಂದೆಸೆಗೆ
ಸಾಗುತ್ತ ಸರ್ವಜ್ಞಮೂರ್ತಿ ಬಿಜಯಂಗೈದ ಸಂಭ್ರಮವನೇನೆಂಬೆನು ೨೯

ಭೇರಿ ತಮ್ಮಟ ಕಹಳೆ ನಿಸ್ಸಾಳಗಳ ಶಬ್ದ
ಪೂರಿಸಲ್ ದಿಕ್ತಟದಿ ಭಕ್ತಾಳಿ ಬಿಡದೆ ಕೈ
ವಾರಿಸುತ ಜಯಜಯತುಘೋ ಚಾಂಗು ಭಲರೆಂದು ಕೊಂಡಾಡೆ ಕಾಮಿನಿಯರು
ಮಾರಹರನಿಗೆ ಮುತ್ತಿನಾರತಿಗಳಂ ಬೆಳಗಿ
ಚಾರು ಚರಣಕ್ಕೆರಗಿ ಪರಸುತ್ತಲಾಕ್ಷಣದಿ
ಭೂರಿ ಸಂಭ್ರಮದಿಂದೆ ತತ್ಪುರವನೊಳ್[೧]ಪೊಕ್ಕು[೧] ಬರುತಿರ್ದರೇನೆಂಬೆನು ೩೦

---

೧ ಕೊಂಡು (ಕ.)

ಮದಸಿಂಧುಗಮನೆಯರ್ ಮಲಯಜದ ಗಂಧೆಯರ್
ಮೃದುನುಡಿಯ ಜಾಣೆಯರ್ ಕಾಳಾಹಿವೇಣಿಯರ್
ವಿಧುಬಿಂಬವದನೆಯರ್ ಕುಂದದಾಭರಣೆಯರ್ ಕೂರ್ಮಾಂಗಸಮ[೧]ಪ್ರಾಣೆಯರ್
ಮೃದುಕಮಲಪಾಣಿಯರ್ ಸಕಲಗುಣಜಾಣೆಯರ್
ಚದುರತನದಿಂ ಬಂದು ಮಹಲಿಂಗನಡಿಗಳ್ಗೆ
ಪದುಳದಿಂ ನಮಿಸಿ ಪೊಗಳುತ್ತಿರ್ದರಾತನ ಮಹಾಮಹಿಮೆಯುನ್ನತಿಯನು ೩೧

ಈತ ನಿರ್ಮಾಯ ನಿಜ ಸಹಜ ಜಂಗಮನಂತೆ
ಈತ ಶಿವನಾಜ್ಞೆಯಿಂ ಧರೆಗೆ ಬಂದವನಂತೆ
ಈತ ಜನ್ಮಾತೀತ ಸಪ್ತಶತವರ್ಷ ಬಾಳ್ದವನಂತೆ ಭೂತಳದೊಳು
ಈತ ಶ್ರೀ ಕಾಶಿ ಮೊದಲಾದಸಮ ಕ್ಷೇತ್ರಗಳ
ಜಾತಮಂ ಸಂಚರಿಸಿ ಬಂದ ಮುನಿವರನಂತೆ
ಈತ ಜಗದಾರಾಧ್ಯನಂತೆ ನೀ ನೋಡೆಂದು ಪೊಗಳಿ ಕರವಂ ಮುಗಿದರು ೩೨

ಅಂಗಜಾಂತಕ ಸ್ವಪ್ನದೊಳ್ ಪೇಳ್ದನಂತೆ ಗಡ
ತುಂಗಗಿರಿ ಮಧ್ಯದೊಳ್ ತಪಮಿರ್ಪನಂತೆ ಗಡ
ಪಿಂಗದೆ ಮಹಾ ಮುಪ್ಪಿನಾಂಬೆ ನಾಗಾಕ್ಷಿಗಳ ಮುಖ್ಯ ನೇಮದ ಭಕ್ತಿಗೆ
ಮಂಗಲಾಕ್ಷಂ ಮಹಿಮ ಮೆಚ್ಚಿ ಬಂದಂತೆ ಗಡ
ಜಂಗಮಕುಲಾಂಭೋಧಿ ಪೂರ್ಣಚಂದ್ರಮನಂತೆ
ಪೊಂಗೊಡದ ಮೊಲೆ ಸೋನೆಗಂಗಳೆಯೆ ನೋಡೆಂದು ಕೈಸನ್ನೆಯಿಂ ತೋರಿದಳ್ ೩೩

ಇಂತಪ್ಪ ಸಂಭ್ರಮದಿ ಪರಿಜನಂ ಪುರಜನಂ
ಮುಂತಾಗಿ ಸಕಲಜನ ಕೊಂಡಾಡುತಿರೆ ಬಿಡದೆ
ಅಂತಕಾಂತಕರೂಪ ಮಹಲಿಂಗನೊಡಗೊಂಡು ತತ್ಪುರದ ಘನವೀಥಿಯೊಳ್
ಸಂತಸದಿ ಬರುತಿರಲು ಸೋಮ ಸೂರ್ಯಾದಿಗಳ
ಸಂತತಿಯ ಕೀಳ್ಪಡಿಪ ಘನ ಬೆಳಗಿನಿಂದಿಡಿದು
ಮುಂತೆಸೆವ ತದ್ಭಕ್ತರಾಲಯವನೊಳಪೊಕ್ಕರೇನೆಂದು ಬಣ್ಣಿಸುವೆನು ೩೪

---

೧ ಪಾಣಿ (ಕ.ಚ.)

ಮಣಿಖಚಿತ ಪೀಠವುಂ ಸಿಂಗರಿಸಿ ಮೌನಿಕುಲ
ಮಣಿಮಹಾಲಿಂಗನ ಕರಾಂಬುಜವ ಪಿಡಿವುತ್ತ
ತಣಿಯದಾನಂದದಿಂ ಮೂರ್ತಿಗೊಳಿಸುತ ಭಕ್ತಜನರಾಗ ಪದಪದ್ಮಕೆ
ಮಣಿದು ಕೊಂಡಾಡುತ್ತೆ ಪರಸುತ್ತ ಬಳಿಕವರ
ನಣಿಯರಂ ಕಳುಪುತ್ತವಿರಲತ್ತ ಭಕ್ತಿಸುಖ
ಕಣಿಯೆನಿಪ ನಾಗಾಖ್ಯಮುಪ್ಪಿನಾಂಬೆಯುರಾಗ ಉಪಚಾರವುಂ ಗೈವುತ ೩೫

ನಿಗಮಾಗಮೋಕ್ತ ವಿಧಿಯಿಂದಾದ ಪೂಜೆಯುಂ
ಬಿಗಿಗೊಳಿಸಿ ಭಕ್ತಿಯುಂ ಪರುಠವಿಸಿ ದಂಪತಿಗ
ಳಗಣಿತ ಮಹಾಮಹಿಮನಂಘ್ರಿಜಲಶೇಷವಂ ನೆರೆ ಸವೆದು ಮಾನಸದೊಳು
ಸೊಗಸೇರಿ ಸಮ್ಮುಖದಿ ಕರಪದ್ಮಗಳ ಮುಗಿದು
ಸುಗುಣಮಣಿಮಾಲ ಮಹಲಿಂಗಜಂಗಮ ನಿಮ್ಮ
ಬಗೆಯನರಿಯದ ಮುಗ್ಧಶೀಲರಿಗೆ ಮೈದೋರಿ ಪಾಲಿಸಿದಿರೀ ಧಾತ್ರಿಯೊಳ್ ೩೬

ಎಂದು ಪಲವಂದದಿಂ ಪೊಗಳುತಿಹ ಸತಿಪತಿಗ
ಳಂದವಂ ನೋಡುತ್ತ ಸಂತೈಸುತೆಲೆ ತಾಯೆ
ಸಂದುದುಕಣಾ ಶರ್ವನಾಜ್ಞೆಯಿಂದೀ ಲೀಲೆ ನಿಮ್ಮ ಪಾಲಿಸಲೋಸುಗ
ಸಂದೇಹಮಿಲ್ಲಿದಕೆ ಸಂತಸದೊಳಿಹುದೆಂದು
ಇಂದುಧರರೂಪ ಮಹಲಿಂಗ ಮುನಿವರನಂದು
ಚಂದದಿಂದಿರುತಿರ್ದ ಚೆನ್ನಗಿರಿಯಾಶ್ರಮವೆ ನಿಜವೆಂದು ಮಾನಸದೊಳು ೩೭

ಇದು ಬಸವಸುಕುಮಾರವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ನೀಗಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೩೮

**ಅಂತು ಸಂಧಿ ೫ ಕ್ಕಂ ಪದ ೧೯೮ ಕ್ಕಂ**

**ಮಂಗಳಂ**

**ಶ್ರೀ**

ಶ್ರೀ

# ಆರನೆಯ ಸಂಧಿ

ಸೂಚನೆ : ಪರಮ ಶ್ರೀ ರುದ್ರಾಭಿಷೇಕದೋದಕದಿಂದ
ಹರಶರಣೆ ರುದ್ರಿಯಮ್ಮಗೆ ನೇತ್ರಮುಮನಿತ್ತು
ಕರುಣಿ ಮಹಲಿಂಗಜಂಗಮ ಮೆರೆದನಗಣಿತಪವಾಡವನಿಳಾತಳದೊಳು

ನಿಗಮಚಾಲತುರಂಗ ನೀಲಕಾಯಕುರಂಗ
ಮೃಗಲಕ್ಷಣಪತಂಗ ಪರಮದಿವ್ಯರಥಾಂಗ
ಜಗತೀವಲಯಲಯಶತಾಂಗ ಜ್ವಾಲೀಕೃತಸುಭಂಗ ೧ಹರಿಸುತ೧ಸಾರಥಿ
ನಗಧರ್ಮ ಪುರಭಂಗ ನಂದೀಶವರಲಿಂಗ
ಮೃಗಪಾಣಿ ಧವಲಾಂಗ ಮುಕ್ತಿಲಲನಾಸಂಗ
ಗಗನಾಪಗಾಭಂಗಸಂಗತಜಟಾಪಟಲ ಶ್ರೀ ಚೆನ್ನವೀರೇಶ್ವರ ೧

ಲಾಲಿಸೆಲೆ ಗಿರಿಜಾತೆ ಮಹಲಿಂಗಜಂಗಮದ
ಲೀಲೆಯಂ ಪೇಳಲಸದಳಮೆನಗೆ ಬಳಿಕೊಂದು
ನಾಲಗೆಯನಾಂತ ನರಗೆಂತು ಪವಣಾದಪುದು ಪೇಳುವಡೆ ಭೂಭಾಗದೊಳ್
ಕಾಲಕರ್ಮಾರಣ್ಯದಾವಾಗ್ನಿಯೆಂದೆನಿಪ
ಶೀಲನಾ ನರಗಟ್ಟೆಪುರದ ಸದ್ಭಕ್ತಜನ
ಜಾಲಮಂ ಪಾಲಿಸುತ ಪರಮಸಂತಸದಿಂದಮಿರುತಿರಲುಮೊಂದಿನದೊಳು ೨

---

೧ ಜಲಜಾಕ್ಷಭವ (ಕ.ಚ.)

ಭದ್ರಗುಣಗಣಭರಿತೆ ಭಾವಿತಾಮಲಚರಿತೆ
ಕ್ಷುದ್ರ ದುರಿತವಿದೂರೆ ದುಷ್ಟ ಮತ ಸಂಹಾರೆ
ಅದ್ರಿಜಾವರಭಕ್ತೆ ಅಸಮಗುಣಕುಲರಕ್ತೆ ಭವಜಾಲಸನ್ಮುಕ್ತೆಯು
ಚಿದ್ರಸಾಂಬುಧಿಚಂದ್ರೆ ಚಿಲ್ಲಿಂಗನುತಿಸಾಂದ್ರೆ
ರುದ್ರಮ್ಮನೆಂಬಸಮ ಶರಣೆ ತಾ ಬಂದು ಭೂ
ರುದ್ರನ ಪದಕ್ಕೆರಗಿ ಕರಕಂಜಮಂ ಮುಗಿದು ಭಕ್ತಿಯಿಂ ಬಣ್ಣಿಸಿದಳು ೩

ಪಿಂಗಳ ಜಟಾಪಟಲ ಸಂಗತ ಮಹಾಮಹಿಮ
ಮಂಗಲಗುಣಾವರಣ ಮದನಮದಸಂಹರಣ
ಜಂಗಮಕುಲಾಭರಣ ಜಡಜನ್ಮನಿರಹರಣ ಜಗಜಾಲ ಪರಪಾವನ
ತುಂಗ ಶರಣಾಭರಣ ಸ್ಥೂಲ ಜನನತ ಚರಣ
ಲಿಂಗಸಮರಸಹರಣ ಮಹಲಿಂಗಮೌನಿಕುಲ
ಪುಂಗವನೆ ನೇತ್ರಮುಮನಿತ್ತು ಪಾಲಿಪುದೆನ್ನ ಸಂತತಂ ಕರುಣಾಬ್ಧಿಯೇ ೪

ಎಂದು ಪಲವಂದದಿಂ ಪೊಗಳುತ್ತ ಸಮ್ಮುಖದಿ
ನಿಂದ ಶ್ರೀರುದ್ರಿಯಕ್ಕನ ಪರಮ ವದನಾರ
ವಿಂದಮಂ ನೋಡುತ್ತ ಕರುಣದಿಂ ಕರೆದು ಮನ್ನಿಸುತಾಗ ತನ್ನೇತ್ರಕೆ
ಸಂದ ನಿಜ ರುದ್ರಾಭಿಷೇಕಜಲಮಂ ತರಿಸಿ
ಇಂದುಧರ ಚಿದ್ರೂಪನಮೃತ ಕರದಿಂ ತಳಿಯೆ
ಚೆಂದದಿಂ ಚೆನ್ನೈದಿಲದ ಕುಸುಮದಂತೆಸೆದುದೇನೆಂಬೆನಚ್ಚರಿಯನು ೫

ಮುನ್ನಿನಂತಾನೇತ್ರ ಥಳಥಳಿಸುತಿರಲಾಗ
ಚೆನ್ನ ಶ್ರೀ ರುದ್ರಿಯಕ್ಕನು ಹರುಷಜಲಧಿಯೊಳು
ನನ್ನಿಯಿಂ ತೇಲಾಡುತಲೆ ದೇವ ದೇವೇಶ ಧನ್ಯಳಾದೆನು ಜಗದೊಳು
ನಿನ್ನ ಪದರುದ್ರಾಭಿಷೇಕ ಜಲಮಹಿಮೆಯಂ
ಪನ್ನಗೇಶನಿಗಿಂದು ಬಣ್ಣಿಸುವೊಡರಿದಾಯ್ತು
ಚೆನ್ನೈದಿಲೆಯ ತೆರದೊಳೆನ್ನಾಲಿ ಕಾಣುವದು ಮಹಲಿಂಗಮುನಿಚಂದ್ರಮ ೬

ಎಂದು ಕೊಂಡಾಡುತಿಹ ಸತಿಯ ನಯನಾಬ್ಜವಂ
ಮುಂದುವರಿವುತ ನೋಡಿ ಮೂಜಗದೊಳರಿದಾಯ್ತು
ಕಂದುಗೊರಳನೆ ಬಲ್ಲನೆಂದು ಸದ್ಭಕ್ತಜನರಂದು ಸ್ವೈವೆರಗಾಗುತ
ಇಂದುಧರನಂ ಕೂರ್ತು ಶ್ರೀಕಾಂತ ಪೂರ್ವದೊಳ್
ಸಂದ ದಾನವರ ಸಂಹರಿಸಲೋಸುಗವಾಗಿ
ಬಂಧುರದ ಚಕ್ರಮಂ ಪಡೆಯಬೇಕೆಂದಮಲ ಭಕ್ತಿಯಿಂ ಭಾವಿಸುತಲಿ ೭

ಅಂಬಿಕಾಕಾಂತನಡಿದಾವರೆಯನೆಡೆವಿಡದೆ
ಅಂಬುಜಸಹಸ್ರಗಳ ಗಣನೆಯಿಂ ಭಜಿಸುತಿರೆ
ಶಂಬರಾರಿಯ ಪಿತನ ಶ್ರದ್ಧೆಯಂ ಪ್ರಕಟಿಸುವ ಕಾರಣದಿನೊಂದಿನದೊಳು
ಅಂಬರಾಳಕನೊಂದು ಕುಸುಮಕೊರತೆಯ ಮಾಡೆ
ಮುಂಬರಿದು ಹರಿ ತನ್ನ ನೇಮ ತಪ್ಪುವದೆಂದು
ಬಿಂಬಿಸುವ ನೇತ್ರಮಂ ಕಿಳ್ತು ಶಂಕರನಡಿಗೆ ಧರಿಸಿ ಕೊಂಡಾಡುತಿರಲು ೮

ಗೌರಿಯರಸನು ಮೆಚ್ಚುತೆಡೆವಿಡದೆ ಮನದೊಳಗೆ
ಶೌರಿ ನಿನ್ನಯ ಭಕ್ತಿ ಸಾಹಸದ ನಿಶ್ಚಲದ
ಸ್ವೈರಣೆಗೆ ನಾನೊಲಿದೆ ಬೇಡು ಮನದಿಚ್ಛೆಯಂ ಪಾಲಿಸುವೆನೆನೆ ಕೇಳುತ
ಮಾರಪಿತ ಮಂದಹಾಸಂಗೈವುತೆಲೆ ದೇವ
ಕ್ರೂರ ದೈತ್ಯರ ಮರ್ದನವ ಮಾಡುವೆನು ಹಸ್ತ
ವಾರಿಜದೊಳಿಹ ಪರಮ ಪಾರುಂಬಳೆಯನಿತ್ತು ನಯನಾಬ್ಜವಂ ಕರುಣಿಸು ೯

ಎಂದು ಹರಿ ಬಿನ್ನೈಸೆ ಮಂದಾಕಿನೀಜೂಟ
ನಂದು ನಿಜಹಸ್ತದೊಳ್ ಸಂದ ಚಕ್ರವನಿತ್ತು
ಕುಂದದಕ್ಷಿಯ ಹರಿಗೆ ಪಾಲಿಸಿದನೆಂದೆಂಬ ವ್ಯಾಸಮುನಿಪತಿನಿರ್ಮಿತ
ಸ್ಕಂದ ಪೌರಾಣದೊಳು ಪೇಳುತಿಹ ಸತ್ಕಥೆಯ
ಚ[1]ಂದದಿಂ ಕೇ[2]ಳ್ದು ಬಲ್ಲೆವು ಬಳಿಕ ಧಾತ್ರಿಯೊಳು
ಕಂದರ್ಪಹರರೂಪ ಮಹಲಿಂಗ ತಾನಿತ್ತ ರುದ್ರಿಯಮ್ಮನ ನಯನಮಂ ೧೦

೧ ಸ (ಕ.ಚ.) ೨ ಪೇ (ಕ.ಚ.)

ಅಚ್ಚರಿಯಲಾ ಜಗದಿ ಕಂಡರಿಯೆವೀ ಮಾತ
ಅಚ್ಯುತನು ಭಕ್ತಿಯಿಂ ನಿಜನೇತ್ರಮಂ ಕೊಡಲು
ಕಿಚ್ಚುಗಣ್ಣನು ಮೆಚ್ಚಿ ತಾ ನಯನಮಂ ಕೊಟ್ಟ ಮುಯ್ಯಿಂಗೆ ಮುಯ್ಯಾಯಿತು
ಸಚ್ಚರಿತೆ ರುದ್ರಿಯಮ್ಮನ ಭಕ್ತಿಸಾಹಸಂ
ನಿಶ್ಚಲದ ಮಹಲಿಂಗ ಲೀಲೆಯಂತಲ್ಲ ಗಡ
ನಿಚ್ಚನಿಂದು ನಿರ್ಮಾಯ ಜಂಗಮದ ಮಹಿಮೆಯಂ ಬಲ್ಲವರದಾರ್ ಜಗದೊಳು ೧೧

ಮತ್ತ ಮಂತಲ್ಲದಲೆ ಪೂರ್ವದಲಿ ಸತ್ಕವಿಕು
ಲೋತ್ತಮನೆನಿಪ್ಪ ಕವಿ ಕಾಳಿದಾಸಂ ಬಿಡದೆ
ಚಿತ್ರಜಾರಿಯನೊಲಿಸಿ ಮನದ ವಾಂಛಿತವನ್ನು ಪಡೆದನಂದಾಕ್ಷಣದೊಳು
ಚಿತ್ತದೊಳು ನಲವೇರುತೆಂಟುಕಾಲಿನ ನೆಲವ
ಬಿತ್ತರದಿ ತೂಲಾಗ್ರದೊಳ್ ಬಂಧಿಸುತ್ತೊರೆಯ
ಕಿತ್ತಲಗುಮಂ ನಡಿಸಿ ತನ್ಮಧ್ಯದೊಳ್ ಮೂರ್ತಿಗೊಂಡಷ್ಟ ಪದ್ಯಂಗಳಿಂ ೧೨

ಕೀರ್ತಿಸಿದಂ

ಪದ ॥ ಮಾಮವ ಭಾಮಹ ಮೇರುನಿವೇಶಾ
ಸ್ವಾಮಿ ಜಗದ್ಗುರು ಕಾಮವಿನಾಶಾ
ರಾಮಕಲಾಮೃತಧಾಮ ಗಣೇಶಾ ೧

ಸೋಮ ಧಾಮ ನಿಧಿ ಭೀಮ ಸುನೇತ್ರಾ
ಭೀಮ ಸೋಮ ರುಚಿರಾಮಲಗಾತ್ರಾ
ಭೀಮವರಪ್ರದ ಸೋಮ ದಿನೇಶಾ ೨

ಸೋಮಸಖಾಮೃತ ಪ್ರೇಮಗಣೇಶಾ
ಭೀಮ ಮದಾಚಲ ಸ್ತೋಮ ಸುರೇಶಾ
ರಾಮಚಂದ್ರನುತ ವ್ಯೋಮ ಸುಕೇಶಾ ೩

[ಸಾಮಗಾನ][೧] ಸಂಗೀತ ವಿಚಾರಾ
ಹೈಮವತೀಮುಖಚಂದ್ರ ಚಕೋರಾ
ಸೋಮಕಲಾಧರ ಹೋಮವಿನಾಶಾ ೪

ಬಾಣಮಯೂರಮನೋರಥದಾತಾ
ಬಾಣದೈತ್ಯಸಂತ್ರಾಣಸುಪ್ರೀತಾ
ಬಾಣದನುಜಮದಬಾಣ ದಿನೇಶಾ ೫

ಕೇಶವಕಂಕಣಪೂಜಿತಪಾದಾ
ರೇಶೀತೂರಣರಂಗ ವಿನೋದಾ
ವಾಸುಗಿ ವರಗುಣ ಭಾಸುರವೇಶಾ ೬

ಗೋಪಮುಖಾಮರಸನ್ನುತಶೀಲಾ
ಗೋಪಚಾಪಪುರಲೋಪವಿಲೋಲಾ
ಗೋಪ ವರಧ್ವಜ ಗೋಪ ಮಹೇಶಾ ೭

ಚಂಚಲ ಕಾಂಚನ ವಂಚಿತ ನೇತ್ರಾ
ಸಂಚಿತ ಕರ್ಮಾವಲ್ಲರಿ ಧಾತ್ರಾ
ಪಂಚವಕ್ತ್ರ ವರ ಪರಮೇಶಾ ೮

ಎಂದು ಕೊಂಡಾಡುತ್ತ ಕವಿಕಾಳದಾಸ ತಾ
ನೊಂದೊಂದು ಪದ್ಯದಿಂ ಒಂದೊಂದು ಕಾಲುಮಂ
ಚಂದದಿಂ ಸಂಕುಲದಿ ಖಂಡಿಸುತ್ತುಳಿದೊಂದು ಕಾಲುಮಂ ಕೊರೆವುತ್ತಲಿ
ಸಂದ ಕರವಾಳದಗ್ರದಿ ಬೀಳುತಿರೆ ಬಂದು
ಮಂದಾಕಿನೀಜೂಟ ತರ್ಕೈಸಿ ತೆಕ್ಕೆಯೊಳ
ಗಿಂದು ಮುಚ್ಚಿದೆಕಣಾ ಕವಿಕುಲಾಂಬುಧಿಚಂದ್ರ ಮನದಿಚ್ಛೆಯುಂ ಬೇಡೆನೆ ೧೪

೧ ಸೋಮಸೂನ (ಕ. ಚ.)

ಹಸ್ತಕಮಲವ ಮುಗಿದು ನಮಿಸುತಲೆ ದೇವ ನರ
ಮಸ್ತಕಾಂಕಿತಪಾಣಿ ಲೋಕದೊಳು ನಯನ ಹೀ
ನಸ್ತರಿಗೆ ದಿವ್ಯಾಕ್ಷಿಗಳನೀಯಬೇಕೆಂಬ ಮನದೆಣಿಕೆ ಕೈಸಾರ್ದುದು
ವಿಸ್ತರಿಸಿ ನವಣಿ ಮೂಗಂಡಗದ ನೇತ್ರಗಳ
ವಿಸ್ತರದಿ ಪಾಲಿಸುವುದೆನ್ನೊಳೆನೆ ನಸುನಕ್ಕು
ದುಸ್ತರದ ವರವೆಂದು ಶಿವನಿತ್ತುಸಾರ್ದನತ್ತಲುಮಿತ್ತಲೇನೆಂಬೆನು ೧೪

ಕವಿಕಾಳಿದಾಸ ನಲವೇರುತ್ತ ಮನದೊಳಗೆ
ಕುವಲಯದಿ ಜಾತ್ಯಂಧ ಮುಖ್ಯಾಕ್ಷಿಹೀನರಿಗೆ
ಕುವಲಯೋಪಮ ಪರಮ ನೇತ್ರಗಳ ಸಂತತಂ ಪಾಲಿಸುತ ಸಂತಸದೊಳು
ಭುವನಸನ್ನುತನಾಗಿ ಭೋಜರಾಜನ ಸಭೆಯ
ಕವಿಕುಲೋತ್ತಮನೆನಿಸಿ ಶಿವಧ್ಯಾನಯುತನಾಗಿ
ವಿವಿಧಾನುರಾಗದಿಂದಿಹನೆಂಬ ಸತ್ಕಥೆಯ ಕೇಳ್ದುಬಲ್ಲಿವು ಜಗದೊಳು ೧೫

ಬಳಿಕಮಂತಲ್ಲದಲಿ ಮತ್ತೋರ್ವ ಲುಬ್ಧಕಂ
ಚೆಲುವ [೧]ಕಣ್ಣ[೧]ಪ್ಪಾಖ್ಯ ಕಾಳಹಸ್ತೀ ಕ್ಷೇತ್ರ
ದೊಳಗೆ ಶಿವಕಾಂತಾರದೊಳು ಬೇಟೆಯಾಡುತ್ತಮಿರಲೊಂದು ವಾಸರದೊಳು
ಸುಳಿವ ಮೃಗಜಾತಿಗಳ ಸಂಹರಿಸಲೋಸುಗದಿ
ಮೆಳೆ ಪೊದರಿನೊಳಗೆಲ್ಲ ಪುಡುಕುತ್ತೆ ದೊರೆಯದಿರೆ
ಕಳವಳಿಸಿ ಬಾಯಾರಿ ಹಿಂದಿರುಗಿ ಬೇಸತ್ತು ಸೂರ್ಯಾಸ್ತಮಯಕಾಲದಿ ೧೬

ಪಕ್ಕಣಕೆ ಬಂದು ಮೃಗಜಾತಿಗಳು ವಿಪಿನದೊಳ್
ಸಿಕ್ಕಲಿಲ್ಲೆಂಬ ಸಂತಾಪದಿಂ ಸನ್ಮಾನ
ದಕ್ಕರವನುಳಿದು ಮನ ಬೆಂದು ಮಲಗಿರಲು ತತ್ಕಾಲದೊಳ್ ತವಕದಿಂದೆ
ಮುಕ್ಕಣ್ಣ ಕನಸಿನೊಳ್ ಬಂದು ಕಣ್ಣಪ್ಪಾಖ್ಯ
ಕಕ್ಕುಲತೆಯಂ ಬಿಟ್ಟು ಮುನ್ನ ವಧಿಸಿದ ಮಿಗದ
ಚಿಕ್ಕುಮಂ ನನಗೀಯೆ ನಿನಗೆ ದೊರೆದಪವೆಂದು ಸೂಚಿಸುತ ಬಯಲಾದನು ೧೭

೧ ಖನ್ನ (ಕ.ಚ.)

ಆ ಕಾಲವಮಂ ತಿಳಿದು ಕಣ್ಣಪ್ಪನೇಳುತ್ತ
ಮಾಕಾಳಿನಲ್ಲ ತಾಂ ಬಂದೆನ್ನ ಸ್ವಪ್ನದೊಳ್
ಬೇಕೆಂತ ಕರುಣದಿಂ ಸೂಚಿಸಿದಲಾಯೆಂದು ಮನದೊಳಗೆ ಮರುಗುತ್ತಲಿ
ನಾಕಾಪಗಾಧರಗೆ ನಾನೆಂದು ಮಾಂಸಮಂ
ಸಾಕಾಗುವಂತೀವೆನೋ ಎಂಬ ಮುಗ್ಧಮನ
ದೇಕನೈಷ್ಠಿಯನಾಂತುಮಿರೆ ಸೂರ್ಯನುದಯಿಸಿದನೇನೆಂಬೆನಾ ಕ್ಷಣದೊಳು ೧೮

ಮುಂಬೆಳಗಿನೊಳಗೆದ್ದು ನಿಜ ಧನುರ್ಬಾಣ ನಿಕು
ರಂಬಗಳ ತಳೆದಸಮ ಕಾನನದಿ ಕಣ್ಣಪ್ಪ
ಮುಂಬರಿವುತಿರಲೊಂದು ಮೊಲ ಗುಲ್ಮಮಧ್ಯದಿಂ ಪೊರಪೊಣ್ಮಲಾ ಕ್ಷಣದೊಳು
ಅಂಬರಸುಕೇಶ ಶ್ರೀ ಕಾಳಹಸ್ತೀಶ್ವರನ
ನಂಬಿಗೆಯು ಮಿಗಿಲೆಂದು ಮನದೊಳಗೆ ನಿಶ್ಚಯಿಸಿ
ಅಂಬುಮಂ ಬತ್ತಳಿಕೆಯಿಂದುಗಿದು ಕಾರ್ಮುಖದಿ ಸೇರಿಸುತ ಸಿಂಜಿನಿಯೊಳು ೧೯

ಜಗ್ಗುತ್ತ ಕರ್ಣಪರಿಯಂತರವು ಗುರಿನೋಡಿ
ಬಗ್ಗುತ್ತ ಬಾಣದಿಂದೆಸೆಯಲ್ಕೆ ಭೂಮಿಯೊಳ್
ಮುಗ್ಗುತ್ತೆ ಮೊಲ ಬೀಳೆ ಶಬರಪತಿ ಕಣ್ಣಪ್ಪ ಕಂಡಾಗ ತವಕದಿಂದ
ಹಿಗ್ಗುತ್ತೆ ಮನದೊಳಗೆ ಬಂದದರ ನುಟಿಗೆಯಂ
ನುಗ್ಗೊತ್ತಿ ಕಡಿಕಂಡಮಂ ಮಾಡಿ ನಂಜುತ್ತ
ಬಗ್ಗದೊವಲುಡಿಯಂಗೆ ಬಲುಮಧುರಮಿಹುದೆಂದು ಲವಲವಿಸುತಾಕ್ಷಣದೊಳು ೨೦

ಅಡಗಮೆಲ್ಲವ ಕೊಂಡು ಕಡುಭಕ್ತಿಯಿಂ ಲುಬ್ಧ
ರೊಡೆಯ ಕಣ್ಣಪ್ಪಾಖ್ಯ ಮೃಡಕಾಳಹಸ್ತೀಶ
ನ ಡಿಯ ಪೂಜಿಪೆನೆಂದು ಮುಡಿಯೊಳಗೆ ನವ ಕುಸುಮಗಳ ಮುರಿದು ಸೂಡುತ್ತಲಿ
ಮಡುವಿನಗ್ಗಣಿಯನೊಕ್ಕುಡಿತೆಯಂ ಬಾಯೊಳಗೆ
ಪಿಡಿದು ಮುಂದಕೆ ನಡೆದು ಮುಗ್ಧಮನದೇಳ್ಗೆಯಿಂ
ಗುಡಿಯನೊಳಪೊಕ್ಕು ತನ್ನಡಿಗಳ ಸುಪೂಜೆಯಂ ಎಡಗಾಲಿನಿಂ ದೂಡುತ ೨೧

ಮುಕ್ಕುಳೋದಕದಿಂದೆ ಮಜ್ಜನಂಗೈವುತ್ತ
ಅಕ್ಕರದಿ ತನ್ನ ತಲೆಯೊಳು ಬಿಡದೆ ತಳೆದಸವು
ಎಕ್ಕಿ ಕಕ್ಕಿಯ ಪೂವ ಗೊಂಚಲವ ಧರಿಸುತ್ತ ಮುಗ್ಧಭಕ್ತಿಯ ಪೆರ್ಮೆಯಿಂ
ನೆಕ್ಕಿ ಸವಿನೋಡಿರ್ದ ಚಿಕ್ಕವೊಲದಡಿಗೆಯಂ
ಮುಕ್ಕಣ್ಣ ಸವಿ ಎಂದು ನೈವೇದ್ಯಗೊಟ್ಟುಳಿದ
ಬಿಕ್ಕುಮಂ ಖಾತಿಸುವ ಬಿಲ್ಲನಂ ಕಂಡಾಗ ಪೂಜಕರು ಕಡುಕೋಪದಿಂ ೨೨

ಕಾಲಕಂಧರನ ನಿಗವೋಕ್ತ ಪೂಜೆಯನಳಿದ
ಖೂಳನಿವನಂ ಕೊಲ್ಲಬೇಕೆಂದು ಪಿಡಿದ ಕರ
ವಾಳದಿಂ ಪೊಡೆಯಲ್ಕೆ ಕಂಧರದಿ ಕಂಪಿಸುವ ಪೂಮಾಲೆಯಾಗುತ್ತಲಿ
ಬೀಳಲದ ಕಂಡು ನಡುನಡುಗುತ್ತ ಮನದೊಳಗೆ
ಗೌಳಯತಿಗಳು ಭಯದಿ ಗರಹೊಡೆದವೋಲಿರಲು
ಕಾಳಹಸ್ತೀಶ್ವರಂ ಮುಚ್ಚುತ್ತ ಕಣ್ಣಪನ ಸದ್ಭಕ್ತಿಯಂ ತೋರಲು ೨೩

ಕಂಬನಿಯು ಕರೆವುತಿರೆ ಕಂಡು ಕಣ್ಣಪ್ಪಾಖ್ಯ
ಮುಂಬರಿದು ಮನದೊಳಗೆ ಮರಮರನೆ ಮರುಗುತ್ತ
ಅಂಬಿಕಾವರನಕ್ಷಿ ನೀರಚ್ಚಿಯಾಯ್ತುಕಟಯೆಂದಾಗ ತನ್ನಾಲಿಯಾ
ಅಂಬಕದ ಮೊನೆಯಿಂದ ಕಿಳ್ತು ಧರಿಸಲ್ ಬಳಿಕ
ಬಿಂಬಿಸುವ ನೇತ್ರಮದು ಪ್ರಜ್ವಲಿಸುತಿರೆ ದಕ್ಷಿ
ಣಾಂಬಕದಿ ಕಂಕಣಗಳುದುರುತಿರೆ ಕಡುಭೀತಿಗೊಂಡಾಗ ಚಿಂತಿಸುತಲಿ ೨೪

ವಾಮಾಕ್ಷಿಕೇಡಿಂಗೆ ಎನ್ನ ವಾಮಾಕ್ಷಿಯಂ
ಪ್ರೇಮದಿಂದಿತ್ತೆನದು ನಿಜಮಾಯ್ತು ಮೂಜಗದಿ
ಶಾಮಕಂಠನ ದಕ್ಷಿಣಾಂಬಕಂ ನೀರಾಂಬಕಾದುದಕೆ ಮಮನೇತ್ರಮಂ
ಕ್ಷೇಮದಿಂದಿತ್ತು ರುಜುಮಾಡಿ ತೋರುವೆನೆಂದು
ವಾಮಾಕ್ಷಿಸರಿಸಕ್ಕೆ ತನ್ನಡಿಯಹೆಬ್ಬೆರಳ
ನೇಮಿಸುತ ನೇತ್ರಮದು ತಪ್ಪದಂತಿರೆ ಭಕ್ತಿಭಾವದೊಳು ನಿಶ್ಚಯಿಸುತ ೨೫

---

೧ ವಪ (ಕ.)

ಕಣ್ಣಪ್ಪಕರದ ಮಾರ್ಗಣದಗ್ರದಿಂ ಬಿಡದೆ
ಕಣ್ಣುಮಂ ಕಿಳ್ತು ಕಡೆತೆಗೆದು ಹೆಬ್ಬೆರಳಿರ್ಪ
ಕಣ್ಣಿಂಗೆ ತಳಿಯಲದು ಕಡು ಚಂದಮಾಗಲ್ಕೆ ಶಬರಚಂದ್ರನ ಭಕ್ತಿಗೆ
ಬಣ್ಣದೊವಲುಡಿಯ ಶ್ರೀ ಕಾಳಹಸ್ತೀಶ್ವರಂ
ಬಣ್ಣಿಸುವೊಡರಿದಾದ ನಿಜರೂಪಮಂ ತೋರಿ
ಬಣ್ಣುಳಿಯದಿಹ ಮನಕೆ ಮಚ್ಚಿದೆನಲಾ ಮುಗ್ಧ ಮನದಿಚ್ಛೆಯಂ ಬೇಡೆನೆ ೨೬

ನಿನ್ನ ನಯನಗಳೆರಡು ನೆಟ್ಟಗಾದಂದಮಂ
ಇನ್ನು ನಾ ನೋಡುವೆನು ಶ್ರೀ ಗಿರಿಸುತಾಕಾಂತ
ಮುನ್ನ ಎನ್ನಾಲಿಗಳು ಕಾಂಬಂತೆ ಮಾಳ್ಪುದೆನೆ ಮದನಾರಿ ನಸುನಗುತಲಿ
ತನ್ನ ಸೋಮಾದಿತ್ಯ ನೇತ್ರಗಳ ಕೊಟ್ಟಂತೆ
ಕಣ್ಣಪ್ಪನಕ್ಷಿಗಳು ಥಳಥಳಿಸುತಿರೆ ಕಂಡು
[೧]ಭಿ[೧]ನ್ನ ಭಾವಮನಳಿದು ಪೊಗಳುತಿಹ ತಮ್ಮಡಿಗೆ ಶ್ರೀಸಾಂಬನಿಂತೆಂದನು ೨೭

ಎನ್ನಪ್ಪ ಕಣ್ಣಪ್ಪನೆಡಪಾದುಕೆಯು ಎನಗೆ
ಚೆನ್ನ ದರ್ಭಾಸ್ತರಣಮಿನ್ನಾಯು ಬಾಯೊಳಗೆ
ಮುನ್ನ ಪಿಡಿದಿರ್ದ ಮಡುತಣ್ಣೀರೆ ದಿವ್ಯತರ ಗಂಗಾಭಿಷೇಕೋದಕಂ
ತನ್ನ ತಲೆಯೊಳಗಿನ್ನ ಸುಮುವೆನಗೆ ಸುರಕುಸುಮ
ಭಿನ್ನಮಿಲ್ಲದೆ ಕೊಂದ ಕನ್ನೆ ಮೊಲದಡಗಮೇ
ಬೆಣ್ಣೆ ಸಕ್ಕರೆ ಬೆರೆದ ದಿವ್ಯಾನ್ನಮಾಗಲ್ಕೆ ಬಣ್ಣಿಸುವರಾರಿಳೆಯೊಳು ೨೮

ಎಂದು ಕೊಂಡಾಡುತ್ತ ನಿಜಭಕ್ತಿ ಘನತೆಯನು
ಮಂದಾಕಿನೀಜೂಟ ಕರೆಯಲ್ಕೆ ಕೈಲಾಸ
ಮಂದಿರಕೆ ನಾನೊಲ್ಲೆನೆಲೆದೇವ ಭೂಲೋಕಮರಿವಂದದಿಂ ನಿನ್ನಯ
ಮುಂದೆಸೆಯೊಳಿಹೆನೆಂದು ಬಿನ್ನೈಸಲಾಕ್ಷಣದಿ
ಮಂದಹಾಸಂಗೈದು ನಿನ್ನಂತೆಯಾಯ್ತೆನುತ
ಚಂದದಿಂ ಮದನಾರಿ ಲಿಂಗದೊಳ್ ಬೆರೆಯಲಾಗೌಳಯತಿಗಳು ನೋಡುತ ೨೯

---

೧ ಖಿ (ಕ.)

ಮನದ ಸಂದೇಹಮಂ ಬಿಟ್ಟು ಕಣ್ಣಪನ ಸದ್
ಘನತೆಯಂ ಪೊಗಳಿ ಕರಗಳ ಮುಗಿದು ನಮಿಸುತ್ತ
ಮನಸಿಜಾರಿಯ ಭಕ್ತರೊಳು ಮುಖ್ಯನಿವನೆಂದು ನೆರೆನಂಬಿ ಸಂತಸದೊಳು
ವಿನಯದಿಂದಿರಲು ಬಳಿಕಾ ಶಬರಚಂದ್ರಮನು
ಮನವೊಲಿದು ಶ್ರೀ ಕಾಳಹಸ್ತೀಶನಿವಿರಲ್ಲಿ
ಮಿನುಪ ಕಂಗಳ ಪಡೆದು ನೆಲಸಿರ್ಪನೆಂಬುದಂ ಕೇಳ್ದು ಬಲ್ಲಿವು ಜಗದೊಳು ೩೦

ಕಾಡೊಡೆಯ ತಾನಿತ್ತ ಪೂರ್ವದೊಳು ಕಂಗಳಂ
ನಾಡೊಡೆಯ ಬಳಿಕ ತಾ ಮೆಚ್ಚಿ ಕೊಟ್ಟಾಲಿಗಳ
ರೂಢಿಯೊಳು ಮುಯ್ಯಿಂಗೆ ಮುಯ್ಯಾಯ್ತು ಭಾವಿಸಲ್ ಭಾವಜ್ಞರಿಗೆ ಜಗದೊಳು
ಪಾಡಳಿದ ರುದ್ರಮ್ವೆಗಕ್ಷಿಯಂ ಮಹಲಿಂಗ
ಗಾಡಿಯಿಂ ಕೊಟ್ಟನಿದು ಪೊಸತಾಯ್ತು ಸರ್ವರಿಗೆ
ನೋಡೆಂದು ತಮತಮಗೆ ಕೊಂಡಾಡಿ ಕೈಮುಗಿದು ಸೈಗೆಡೆವುತಿಂತೆಂದರು ೩೧

ಚಿತ್ತಜಾರಿಯ ಬಲ್ಲ ಮಹಲಿಂಗ ಜಂಗಮದ
ವೃತ್ತಿಯಂ ನಾವರಿಯೆವೆಂದಾಗ ಪೊಗಳುತ್ತ
ಚಿತ್ತದನುರಾಗದಿಂ ಬೀಳ್ಕೊಂಡು ಭಕ್ತಜನ ನಿಲಯಂಗಳಂ ಪೋಗಲು
ಇತ್ತ ಮುನಿಚಂದ್ರಮನ ಪಾದಾಂಬುಜಂಗಳಂ
ಉತ್ತಮದ ಭಕ್ತಿಯಿಂ ನಂಬಿ ರುದ್ರಕ್ಕನಿರೆ
ಸತ್ತುಚಿತ್ತಾನಂದ ಲೋಕಸನ್ನುತನಾಗಿ ನರಗಟ್ಟಿಯೊಳಗಿರ್ದನು ೩೨

ಇದು ಬಸವ ಸುಕುಮಾರವಿರಚಿತದ ಮಹಲಿಂಗ
ಸದಮಲದ ಲೀಲೆಯಿಪ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮೋಕ್ಷಮಾರ್ಗದೊಳಿಪ್ಪರು ೩೩

**ಅಂತು ಸಂಧಿ ೬ ಕ್ಕಂ ಪದ ೨೩೧ ಕ್ಕಂ**

**ಮಂಗಳಂ**

**ಶ್ರೀ**

ಶ್ರೀ

# ಏಳನೆಯ ಸಂಧಿ

**ಸೂಚನೆ** : ಮಾಲೋಜಿ ಭೂವರನ ಭದ್ರ ಗಜದಿಂದಳಿದ
ಬಾಲಕನಿಗಸುವಿತ್ತು ಮಹಲಿಂಗನಾ ನಿಜದ
ಲೀಲೆಯಂ ನೆರೆ ಮೆರೆದು ಭುವನ ಸನ್ನುತನಾಗಿ ನರಗಟ್ಟಿಯೊಳಗಿರ್ದನು

ಭೀಮಾನುಜಾತಸಂಗರಲೋಲ ಸುವಿಶಾಲ
ಭೀಮಾತಪತ್ರವನದಾವ ಸಜ್ಜನಜೀವ
ಭೀಮಾಂಗಗಿರಿಶಂಬ ನತದೇವನಿಕುರಂಬ ಸಾಮಜಾಸುರಸಂಹರ
ಭೀಮರವಿ ಭೀಮಾಕ್ಷ ಸೋಮ ಸಂಕುಲಪಕ್ಷ
ಭೀಮಸದ್ವರದಾತ ಗುಹ ಗಣಪ ಸಂಪ್ರೀತ
ಭೀಮ ಗಿರಿಚಾಪ ಶಂಕರರೂಪ ಪಾಲಿಪುದು ಶ್ರೀ ಚೆನ್ನವೀರೇಶ್ವರ ೧

ಅಂತಕಾಂತಕರೂಪ ಮಹಲಿಂಗನಾ ಪುರದಿ
ಸಂತತಂ ಸದ್ಭಕ್ತಸಂತತಿಯ ಪಾಲಿಸುತ
ಸಂತಸದೊಳಿರುತಿರಲು ಸತ್ಕೀರ್ತಿವಲ್ಲರಿಯು ಪ್ರಜ್ವಲಿಸಿ ಪರಿಕಲಿಸುತ
ಅಂತರಿಕ್ಷಾದಿ ದಿಗ್ಧರೆಯಲ್ಲಿ ಪರ್ಬುತ್ತ
ನಂತ ವೈಭವದಿಂದೆ ಸಂಚರಿಸುತಿರ್ಪುದನು
ಎಂತು ಬಣ್ಣಿಪೆನಸಮ ಮಹಿಮಾಬ್ಧಿಚಂದ್ರಮನ ಪೂರ್ಣಘನತರ ಮಹಿಮೆಯ ೨

ನಾಗೇಂದ್ರನಂ ಶಿರವ ಬಾಗಿಸುತ ಸುರಪತಿಯ
ನಾಗೇಂದ್ರನಂ ಪಶುವದೆನಿಸುತ್ತ ಶ್ರೀವಿಬುಧ
ನಾಗೇಂದ್ರನಂ ಮರವದೆನಿಸಿ ಗಗನಾಪಗೆಯ ಘನಭಂಗಯುತನೆನಿಸುತ
ನಾಗೇಂದ್ರವೈರಿಯಂ ವರ ಕಲಾನಿಧಿಯೆನಿಸಿ
ಯೋಗೀಂದ್ರಚಂದ್ರಮನ ಸತ್ಕೀರ್ತಿಮಾನಿನಿಯು
ಭೋಗೇಂದ್ರ ಸಮನೆನಿಪ ಮಾಲೋಜಿ ಭೂಪತಿಗೆ ದೂರಿದಳದೇನೆಂಬೆನು ೩

ಶಿವನಿರೂಪದಿ ಬಂದ ಮಹಲಿಂಗ ಮುನಿಚಂದ್ರ
ಕುವಲಯದ ಜನರಿಂಗೆ ಬೇಡಿದ ಪದಾರ್ಥಗಳ
ವಿವರಿಸುತ ಕೊಡುವಲ್ಲಿ ಸುರಧೇನು ಸುರವಿಟಪ ಸುರಮಣಿಗೆ ಸಮನೆನಿಸುವ
ವಿವಿಧ ಮಹಿಮೆಗಳಿಂದೆ ನೀನಾಳ್ವ ಸದ್ಧರ್ಮ
ದವನಿಯೊಳು ರಂಜಿಸುವ ಸರಗಟ್ಟೆ ಸದ್ಭಕ್ತ
ಭವನದೊಳಗಿಹರೆಂಬ ಸದ್ವಾರ್ತೆಯನು ಕೇಳಿ ಭೂನಾಥ ಸಂತಸದೊಳು ೪

ಹರಹರ ಮಹಾದೇವ ಪಾಪಿಗಳ ಕಣ್ಣಿಂಗೆ
ಪರುಷ ಕಲ್ಲಾದಂತೆ ಮದ್ರಾಜ್ಯದೊಳಗಿರುವ
ಚರಕುಲಾಂಬುಧಿ ಪೂರ್ಣಚಂದ್ರಮನ ಚರಣಮಂ ನೆರೆ ಕಾಣದೀ ಧಾತ್ರಿಯೊಳ್
ಇರುವದನುಚಿತಮೆಂದು ನಿಶ್ಚೈಸಿ ಮನದೊಳಗೆ
ಧರಣಿಪತಿ ಮಾಲೋಜಿ ಇರಲೊಂದು ದಿವಸದಲಿ
ತರಣಿ ಪಶ್ಚಿಮದೆಶೆಯನೈದಲ್ಕೆ ತತ್ಕಾಲ ಕ್ರಿಯಂಗಳಂ ತೀರ್ಚಿಸಿ ೫

ಏಕಾಂತಮಂದಿರದಿ ಸಕಲ ಸೌಭಾಗ್ಯದಿಂ
ಶ್ರೀಕಾಂತನಂಘ್ರಿಯಂ ಸ್ಮರಿಸುತ್ತ ಮಾಲೋಜಿ
ಭೂಕಾಂತನಾ ರಾತ್ರಿಯೊಳ್ ಶಯನಗೈದಿರಲು ಮಹಲಿಂಗನ ಸುಲೀಲೆಯಂ
ಲೋಕಾಂತರಾಳದೊಳ್ ಪ್ರಕಟಿಸುವ ಕಾರಣದಿ
ಮಾಕಾಂತನಕ್ಷಿಪದಪಂಕೇಜಪೂಜಿತನು
ಮಾಕಾಂತೆ ಸಹಿತ ಬಂದಾಕ್ಷಣದಿ ಸ್ವಪ್ನದೊಳ್ ಸೂಚಿಸಿದನೇನೆಂಬೆನು ೬

ರಾಜಾಧಿರಾಜ ರಣಶೂರ ಭೂಪನೆ ನಿನ್ನ
ರಾಜ್ಯಲಕ್ಷ್ಮೀ ಪರಮಲಪನಪಂಕೇಜದ್ವಿಜ
ರಾಜಸನ್ನಿಭನೆನಿಪ ಮಹಲಿಂಗ ಮುನಿರಾಜ ನೀನಾಳ್ವ ಭೂಕಾಂತೆಯ
ಭ್ರಾಜಿತಾಮಲ ಸರಸ ಸೀಮಂತಮಣಿಯಂತೆ
ರಾಜಿಸುವ ನರವಾಲವೆಂದೆಂಬ ಪುರದಲ್ಲಿ
ನೈಜದಿಂದಿಹನಾತನಂಘ್ರಿಯಿಂ ನೆರೆ ಕಂಡು ಬಾಳುವದೆ ದಿಟವೆಂದನು ೭

ನಿಜ ಪರಮ ದೋರ್ದಂಡ ಮಂಡಿತ ಮಹಾಖಡ್ಗ
ವಿಜಯಲಕ್ಷ್ಮೀ ಗರುವ ನಾಥನ ಮಹಾಕೃಪೆಯ
ನಿಜದಿಂದ ನೀ ಪಡೆಯೆ ಲೋಕೈಕ ವೀರನಹೆ ನಂಬೆಂದು ಸೂಚಿಸುತಲಿ
ಅಜಮುಖಾಮರನಮಿತಪಾದ ನಿರ್ಜಯಲಾಗೆ
ಕುಜನಪತಿ ಏಳುತ್ತ ಶಿವ ಶಿವ ಮಹಾದೇವ
ವೃಜಿನತಿಮಿರಪತಂಗ ಶಿವನೆನ್ನ ಕನಸಿನೊಳ್ ಪೇಳ್ದಮಾತಿದು ದಿಟವಲಾ ೮

ಘನಮಹಿಮ ಮಹಲಿಂಗ ಜಂಗಮದ ಲೀಲೆಯನು
ಮನಸಿಜಾಂತಕ ಸ್ವಪ್ನದೊಳ್ ಪೇಳ್ದ ಬಳಿ[1]ಕಿನ್ನು[1]
ಮನದೆಣಿಕೆ ಕೈಸಾರ್ದುದೆಂದಸಮ ಭಕ್ತಿಯಿಂ ಭಾವಿಸುತಲಿಂತೆಂದನು
ತನು ಮನ ಧನಾದಿಗಳ ವಂಚಿಸದೆ ನಾನಿತ್ತು
ಚಿನುಮಯನ ಕರುಣಮಂ ಪಡೆವೆನೆಂದಾಕ್ಷಣದಿ
ಜನಪತಿಯು ನಿಶ್ಚೈಸುತಿರೆ ದಿನಪ ಪೂರ್ವಾದ್ರಿಯಗ್ರದೊಳು ಮೈದೋರಿದಂ ೯

ಆ ಸಮಯದೊಳಗೆದ್ದು ಮಾಲೋಚಿ ಭೂಕಾಂತ
ವಾಸವಾದ್ಯಮರನತಪಾದಪಂಕಜ ಪೇಳ್ದ
ಭಾಸುರದ ಸ್ವಪ್ನಸೂಚನೆಗಳಂ ಮಂತ್ರಿಗಳಿಗರುಹುತ್ತ ಮಾರ್ಬಲವನು
ಈ ಸಮಯದೊಳು ಪರಮ ಮಹಲಿಂಗದರುಶನಕೆ
ಆಸುರದಿ ಸಡಗರಿಸವೇಳ್ಕೆಂದು ಸೂಚಿಸುತ
ವಾಸರೋದಯ ನಿತ್ಯವಿಧಿಕರ್ಮ ಶಿವಪೂಜೆಗಳ ಮಾಡಿ ಸಂಭ್ರಮದೊಳು ೧೦

೧ ಕೆನ್ನ (ಚ.)

ಗಜತುರಗಸ್ಯಂದನಪದಾತಿಗಳ ಸಂದಣಿಯು
ನಿಜದಿ ಸಡಗರವಾಗೆ ಭೇರಿ ತಮ್ಮಟೆ ಢಕ್ಕೆ
ಧ್ವಜ ಕಾಳೆ ನಿಸ್ಸಾಳಗಳು ಬಿಡದೆ ಘೋರ್ಗರೆಯೆ ದಿಗ್ಭಿತ್ತಿಗಳು ಒಡೆವೊಲು
ವಿಜಯಗುಣಶೀಲ ರಾಹುತ ಮಾನ್ಯಮಾಂಡಲಿಕ
ವ್ರಜ ವಾಜಿಗಳ ಕುಣಿಸುತಲಿ ಬರಲು ರಾಜದ್ವಿಜ
ರಾಜ ಶ್ರೀಮೋದಪುರದರಸ ಪೊರವೊಂಟನೇನೆಂದೆಂಬೆನಚ್ಚರಿಯನು ೧೧

ವಂದಿಗಳು ಬಲಿದಂಕಮಾಲಿಗಳ ಪೊಗಳುತಿರೆ
ಚಂದದಿಂ ಭದ್ರಗಜದಾರೂಢನದಿ ಧರೆಯ
ಕಂದರ್ಪನೆಂಬಂತೆ ಪರಿಜನದ ಸಂದಣಿಯ ಸಂಭ್ರಮದೊಳೊಡಗೂಡುತ
ಇಂದುಧರ ಚಿದ್ರೂಪ ಮಹಲಿಂಗನಂಘ್ರಿಗಳ
ನಿಂದು ನೋಡುವೆನೆಂಬ ಭಯಭಕ್ತಿಯಿಂದಿರದೆ
ಸಂದ ಚತುರಂಗ ಮಾರ್ಬಲಸಹಿತ ನಡೆಗೊಂಡನಾ ಕ್ಷಣದೊಳೇನೆಂಬೆನು ೧೨

ಮೋದಪುರ ಪಶ್ಚಿಮದಿಶಾಭಾಗದೊಳ್ ಬಿಡದೆ
ಸಾದರದೊಳೊಪ್ಪುತಿಹ ನರಗಟ್ಟೆಪುರದತ್ತ
ಮೇದಿನೀಪತಿ ತನ್ನ ಬಲಸಹಿತ ಭಕ್ತಿಯಿಂ ಬರುತಿರಲು ವಾದ್ಯಂಗಳ
ನಾದ ದಿಕ್ತಟದಲ್ಲಿ ಪೂರೈಸಿ ಮಹಲಿಂಗ
ಪಾದದರ್ಶನಕಿಂದು ಸಂಭ್ರಮದಿ ಬಹನೆಂದು
ಊದುತಿಹ ಕಹಳೆಗಳ ಸಂಕುಲದ ಘರ್ಜನೆಯನೇನೆಂದು ಬಣ್ಣಿಸುವೆನು ೧೩

ಇದೆ ಬಂದನಿದೆ ಬಂದ ಕಲ್ಗುದರಿ ಸರದಾರ
ನಿದೆ ಬಂದನಿದೆ ಬಂದ ಶಿವನಮನೆ ಸಾವಂತ
ನಿದೆ ಬಂದನಿದೆ ಬಂದ ವೈರಿವನದಾವಾಗ್ನಿಸಮನೆನಿಪ ದೋರ್ದಂಡನು
ಇದೆ ಬಂದನಿದೆ ಬಂದ ರಣಶೂರ ಬಹದ್ದೂರ
ನಿದೆಬಂದನಿದೆಬಂದ ರಾಜಕುಲಪಂಚಾಸ್ಯ
ನಿದೆಬಂದ ಮಹಲಿಂಗ ಮುನಿದರ್ಶನಕಮೆಂದು ಕೂಗಿದವು ಶೃಂಗಂಗಳು ೪

ಮಹಲಿಂಗ ಮಹಿಮಕ್ಷೀರಾಬ್ಧಿಚಂದ್ರಮಬಂದ
ಮಹಲಿಂಗಪದಪದ್ಮ ಮತ್ತಮಧುಕರ ಬಂದ
ಮಹಲಿಂಗಸಂಫ್ರಿವನಸಖಚಂದ್ರ ಚಂದ್ರಿಕೆಯ ಚಕ್ರಮಾನಸ ಬಂದನು
ಮಹಲಿಂಗಸಂಫ್ರಿಜಲಕ್ಷೀರ ದ್ವಿಜಪತಿ ಬಂದ
ಮಹಲಿಂಗ ಕರುಣಾಂಬುಘನಸರಿತ್ಪತಿ ಬಂದ
ಮಹಲಿಂಗಪದಭಕ್ತ ಮಾಲೋಜವರ ಬಂದನೆಂದಿಂದೆ ಕಹಳ್ಗಳೊದರೆ ೧೫

ಇಂತು ಸಂಭ್ರಮದಿಂದೆ ತತ್ಪುರವನೊಳಪೊಕ್ಕು
ಸಂತಸದಿ ಮಾಲೋಜಿ ಭೂಕಾಂತ ಬರಲಾಗ
ಮುಂದುವರಿದಾ ಪೌರಜನ ನೋಡುತಿರಲೊರ್ವ ಬಾಲ ಮಹಲಿಂಗಾಖ್ಯನು
ನಿಂತಿರಲು ತದ್ವೀಥಿ ಮಧ್ಯದೊಳು ಪಥಗೆಟ್ಟು
ಅಂತರಿಸದಾ ರಾಜನಾನೆ ಶುಂಡಾಲದಿಂ
ಅಂತರಿಕ್ಷಾಂಗಕ್ಕೆ ಸತ್ವದಿಂದೊಗೆಯಲಸು ಪೋಗುತ್ತಲಾಕ್ಷಣದೊಳು ೧೬

ಶುಂಡಾಲಕಂಧರದ ಮಧ್ಯಭಾಗದಿ ಬಂದು
ದಿಂಡುಗೆಡೆಯಲು ಸರ್ವಜನ ನೋಡುತಿರೆ ಭೂಪ
ಕಂಡು ಮನದೊಳಗೆ ಮರಮರನೆ ಮರಗುತ್ತಕಟ ಶಿವಭಕ್ತಶಿಶುದ್ರೋಹಭೂ
ಮಂಡಲದಿ ಘಟಿಸಿತಿಂದೆನಗಾವ ಜನ್ಮವಿಧಿ
ಮಂಡಿಸಿತು ನಾನರಿಯೆ ಶಿವಶಿವಮಹಾದೇವ
ಖಂಡೇಂದುಧರರೂಪ ಮಹಲಿಂಗನಡಿಗಳ್ಗೆ ಬಿನ್ನೈಪೆನೆಂಬಾಗಳು ೧೭

ಸುತನಳಿದ ವಾರ್ತೆಯಂ ಕೇಳುತ್ತ ಗಂಗವ್ವೆ
ಕ್ಷಿತಿಪನಿದ್ದೆಡೆಗಾಗಿ ತೊಳಲುತ್ತ ಬಳಲುತ್ತ
ಲತಿದುಃಖಜಲಧಿಯೊಳು ಮುಳುಗುತ್ತಲಳಲುತ್ತ ಬರಲಾಗಿ ಭೂಪಾಲನು
ಸತಿಯ ಸಂತೈಸುತಲೆ ತಾಯೆ ರೋದನಬೇಡ
ಸಿತಕಂಠರೂಪಂಗೆ ಬಿನ್ನೈಸಿ ನಾ ನಿನ್ನ
ಮೃತವಾದ ಬಾಲಕನ ಅಸು ಪಡೆವೆನೆಂದೆನುತ ನಂಬುಗೆಯನಿತ್ತಾಗಳು ೧೮

ಪರಿಜನಂ ಪುರಜನಂ ನೋಡುತಿರೆ ಮಾಲೋಜಿ
ಧರಣಿಪತಿ ಮುಂದೆಸೆಗೆ ನಡೆಗೊಂಡು ಬಲಸಹಿತ
ಬರೆ ಪರಮ ಮಹಲಿಂಗ ಮಹಿಮನಿಹ ಮಂದಿರವು ತೋರಲ್ಕೆ ಮೃತವಾಗಿಹ
ತರಳನನ್ನವನ ಮಾತೆಯು ಸುಕರದೊಳ್ ಕೊಟ್ಟು
ಕರಿಕಂಧರದಿ ಇಳಿದು ಮನ್ನೆಯರ ಗಡಣದಿಂ
ಗುರುವರನ ದರುಶನಕೆ ತನ್ನಿಲಯವನು ಪೊಗುತ ಕಂಡಾಗ ಭಯಭಕ್ತಿಯಿಂ ೧೯

ಅಷ್ಟತನುವಿಕ್ಕಿ ನಮಿಸುತ್ತ ಕರಗಳ ಮುಗಿದು
ಶಿಷ್ಟಜನಪರಿಪಾಲ ನಿಮ್ಮ ಪದದರುಶನದ
ಭೀಷ್ಟೆಯಿಂ ಬರುತಿರಲು ಪುರಮಾರ್ಗದಲಿ ಬಲಿದ ಸಂದಣಿಯು ಸಂಭ್ರಮದೊಳು
ಭ್ರಷ್ಟಗಜ ಶುಂಡಾಲದಿಂ ಪಿಡಿವುತಭ್ರಕಿಡ
ಲಷ್ಟರೊಳು ಹರಣಗಳೆದಾ ಬಾಲ ತವ ಭಕ್ತ
ರಿಷ್ಟಸಂದಾಯಕನೆ ಪಾಲಿಸುವದೆಂದೆನುತ ಬಿನ್ನೈಸುತಿರೆ ಭೂಪನು ೨೦

ಹರಭಕ್ತೆ ಗಂಗವ್ವೆ ಶೋಕಾಬ್ಧಿಯೊಳು ಮುಳುಗಿ
ಹರಹರಮಹಾದೇವ ಏನಗಾವ ಜನ್ಮವಿಧಿ
ದೊರೆಕೊಂಡಿತಕಟಕಟ ಗುರುವರ ಮಹಾಲಿಂಗ ಮುನಿವರನ ಅಭಿದಾನಮಂ
ಹರುಷದಿಂದಿಟ್ಟಿರ್ದೆಗಡ ಮಗನೆ ಧರಣಿಪನ
ಕರಿಯ ಶುಂಡಾಲಕ್ಕೆ ಗುರಿಯಾಗಿ ನೀ ನಿನ್ನ
ಹರಣಮಂಗಳೆದರೆನ್ನಯ ಪ್ರಾಣ ಸೈರಿಪುದೆ ತರುಣನಾಯಕರತ್ನವೇ ೨೧

ಗಂಡನಿಲ್ಲದ ಬಾಲೆ ರಂಡಿತನದಿಂದಾನು
ಖಂಡ ಶರ್ಕರೆ ಪಾಲು ಕೊಂಡು ಕುಡಿಸಿರ್ದೆ ಗಡ
ಬಂಡು ಮಾಡಿದೆ ಮಗನೆ ಹಿಂದು ಬಳಗದೊಳೆನ್ನ ಕೇಡಿಂಗೆ ನೆಲೆಯಿಲ್ಲವು
ಪುಂಡಭೂಪತಿಯಾನೆ ಶುಂಡಾಲಶುಂಡಿಲಕೆ
ತಂಡುಲದ ಉಂಡಿಯೊಲು ನೀ ಮಡಿದ ಬಳಿಕ ಭೂ
ಮಂಡಲದೊಳೆನಗಾರು ಗತಿಯುಂಟು ನೋಡುವೊಡೆ ಕುವರ ಮಹಲಿಂಗಾಖ್ಯನೆ ೨೨

ಎಂದು ಪಲವಂದದಿಂ ಬಳಲುತ್ತ ದುಃಖದಿಂ
ಅಂದವಳಿದಾಬಾಲೆ ಮುಂದುಗೆಟ್ಟಳಲುತ್ತ
ಇಂದುಧರಸಮರೂಪ ಮಹಲಿಂಗನಮಲಪದದ್ವಂದ್ವಗಳ ಸನ್ನಿಧಿಯೊಳು
ಬಂದು ಸರ್ವರು ನೋಡುತಿರಲಂದು ಮೃತವಾದ
ಕಂದನಂ ತಂದು ಮುಂದೆಸೆಗಿಟ್ಟು ನಮಿಸುತ್ತ
ಲಿಂದು ಭೂಪಾಲಕನ ಸಿಂಧುರದಿ ಮಡಿದನೆಲೆ ದೇವ ಮಹಲಿಂಗೇಶನೇ ೨೩

ಪೂರ್ವಜನ್ಮಾಂತರದಿ ನಾ ಮಾಡಿದಘದಿಂದ
ಪೂರ್ವಸುತ ಮೃತವಾದ ಲೋಕಾಪವಾದಕ್ಕೆ
ಉರ್ವಿಪತಿ ಗುರಿಯಾದನೆಂದಿರದೆ ಮರಗುತ್ತ ಒರುಗುತ್ತ ಭೂತಳದೊಳು
ಉರ್ವಿ ಶೋಕಾಬ್ಧಿಯೊಳು ಹೊರಳುತ್ತ ನರಳುತ್ತ
ಚೀರ್ವ ವನಿತೆಯ ನುಡಿಗೆ ಮನಗುಂದಿ ಭೂಕಾಂತ
ಉರ್ವಿಜನ ಕೇಳುತಿರೆ ಆ ಕ್ಷಣದಿ ಮಹಲಿಂಗನಡಿಗಳ್ಗೆ ಬಿನ್ನೈಸಿದಂ ೨೪

ಹರಭಕ್ತದ್ರೋಹಕ್ಕೆ ಹರಣಕೊಡುವದೆ ಧರ್ಮ
ಮರಳಿ ಪ್ರಾಯಶ್ಚಿತ್ತವಿಲ್ಲೆಂದು ಪೂರ್ವದೊಳು
ಪರಮ ಚೋಳಾದಿಗಳು ಪ್ರಾಣಕ್ಕೆ ಪ್ರಾಣಮಂ ಸಮನಿತ್ತು ಭೂತಳದೊಳು
ಹರನ ಕೃಪೆಯಾಂತರವರಂತಾನು ದೃಢನಲ್ಲ
ಗುರುವೆ ಶಿವಭಕ್ತಬಾಲಕನಸುವ ನೀನಿತ್ತು
ಕರುಣದಿಂ ಪೊರೆವುದೆನುತಿರದೆ ಬಿನ್ನೈಸೆ ಧರಣೀಶನಂ ಸಂತೈಸುತ ೨೫

ಅಳಲುತಿಹ ಗಂಗಾಂಬೆಗಭಯಮಂ ಪಾಲಿಸುತ
ಬಳಲಬೇಡೆಲೆ ತಾಯೆ ಬಹುಜನ್ಮಕೋಟಿಯೊಳು
ಒಲಿದಾರ ಗರ್ಭದೊಳ್ ಸಂಭವಿಸಿ ಸುತನಾಗಿ ಸುಖದುಃಖಗಳನುಂಡನೊ
ಮಲಹರನ ಮಾಯವರಿದವರಾರು ಜಗದೊಳಗೆ
ಅಳಿದನೆಂದಳುವುದಿದು ಮಾಯೆಯಿಂದ ಬಿಡು ಮನದಿ
ತಿಳಿದುನೋಡಿದರೊಳಗೆ ಅಳಿವರಾರ್ ಉಳಿವರಾರ್ ಬರಿದೆ ಶೋಕಿಪುದಲ್ಲಲಾ ೨೬

ಮೃಗತೃಷ್ಣಿಕಾಜಲದ ನಿಲವಿನಂತಂಬರದಿ
ಬಗೆಗೊಳಿಪ ಸುರಚಾಪದಂತಬ್ಧಿಮಧ್ಯದೊಳು
ಸೊಗಸುತಿಹ ಕಲ್ಲೋಲಮಾಲೆಗಳು ಕಂಗೊಳಿಸಿ ಬಳಿಕಲ್ಲಿ ಬಯಲಪ್ಪವೋಲ್
ಜಗದೊಳಗೆ ಜಡತನುವನಾಂತು ಪುಟ್ಟಿದ ಮೇಲೆ
ಅಗಣಿತಮಹಾದುಃಖ ಸುಖವೆಲ್ಲ ತನ್ನೊಳಗೆ
ಒಗುಮಿಗಿಯಲುಂ ತೋರುತಲ್ಲಡಗಿ ಪೋಪುದಕೆ ಬರಿದೆ ಬಳಲುವದೇತಕೆ ೧೭

ಎಷ್ಟು ಜನ್ಮಾಂತರದಿ ಸುತನಾದನೋ ನಿನ್ನ
ಎಷ್ಟು ಜನ್ಮಾಂತರದಿ ಸಹಜಾತನಾದನೋ
ಎಷ್ಟು ಜನ್ಮಾಂತರದಿ ಪಿತನಾಗಿ ನಿನಗೆ ಸಂಭವಿಸಿದನೊ ಭೂತಳದಲಿ
ಎಷ್ಟು ಜನ್ಮಾಂತರದಿ ಬಳಲಿಸಿದನೋ ನಿನ್ನ
ಎಷ್ಟು ಜನ್ಮಾಂತರದಿ ಅನ್ಯರಿಗೆ ಜನಿಸಿದನೊ
ಸೃಷ್ಟೀಶಲೀಲೆ ಬಲ್ಲವರಾರು ಜಗದೊಳಗೆ ಗಾಸಿಯಾಗದಿರೆಂದನು ೧೮

ನೀನೆಷ್ಟು ಭವದಲ್ಲಿ ಜನನಿಯಾಗಿರ್ದೆಯೋ
ತಾನೆಷ್ಟು ಭವದಲ್ಲಿ ಸುತನಾಗುತಳಿದನೋ
ಕೂನಾರಿಗೀ ಜನ್ಮದೊಳು ಬಂದು ನಿಜಗರ್ಭದೊಳು ನಿಂದು ಸಂಜನಿಸುತ
ಘೂನಾಥನಾನೆಯಿಂ ಮೃತನಾದನೆಲೆ ತಾಯೆ
ನೀನೇಕೆ ಚಿಂತಿಸುವೆ ಬಿಡು ದುಃಖ ವೆಂದಾಗ
ಮೌನೀಶ ಮಹಲಿಂಗ ಕರುಣದಿಂ ಸೈರಿಸುತ್ತಾಕ್ಷಣದಿ ಮಾನಸದೊಳು ೧೯

ಮೃಡಮಹಾದೇವನ ಸುಲೀಲೆಗಿದು ಫಲವೆಂದು
ಕಡು ತವಕದಿಂದಸಮ ಶ್ರೀ ಭೂತಿಯಂ ಕರದಿ
ಪಿಡಿದು ಪಂಚಾಕ್ಷರಿಯ ಜಪಿಸುತ್ತ ಬಾಲಕನ ಭಾಳದೊಳು ನೆರೆ ತಳಿದನು ॥
ಜಡನಿದ್ರೆ ತಿಳಿದೆದ್ದ ವಟುವಿನಂತಾ ತರಳ
ಮೃಡಮಹಾಲಿಂಗನಡಿಗಳ್ಗೆ ನಮಿಸುತ್ತಿರಲು
ಪೊಡವಿಪತಿ ಮುಖ್ಯ ಪರಿಜನ ಪೌರಜನರೆಲ್ಲ ನೋಡುತ್ತ ಸಂತೋಷದ ೨೦

ಜಲನಿಧಿಯ ಮಧ್ಯದೊಳ್ ಮುಳುಗಿ ತೇಲಾಡುತ್ತ
ಒಲಿದು ಕೊಂಡಾಡುತಿರೆ ಗಂಗಾಂಬೆ ಭಕ್ತಿಯಿಂ
ನಲಿದು ಮಹಲಿಂಗನಡಿಗಳ್ಗೆ ನಮಿಸುತ್ತಮಲ ಕರಕಂಜಮಂ ಮುಗಿವುತ
ಮಲಹರನೆ ನಿಮ್ಮಂಥ ಮಹಿಮರಾರೀ ಜಗದಿ
ತಿಳಿಯೆ ಧರಣಿಪನಂಥ ಧನ್ಯರಾರಿಳೆಯೊಳಗೆ
ಕಲಿಯುಗದ ಮಹಲಿಂಗನೆಂಬ ಪೆಸರಿಟ್ಟುದಕೆ ಫಲವಾದುದೆಂದೆನುತಿರೆ ೩೧

ಮಾಲೋಜಿ ಭೂಕಾಂತ ಸಂತೋಷಜಲಧಿಯೊಳ
ಗಾಳುತ್ತ ಭಕ್ತಿಯಿಂ ಕರಪದ್ಮಗಳ ಮುಗಿದು
ಮಾಲಿಂಗಮುನಿಚಂದ್ರ ನಿಮ್ಮ ಘನಮಹಿಮೆಯಂ ಬಣ್ಣಿಪೊಡೆ ಭೂತಳದೊಳು
ವ್ಯಾಲಪತಿಗರಿದಾಯ್ತು ಕಾಲಸಂಹರಮೂರ್ತಿ
ಬಾಲಚಂದ್ರಕಿರೀಟ ಬಲ್ಲನಲ್ಲದೆ ಬರಿದೆ
ಭೂಲೋಕದೊಳಗಾವ ಕಬ್ಬಿಗರು ಬಣ್ಣಿಪರ್ ಲೋಕಪಾವನಶೀಲನೇ ೩೨

ಮೃತವಾದ ಬಾಲನಿಗೆ ಪ್ರಾಣ ಪಾಲಿಪರಾರು
ಕ್ಷಿತಿಯೊಳರಿದೀ ಮಾತು ಕಂಡುದಿಲ್ಲವು ಪೂರ್ವ
ಕೃತಿಯಲ್ಲಿ ಪೇಳುತಿಹ ಸತ್ಕಥೆಯ ಕಥಿಕರಿಂ ಕೇಳ್ದು ಬಲ್ಲೆವು ಸಂತತಂ
ರತಿಕಾಂತ ಸಮರೂಪ ಸೌಂದರ ಗಣಾಧೀಶ
ಸಿತಕಂಠನಾಜ್ಞೆಯಿಂದವತರಿಸಿ ಮರ್ತ್ಯದೊಳ್
ಪ್ರತಿಯಿಲ್ಲದಖಿಳ ವೈಭವದಿಂದೆ ಘನಮಹಿಮನೆಂದೆನಿಸಿ ಮೆರೆದಿರ್ದನು ೩೩

ನಂಬೆಣ್ಣನೆಂಬ ನಾಮವನಾಂತು ಪ್ರೇಮದಿಂ
ಅಂಬಿಕಾಪತಿಯಪಾದಾಂಬುಜಂಗಳ ಬಿಡದೆ
ನಂಬಿ ಪೂಜಿಸಿ ನಿತ್ಯ ಪಡಿ ಹೊನ್ನುಗಳ ಪಡೆದು ಶಂಬರಾರಿಯ ತಾಪದಿಂ
ರಂಬೆಯರಿಗಿತ್ತು ಮೆರೆವುತ್ತಖಿಳ ಮಹಿಮಾವ
ಲಂಬನದೊಳಿರುತಿರಲು ಓರ್ವ ಸತಿ ಕುವರಂಗೆ
ನಂಬೆಣ್ಣನೆಂಬ ನಾಮವನಿಟ್ಟು ತತ್ಪುರದಿ ಸಲುಹುತ್ತ ಸಂತಸದೊಳು ೩೪

ಮತ್ತೊಂದು ದಿನ ತನ್ನ ಕುವರನನ್ನೊಡಗೊಂಡು
ಉತ್ತಮಾಂಗನೆ ನದಿಯ ತೀರಕ್ಕೆ ಪೋಗುತ್ತ
ಚಿತ್ತದನುರಾಗದಿಂ ಮೈಲಿಗೆಯ ವಸನಗಳ ತೊಳೆಯುತ್ತಮಿರಲಾಕ್ಷಣಂ
ಅತ್ತಿತ್ತಲೆಡೆಯಾಡಿ ಜಲಮಧ್ಯದೊಳ್ ತರಳ
ನಿತ್ತಾಡುತಿರಲೊಂದು ಬಿತ್ತರಸುವಾಶ್ಚರನು
ಒತ್ತರದಿ ಬಂದು ಪಿಡಿದೆಳೆದು ನುಂಗಲು ಮಾತೆ ಕಾಣುತ್ತ ದುಃಖದಿಂದ ೩೫

ಮಿಡುಕುತ್ತ ಶರಧಿಯೊಳು ಪುಡುಕುತ್ತಲಿರಲಾಗ
ಮಡುವಿನೊಳು ಕಡುತವಕದಿಂದಡಗಲದು ಮನದಿ
ಬಿಡದೆ ಮರುಗುತ ಬಾಲೆ ಮೃಡಮಹಾದೇವೇಶ ಶ್ರೀ ಸಾಂಬನೇ ಮುನಿದೆಯಾ
ಪೊಡವಿಯೊಳು ಬಡವಿನಾನೆಂದಿರ್ದೆ ಗಡ ಮಗನು
ಮಡಿದ ಮೇಲಿನ್ನೇಕೆ ಜಡತನುವಿನಾಶೆಯಿದು
ಸುಡಲೆಂದು ಮಡದಿ ಬಾಯಾರಿ ಚೀರುತಲಿರ್ದಳೇನೆಂದು ಬಣ್ಣಿಸುವೆನು ೩೬

ಪ್ರಾರಬ್ಧಕರ್ಮವನದಾರ್ ಮೀರುವರು ಜಗದಿ
ಗೌರೀಶ ನೀನಲ್ಲದುಳಿದಸುರಸುರನರರು
ಭೂರಿ ಜನ್ಮಾಂತರದಿ ಬಂದಳಿವುದಿದು ಸತ್ಯವೆಂದಾಗ ಚಿಂತಿಸುತಲಿ
ನಾರಿಮಣಿ ಬಳಿಕ ಹಿಂದಿರುಗುತ್ತ ಮಂದಿರವ
ಸಾರಿ ಸುತನಳಿದಸಮ ಸಂತಾಪದಿಂ ಬಿಡದೆ
ಘೋರ ದುಃಖಾಬ್ಧಿಯೊಳಗಾಳುತ್ತಮಿರದೇಳು ದಿನವಾಗಲಾಕ್ಷಣದೊಳು ೩೭

ಮುನ್ನಿನಂದದಿ ಬಂದುತನ್ನದಿಯ ತೀರದೊಳು
ಚೆನ್ನೆಕುಳಿತೆನ್ನವರಮಣ್ಣಯ್ಯ ಬಾಲಕನೆ
ಇನ್ನಾರು ಗತಿಯೆನಗೆ ಮುನ್ನಿಲ್ಲ ಭೂತಳದಿ ನಾ ನಿನ್ನ ಪೆತ್ತವ್ವೆಯು
ಬನ್ನಬಡುತಿರ್ಪೆಗಡ ಚಿನ್ನನೆಲ್ಲಿರ್ದಪೆಯೊ
ಗನ್ನಘಾತುಕವೊಸಳೆ ತನ್ನ ಒಡಲಾಸೆಯಿಂ
ಬಿನ್ನಣದಿ ನುಂಗಿತ್ತು ಇನ್ನೇವೆನೆಂದಾಗ ಬಳಲಿ ಚೀರುತಲಿರ್ದಳು ೩೮

ನಂಬೆಣ್ಣನೆಂಬಸಮ ಮಹಿಮನಭಿದಾನಮಂ
ನಂಬಿ ನಾನಿಟ್ಟಿರ್ದೆ ಗಡ ಮಗನೆ ನಂಬೆಣ್ಣ
ನಂಬಿ ನಿನ್ನಳುಹಿಕೊಳಲಿಲ್ಲ ಗಡ ಜಗದೊಳಗೆ ನಗೆಗೇಡುವಾಯ್ತೆನುತಲಿ
ಹಂಬಲಿಸುತಿರಲಾಕ್ಷಣದಿ ಕೇಳಿ ನಂಬೆಣ್ಣ
ನಂಬುಜಾಕ್ಷಿಯ ಬಳಿಗೆ ಸಂಭ್ರಮದಿ ತಾ ಬಂದು
ಅಂಬುಮಧ್ಯದೊಳಿರ್ಪ ನಕ್ರನಿಂದುಗುಳಿಸಿದ ಏಳುದಿನದಲಿ ಬಾಲನಂ ೩೯

ಸರ್ವಜನ ಕೊಂಡಾಡುತಿರಲಾಗಲಾ ಸುತಗ
ಪೂರ್ವ ಪ್ರಾಣಮನಿತ್ತು ಪಾಲಿಸಲ್ಕಾ ಮಾತೆ
ಉರ್ವಿ ಸಂತೋಷದಿಂ ಸೈಗರೆಯಲೆಡೆವಿಡದೆ ಸೌಂದರಗಣಾಧೀಶನು
ಉರ್ವಿಸನ್ನುತನಾಗಿ ನೆರೆಮೆರೆದನೆಂದೆಂಬ
ಪೂರ್ವಕಥೆಯನು ಕೇಳ್ದು ಬಲ್ಲೆವೀ ಜಗದೊಳಗೆ
ಶರ್ವರೂಪನ ಕಂಡೆವೆಂದಾಗ ಭೂಪಾಲ ಕೊಂಡಾಡುತಿರುತಿರ್ದನು ೪೦

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿ ಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯೊಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೪೧

ಅಂತು ಸಂಧಿ ೭ ಕ್ಕಂ ಪದ ೨೭೨ ಕ್ಕಂ
ಮಂಗಳಂ
ಶ್ರೀ

ಶ್ರೀ

# ಎಂಟನೆಯ ಸಂಧಿ

**ಸೂಚನೆ** : ನರಗಟ್ಟಿಯನು ದಾನಪತ್ರವನು ಬರೆದಿತ್ತ
ಧರಣೀಶ ಮಾಲೋಜಿರಾಜನ ಸುಭಕ್ತಿಯಂ
ಕರುಣದಿಂ ಕೈಕೊಂಡು ಮಹಲಿಂಗಗುರುವರಂ ಮೆರೆದಿರ್ದನಾಪುರದೊಳು

ಲಾಲಿಸೆಲೆ ಗಿರಿಜಾತೆ ಮಹಲಿಂಗ ಜಂಗಮದ
ಲೀಲೆಯಂ ಸರ್ವಜನ ಕಂಡು ಕೊಂಡಾಡುತಿರೆ
ಬಾಲೆ ಗಂಗಾಂಬೆ ಸಂತೋಷಸಾಗರದೊಳಗೆ ಮುಳುಗುತ್ತ ಮುನಿನಾಥನ
ಲೋಲ ಪದಪದ್ಮಗಳಿಗೆರಗುತ್ತ ತನ್ನಯ ಸು
ಬಾಲನಂ ಪೊಡಮಡಿಸಿ ತನ್ನಿರೂಪವನಾಂತು
ಮಾಲೋಜರಾಜನಂ ಪೊಗಳುತ್ತ ಮಂದಿರಕೆ ನಡೆಗೊಂಡಳೇನೆಂಬೆನು ೧

ಇತ್ತ ಶ್ರೀ ಮೋದಪುರದರಸ ಮಾಲೋಜ ಭೂ
ಪೋತ್ತಮಂ ಮನದೊಳಗೆ ಮುದವೇರಿ ತವಕದಿಂ
ಚಿತ್ತಜಾಂತಕನಮಲ ಪದಪದ್ಮಗಳಿಗೆರಗಿ ಕರಕಂಜಗಳ ಮುಗಿವುತ
ಚಿತ್ತದನುತಾಪಮಂ ಪರಿಹರಿಸಿದೆಲೆ ದೇವ
ಉತ್ತಮದ ಬಾಲಂಗೆ ಪ್ರಾಣದಾನಮನಿತ್ತೆ
ಮತ್ತೆನ್ನ ಪಾಲಿಪುದು ಪರಮ ಜಗದಾರಾಧ್ಯ ಭಕ್ತಾಳಿಕಲ್ಪದ್ರುಮ ೨

ಜ್ವರತಪ್ತ ಸುಧೆಯ ಸವಿಬಲ್ಲನೇ ಮಂಡೂಕ
ನರಿವುದೇ ಕ್ಷೀರಾಬ್ಧಿಘನತೆಯಂ ಕೌಶಿಕವು
ತರಣಿಕಿರಣಪ್ರಭೆಯಬಲ್ಲುದೇ ಜಾತ್ಯಂಧ ಮೌಕ್ತಿಕದ ದರ್ಪಣವನು
ಪರಿಕಿಸಲು ತಿಳಿವನೇ ಬಧಿರ ಸಂಗೀತದಾ
ಪರಿಯ ನೆರೆಬಲ್ಲನೇನದರಂತೆ ಭೂತಳದ
ನರರಿಂಗೆ ಪರಮಾತ್ಮ ನಿಮ್ಮ[೧]ವದರಿ[೧]ದಪುದೆ ಮಹಲಿಂಗಮುನಿಚಂದ್ರಮ ೩

ಪಾಪಿಗಳ ಕಣ್ಣಿಂಗೆ ಪರುಷ ಕಲ್ಲಾದಂತೆ
ತಾಪಸೋತ್ತಮ ನಿಮ್ಮ ನಿಲವನರಿಯದೆ ರಾಜ್ಯ
ವ್ಯಾಪಕತ್ವದಿ [೨]ಮುಳುಗಿ[೨] ಮಲಗಿರಲು ಭವದೀಯ ಸತ್ಕೀರ್ತಿಯಂ ಲಾಲಿಸಿ
ಮಾಪನೇತ್ರಾಂಕಪದನಾ ರಾತ್ರಿಯೊಳು ತನ್ನ
ರೂಪಮಂ ತೋರುತ್ತ ಬಂದೆನ್ನ ಸ್ವಪ್ನದೊಳ್
ಭೂಪ ಕೇಳೆನುತಾಗ ಕರುಣದಿಂ ಸೂಚಿಸಿದನೇನೆಂದು ವರ್ಣಿಸುವೆನು ೪

ನಿರುಪಮ ನಿರಾಲಂಬ ನಿರಘಜಂಗಮರಾಯ
ಪರಮ ಮಹಲಿಂಗಾಖ್ಯ ಘನಮಹಿಮ ನೀನಾಳ್ವ
ಧರಣಿಯೊಳು ರಂಜಿಸುವ ನರಗಟ್ಟಿಯೊಳಗಿರ್ಪನಾತನಾಸತ್ಕೃಪೆಯನು
ಹರುಷದಿಂ ಪಡೆವುತ್ತ ಸಕಲ ರಾಜಾಳಿಯೊಳ್
ನಿರುತ ವಿಜಯಾಂಗನೆಯ ವರನಾಗಿ ಬಾಳೆಂದು
ಹರ ಪೇಳ್ದು ಸ್ವಪ್ನದೊಳಗೆಚ್ಚರಿಸಿ ಬಯಲಾಗಿ ಪೋದನಂತರ್ಧಾನಕೆ ೫

ಆದರಿಂದೆ ತ್ವತ್ಪಾದ ದರ್ಶನಂ ಸಂಧಿಸಿತು
ಮದನಾರಿ ಪೇಳ್ದಂತೆ ಪರಮ ಸೇವಕನಾಗಿ
ಮುದದಿಂದೆ ಬಾಳುವೆನು ಮದ್ಭಕ್ತಿಬಿನ್ನಪವ ಕರುಣದಿಂ ಲಾಲಿಸುವದು
ವಿದಿತ ನರಗಟ್ಟಿ ಪುರಭೂಮಿಯಂ ಕೈಕೊಂಡು
ಪದುಳದಿಂ ಪಾಲಿಸುವದೆನಲು ಭೂಪಾಲಕನ
ವದನಾಬ್ಜಮಂ ಕೃಪಾಲೋಕನದಿ ನೋಡುತ್ತ ಮಂದಹಸನಂ ಗೈವುತ ೬

---

೧ ವುದೊರೆ (ಕ. ಚ.) ೨ ಬೇರು (ಕ.ಚ.)

ಮಿನುಪ ದರ್ಶನಚಂದ್ರಿಕೆಯುಮಿರದೆ ಪೊರಸೂಸಿ
ಜನಪತಿಯ ನೇತ್ರೋತ್ಪಲಂಗಳ್ಗೆ ಸಂತೋಷ
ವನುಗೊಳಿಸುತಿರಲಾಗ ಮದನವನದಾವಾಗ್ನಿ ಮಹಲಿಂಗನಿಂತೆಂದನು
ಜನನಮರಣಕ್ಕಸಮ ಜನ್ಮದಾಗರವೆನಿಪ
ಕನಕ ಕಾಂತಾ ಕರ್ಮಭೂಮಿಗಳ ಘನತೆಯನು
ಕನಸಿನೊಳಗೊರ್ಮೆ ತಾ ನೆನೆಸದಿಹ ಜಂಗಮಕೆ ಸನುಮತಿಯು ತಾನಿಲ್ಲವು ೭

ನಾಮ ರೂಪ ಕ್ರಿಯ ಸೀಮೆಹಂಗಿಗನಲ್ಲ
ಕಾಮನಿಷ್ಕಾಮಯುತನಲ್ಲ ನಿರುಪಮ ನಿತ್ಯ
ನೇಮ ಸನ್ನುತನಲ್ಲ ಪ್ರೇಮ ನಿಃಪ್ರೇಮಮಾನಸನಲ್ಲ ಕಾಮಿನಿಯರ
ಕಾಮಿಸುವನಲ್ಲ ನಿರ್ನಾಮದೇಹಿಕನಲ್ಲ
ತಾಮಸದ ಗುಣಿಯಲ್ಲ ಸ್ವಾಮಿ ತಾನಲ್ಲಸಮ
ಹೇಮ ಭೂಮ್ಯಾದಿಗಳು ಬೇಕು ಬೇಡೆಂಬಾಸೆ ಮುನ್ನಿಲ್ಲ ಜಂಗಮದೊಳು ೮

ರೀತಿಯಲಿ ತನ್ನ ಸರಸಾನುಭಾವದಿಂ
ಮಾರಹರಲೀಲೆಯಂ ತಾಳ್ದು ಸಂಚರಿಸುತ್ತೆ
ಚಾರುಪರಮಾನಂದದಲ್ಲಿರ್ಪ ಜಂಗಮಕೆ ನರಗಟ್ಟಿ ಪುರವೇತಕೆ
ಗೌರಿಯರಸನು ಬಂದು ಸ್ವಪ್ನದೊಳು ಪೇಳ್ದಂತೆ
ಸಾರ ಸಾಮ್ರಾಜ್ಯಲಕ್ಷ್ಮೀಕಾಂತನಾಗುತ್ತ
ಭೂರಿ ರಾಜಾಳಿಯೊಳ್ ವಿಜಯಾಂಗನಾಗೆಂದು ಕಾರುಣ್ಯದಿಂ ನೋಡುತ ೯

ಪರಸಲ್ಕೆ ಮಾಲೋಜಿ ಭೂಪಾಲನಾಕ್ಷಣದಿ
ಪರಮ ಸಾತ್ವಿಕಭಕ್ತಿ ನಲವೇರಿ ನಮಿಸುತ್ತ
ಹರುಷಾಶ್ರು ಕಡೆ[1]ನೋಟ[1]ದಿಂ ಸ್ರವಿಸುತಿರಲಾಗ ಕರಪದ್ಮಮಂ ಮುಗಿವುತ
ಗುರುವೆ ನಿಮ್ಮುತ್ತರಕೆ ಪ್ರತ್ಯುತ್ತರಿಲ್ಲಿಲ್ಲ
ಗುರು ಲಿಂಗ ಜಂಗಮಕೆ ತನುಮನಧನಾದಿಗಳ
ಹರುಷದಿಂದೀಯಬೇಕೆಂಬ ಪೌರಾಣ ಶಾಸ್ತ್ರಗಳೆಲ್ಲ ಪುಸಿಯಾದುವೇ ೧೦

---

೧ ನೋಡಿ (ಚ.)

ಗೋಪಾದಮಾತ್ರಕ ಸುಭೂಮಿಯಂ ಭಕ್ತಿಯಿಂ
ತಾಪಸೋತ್ತಮರಿಂಗೆ ಕೊಟ್ಟು ತದ್ಗೋವುಗಳ
ಆಪ ನವಿರಷ್ಟು ಬರಿಸಂ ರುದ್ರಪದದಿಂದೆ ಬಾಳುತ್ತ ಕೈಲಾಸದಿಂ
ಕಾಪಾಲಿಯೋಲಗದೊಳಿಹರೆಂದು ಸಂತತಂ
ಭೂಪಂಡಿತರು ಪೇಳ್ದ ವ್ಯಾಸಪೌರಾಣ ವ್ಯಾ
ಲಾಪಗಳು ಪುಸಿಯಾದುವೇ ದೇವದೇವೇಶ ಮಹಲಿಂಗ ಮುನಿಪುಂಗವ ೧೧

ನಿರುಪಾಧಿ ಜಂಗಮಕೆ ನಿಜಭಕ್ತಿಯಿಂ ಬಂದ
ನಿರುಪಮ ಪದಾರ್ಥಗಳ ಕೈಕೊಂಡು ಲೋಕದೊಳು
ಪರಿಣಾಮಿಸುವದೆಂಬ ಶ್ರೀಪುರಾತರವಾಕ್ಯ ಪರಿಪೂರ್ಣವಾಗಿರ್ಪುದು
ಗುರುವೆ ತತ್ಕಾರಣದಿ ಕರುಣಿಸೆನ್ನಯ ಮೇಲೆ
ನರಗಟ್ಟಿಪುರವನಂಗೀಕರಿಸಿ ಸಂತಸದಿ
ವರಗಟ್ಟಿಯಂ ಮಾಡಿ ಪಾಲಿಸುವುದೆಲೆದೇವ ದೇವೇಶ ಮಹಲಿಂಗನೇ ೧೨

ಎಂದೆಂಬ ಭೂಪತಿಯ ನುಡಿಗೆ ಮನಮೆಚ್ಚುತ್ತ
ಇಂದುಧರನಾಜ್ಞೆಯೆಂತಿಹುದಂತೆ ನಿರ್ಮಿಪುದು
ಸಂದ ಸದ್ಧರ್ಮದಾಚಾರವೆಲೆ ನರನಾಥ ಭೂತಳದಿ ನಿಜಭಕ್ತಿಗೆ
ಹೊಂದಿ ಮೋಹಿಸುವಂತೆ ಮಾಯಾದಿ ಮಲಗಳಿಗೆ
ಚೆಂದದಿಂ ಮೆಚ್ಚಿ ಮರುಗುವದಲ್ಲ ಜಂಗಮವು
ಕುಂದುಕೊರತೆಗಳು ನಿಜಭಕ್ತಿಕೀರ್ತಿಗೆ ಬಾರದಂತಿಹುದುಮಂತಲ್ಲದೆ ೧೩

ಮಾರ ಶಿಲಿರಂಜನೆಯು ವರ ಮರೀಚಿಯ ನಿಲವು
ಸಾರ ಸುರಚಾಪದಾಕಾರ ಖುಲ್ಲರ ಸ್ನೇಹ
ಭೂರಿ ಸ್ವಪ್ನದಿ ಕಂಡ ಸಿರಿ ಹುಲ್ಲಿನುರಿ ಭರದಿ ಬರುತಿರ್ಪ ಹಳ್ಳ ಭರವು
ವಾರಿಜಾಕ್ಷಿಯರ ಸವಿನೋಟ ಸಮ್ಮೋಹನವು
ಧಾರುಣೀಶರ ಭಕ್ತಿ ನಿಜವಲ್ಲವೆಂದು ನೆರೆ
ಸಾರುತಿಹ ನೀತಿಯುಂಟಾಗಿರಲು ಜಂಗಮವು ಸನುಮತಿಸದೈ ಭೂವರ ೧೪

ಎಂಬ ನುಡಿಗೇಳುತಲೆ ದೇವ ಮಹಲಿಂಗಾಖ್ಯ
ಕುಂಭಿನಿಯು ಪಾತಾಳಕಿಳಿದೊಡಂ ರಾಕಾಬ್ಜ
ಬಿಂಬಶೀತಮನುಳಿದು ಬಿಸಿಯಾದೊಡಂ ಬಳಿಕ ಪಶ್ಚಿಮದಿಶಾಭಾಗದಿ
ಅಂಬುಜಾಹಿತಮಂಡಲುರಿಯಾದೊಡಂ ಬಿಡದೆ
ಅಂಬರಸಖಂ ತಂಪನಾಂತೊಡಂ ನಿಮ್ಮ ಪಾ
ದಾಂಬುಜಗಳಿಗಿತ್ತ ಮದ್ಭಾಷೆ ಜಗದೊಳಗೆಂದು ಬಂಜೆಯಾಗದು ಗುರುವರ ೧೫

ದಾನಪತ್ರಮನಿತ್ತ ಮೇಲೆ ನರಗಟ್ಟೆಯನು
ಮಾನಸದಿ ಮರೆದೊಮ್ಮೆ ಮರಳಿ ಬಯಸಿದರೆನಗ
ನೂನಶ್ರೀ ಪಾಂಡುರಂಗಕ್ಷೇತ್ರ ಮಧ್ಯದಲಿ ಗೋಹತ್ಯವನು ಮಾಡಿದ
ಮಾನವನ ಗತಿಯಾಗಲುಳಿದ ವಿಪ್ರಜನಾಳಿ
ಕೂನಿಟ್ಟು ನೆನಸಿದರೆ ಕಾಶಿಯೊಳು ಶ್ರೀವಿಶ್ವ
ಮಾನಿತನ ಪೂಜೆಯನು ಶಿವರಾತ್ರಿಯೊಳಗಳಿದ ಹಾನಿಂಗೆ ಗುರಿಯಾಗಲಿ ೧೬

ಲಿಂಗದೇಹಿಗಳು ನಿಜಪುರಕೆ ಭಂಗವನೆಣಿಸೆ
ತುಂಗ ಭ್ರಮರಾಂಬಿಕಾಸಂಗ ಸರಸಿಜ ಬಾಲ
ಭೃಂಗನೆನಿಪಶ್ರೀಗಿರಿಯ ಮಲ್ಲಿಕಾರ್ಜುನನ ಚೈತ್ರಮಾಸದ ಪೂಜೆಯಂ
ಪಿಂಗದೆಡಗಾಲಿನಿಂದೊದೆದ ಮಾನವನ ಕೇ
ಡಿಂಗೆ ಗುರಿಯಾಗಲಿ ಮಹಾಲಿಂಗ ಮುನಿಜಾಲ
ಪುಂಗವನೆ ಮದ್ಭಕ್ತಿ ಬಿನ್ನಪಕೆ ಎಡರಿಲ್ಲ ಭೂತಳದಿ ಕರುಣಿಸುವದು ೧೭

ಬಳಿಕುಳಿದ ಕ್ಷತ್ರಿ ವೈಶ್ಯಾದಿಗಳು ಎಡೆವಿಡದೆ
ಛಲದಿಂದೆ ತತ್ಪುರಕೆ ಮನದಿ ಕೆಡಕೆಣಿಸಿದರೆ
ಚೆಲುವ ಶ್ರೀ ಗೋಕರ್ಣ ಮಾಬಲೇಶ್ವರನೆಂಬ ಲಿಂಗಮಂ ಶಿವರಾತ್ರಿಯೊಳ್
ಒಲಿದು ಏಕೋಪವಾಸದಿ ಬಿಲ್ವ ಪತ್ರಿಗಳ
ಮಿಳಿತದಿಂ ನಿರ್ಮಿಸಿದ ಸತ್ಪೂಜೆಯಂ ವಾಮ
ಚ[೧]ರಣ[೧]ದಿಂ ದೂಡಿದನ ಗತಿಯಾಗಲವರಿಂಗೆ ಮಹಲಿಂಗ ಮುನಿಚಂದ್ರಮ ೧೮

---

೧ ರಣ (ಕ.)

ಜಿನ್ನರಿಗೆ ಜಿನ್ನನಾಲಯದಲ್ಲಿ ವೈಷ್ಣವರಿ
ಗಿನ್ನು ವೆಂಕಟಗಿರಿಯ ಮಧ್ಯದಲಿ ಗೋಹತ್ಯ
ವನ್ನು ಮಾಡಿದನ ಗತಿಯಾಗಿರಲಿ ಶೂದ್ರಾದಿ ಸಕಲಜಾತಿಗಳೆಲ್ಲರು
ಬಿನ್ನಣದಿ ನಿಜದೈವ ನೆಲಸಿರ್ಪ ಕ್ಷೇತ್ರದೊಳು
ಚೆನ್ನಾಗಿ ಪಂಚ ಮಹಪಾತಕವನೆಸಗುತ್ತ
ಬನ್ನಬಡುವಾ ಪಾಪ ಮುನ್ನಾಗಲವರಿಂಗೆ ನಿಜಪುರಕೆ ಕುಂದೆಣಿಸಲು ೧೯

ಎನ್ನ ರಾಜಾಲಯದೊಳಿನ್ನುಕಳ್ಳರು ಬಂದು
ಕನ್ನವನು ಒಡೆದು ವರ ಚೆನ್ನೆಯರ ವಾಸದೊಳ್
ನನ್ನಿಯಿಂ ಪೊಕ್ಕಸಮ ಚಿನ್ನದಾಭರಣಮಣಿಖಚಿತವರಮಾಲೆಗಳನು
ಬಿನ್ನಣದ ಗಳಸೂತ್ರಗಳನೆಲ್ಲನೊಳಕೊಂಡು
ಘನ್ನಘಾತಕರೋಡಲೆಚ್ಚತ್ತು ಬಲಸಹಿತ
ಬೆನ್ನತ್ತಿ ನಾ ಬರಲು ನಿನ್ನ ಭೂಮಿಯೊಳಿರಲು ಮುಟ್ಟದಿರ್ಪುದೆ ಭಾಷೆಯು ೨೦

ಈ ನುಡಿಗೆ ತಪ್ಪಿದರೆ ಪುಷ್ಪವತಿಯಾದಸಮ
ಮಾನಿನಿಯ ಸಂಪರ್ಕವೆಸಗಿರ್ದ ಪಾತಕನ
ಹಾನಿಗೀಡಾಗುವೆನು ಮತ್ತಲ್ಲದಲಿ ಪರಮ ಘೋರ್ಪಡೆಯ ರಾಯರುಗಳ
ಮಾನಿಸುವ ವಂಶಕ್ಕೆ ಬಾಹಿರನಲಾ ಬಳಿಕ
ಮೌನಿವರ ಮಹಲಿಂಗ ಮದ್ಭಕ್ತಿಗ್ರಾಮವನು
ಸಾನುರಾಗದಿ ಬಿಡದೆ ಕೈಕೊಂಡು ಕರುಣದಿಂ ಪಾಲಿಪುದು ಭೂತಳದೊಳು ೨೧

ಎಂದು ಪಲವಂದದಿಂ ಭಯಭಕ್ತಿಯೊಳ್ಬಿಡದೆ
ಚಂದದಿಂ ಕೀರ್ತಿಸುವ ಭೂಪತಿಯ ವದನಾರ
ವಿಂದಮಂ ವರಕೃಪಾಲೋಕನದಿ ನೋಡುತ್ತ ಮಹಲಿಂಗನಾಕ್ಷಣದೊಳು
ಮುಂದಕ್ಕೆ ಕರೆದು ಮೈದಡವಿಯೆಲೆ ನರನಾಥ
ಇಂದು ನಿಜಸಾತ್ವಿಕದ ಭಕ್ತಿಗೀ ಜಂಗಮದ
ಸಂದ ಕರಣಾದಿಗಳು ಕರಗಿದವು ಬಳಿಕಿನ್ನು ಸಂದೇಹಮಿಲ್ಲಿಳೆಯೊಳು ೨೨

ಪುತ್ಥಳಿಯು ಬಂಗಾರ ಪತ್ತಾರನಗ್ನಿಯೊಳು
ಬಿತ್ತರದಿ ಕಾಸುವನು ಮತ್ತೊತ್ತಿ ಬಡಿಯುವನು
ಮತ್ತಿರದೆ ಮಳೆಯೊತ್ತಿ ಸುತ್ತರಿಸಿ ನೋಡುವನು ಮತ್ತಾಗಿ ನೆರೆ ನಂಬದೆ
ಕತ್ತರಿಸಿ ಕಡಿಕಂಡ ಮಾಡಿ ಬಿತ್ತರಿಸುತ್ತ
ಚಿತ್ತಕ್ಕೆ ಸರಿಬರಲು ನಿತ್ಯನಂಬುವನದಕೆ
ಉತ್ತಮರು ಅದರಂತೆ ಸತ್ಯಭಕ್ತರ ಮನವನೊತ್ತಿನೋಳ್ಪರು ಭೂವರ ೨೩

ಇಕ್ಷುಕಾಂಡಮನಿರದೆ ಕೀಳ್ದೊಡಂ ಸೀಳ್ದೊಡಂ
ಪಕ್ಷದಲಿ ಕಡಿಕಂಡ ಮಾಡ್ದೊಡಂ ಪೋಳ್ದೊಡಂ
ಸುಕ್ಷಣದಿ ಗಾಣದೊಳಗಿಕ್ಕಲುಂ ತಿಕ್ಕಲುಂ ಕಕ್ಕುವದು ಸವಿಯುಣವನು
ಸಕ್ಷಮದ ಸದ್ಭಕ್ತರದರಂತೆ ನಿಜಗುಣವ
ನೀಕ್ಷಿಸುವ ಮಹಿಮರೊಳ್ ತೋರ್ಪರಂತೆ ಭವದೀಯ
ಅಕ್ಷಯದ ಭಕ್ತಿ ನಲವಿತ್ತುದೀ ಜಂಗಮಕೆ ಮಾಲೋಜಿ ಭೂಪಾಲನೇ ೨೪

ಮದನಾರಿ ಸ್ವಪ್ನದೊಳ್ ಸೂಚಿಸಿದ ಮಾಳ್ಕೆಯಿಂ
ಪದುಳದಿಂದಭಯಮಂ ಮಾಡೆಂದು ಕೊಡಲಾಗ
ಮುಧುಳನಗರಾಧಿಪಂ ಕಾರ್ಗಾಲದೊಳ್ಮೇಘಮಂ ಕಂಡ ಸಿತಕಂಠನೊಲ್
ಮುದವೆತ್ತು ಮನದೊಳಗೆ ಮಂತ್ರಿಮುಖಮಂ ನೋಡಿ
ವಿದಿತನರಗಟ್ಟಿಪುರ ಭೂಮಿಯಂ ತವಕದಿಂ
ಮದಕುಲಾಚಲಶಂಬಮಹಪುರುಷನಡಿಗಳ್ಗೆ ದಾನಪತ್ರವ ಲಿಖಿಸೆನೆ ೨೫

ಕೇಳ್ದು ಶ್ರೀ ಮಹರಾಜನಾಜ್ಞೆಯಂ ಮಸ್ತಕದಿ
ತಾಳ್ದು ಮಂತ್ರಿಪನಾಗ ಸಂತೋಷಜಲಧಿಯೊಳ
ಗಾಳ್ದು ಜೀಯಾ ನಿಮ್ಮ ನುಡಿಯೆನಗೆ ಲೋಕದೊಳು ಸಂಜೀವಿನೆಂದಾಕ್ಷಣಂ
ನೀಳ್ದ ಕರಕಂಜಗಳ ಮುಗಿವುತ್ತ ಸಭೆಯಿಂದ
ಲೇಳ್ದು ಕಂಚಿನ ಪರಮ ಪತ್ರಿಕೆಯ ವಿಸ್ತರದಿ
ಮಾಳ್ದು ಬರೆಸಿದರದೇನೆಂದು ಬಣ್ಣಿಸುವೆನಾಂ ದಾನಪತ್ರಮನಿಳೆಯೊಳು ೨೬

ಶ್ರೀಮನ್ಮಹಾಸಚ್ಚಿದಾನಂದ ಪರಿಪೂರ್ಣ
ಹೇಮಗಿರಿಧಾಮ ಮಂಜುಲನಾಮ ನಿಷ್ಕಾಮ
ರಾಮಗಲಪ್ರೇಮ ನಿಸ್ಸೀಮ ನಿಗಮಾಳಿನುತ ರಾಮಾದಿಸುರಸೇವಿತ
ವ್ಯೋಮ ಭೂಮ್ಯಾದಿ ವರ ಪಾತಾಳ ಸಂಪೂಜ್ಯ
ಕಾಮನಿರ್ಧೂಮ ಮುರಘಾರುದ್ರ ಮಹಲಿಂಗ
ಸ್ವಾಮಿಪದಪದ್ಮ ಸೇವಕನೆನಿಪ ಶ್ರೀಮೋದಪುರದರಸ ಘೋರ್ಪಡೆಯನು ೨೭

ಪೀರೋಜಿನೃಪಗರ್ಭಕ್ಷೀರಾಬ್ಧಿ ವರ್ಧನ
ಶ್ರೀರಾಜ ಸಮರೂಪ ಮಹರಾಜ ಸನ್ಮಾನಿ
ಭೂರಾಜ ಶ್ರೀರಾಜ ಮಾಲೋಜಿ ಬಾಲಕನು ನರಗಟ್ಟಿ ಸದ್ಗ್ರಾಮಮಂ
ಪೂರೈಪ ಭಕ್ತಿಯಿಂದಾರಯ್ದು ಮನದೊಳಗೆ
ಮಾರಾರಿ ಶ್ರೀ ಮುರಗಿ ಮಹರುದ್ರಸ್ವಾಮಿಪದ
ನೀರ[೧]ಜಯುಗ್ಮಕ್ಕೆ ನೀರಾಕಾರವಾಗುತ್ತ ನೀರಾಂಜನಾಗಿರಲೆನೆ ೨೮

ಎಂದು ಬಿನ್ನೈಸಿ ಸಾತ್ವಿಕಭಕ್ತಿಯಿಂದಿರದೆ
ಚಂದದಿಂ ನಿಜಬಂಧು ಸಮ್ಮತದಿ ಬರೆಕೊಟ್ಟ
ಸಂದ ವಿತರಣಪತ್ರ ಸಿದ್ಧಾಂತವಿದು ಜಗದಿ ಚಂದ್ರಸೂರ್ಯಗ್ರಹಗಳಂ
ಬಂಧುರದ ವ್ಯೋಮಭೂಮ್ಯಾದ್ಯಷ್ಟ ಭೂತಗಳ
ವೃಂದವಿರ್ಪನ್ನೆಬರ ವಂಚಿಸದೆ ಸಂತತಂ
ಕುಂದುಕೊರತೆಗಳು ನೆರೆ ಮುಂದೆ ಪೊಂದದ ತೆರದಿ ನಡೆಸುವದು ಮದ್ವಂಶಿಕರ್ ೨೯

ಈ ನುಡಿಗೆಯೀಪುರಕೆ ಕುಂದನೆಣಿಸಿದ ಜನರು
ನಾನು ಪೂರ್ವದಿ ನುಡಿದ ಶಪಥಾಜ್ಞೆದುರಿತಗಳ
ಹಾನಿಗೊಳಗಾಗಿರಲಿ ಸಂತತಂ ಭೂತಳದೊಳೆಂದೆನುತ ಲೇಖಿಸುತಲಿ
ಮಾನನಿಧಿ ಮಂತ್ರಿಪನು ದಾನಪತ್ರವನಾಗ
ಭೂನಾಥನಿದಿರೊಳಗೆ ತಂದಿಟ್ಟು ಎಲೆ ಜೀಯ
ನಾನು ನಿಮ್ಮಾಜ್ಞೆಯಾದಂತೆ ನಿರ್ಮಿಸಿದೆನೆನೆ ನೋಡುತ್ತ ಭೂಕಾಂತನು ೩೦

---

೧ ರೇಜಯುಗ್ಮ (ಕ. ಜ.)

ಧನ್ಯನು ಕಣಾ ಮಂತ್ರಿಯೆನ್ನಾಜ್ಞೆಯಾದಂತೆ
ಬಿನ್ನಣದ ಪತ್ರಮಂ ಚೆನ್ನಾಗಿ ಲೇಖಿಸಿದಿ
ನಿನ್ನ ಚದುರತ್ವಕ್ಕೆ ಮುನ್ನಾರು ಸರಿಯಿಲ್ಲ ಭಾವಿಪೊಡೆ ಭೂತಳದೊಳು
ಇನ್ನು ಮಹಲಿಂಗ ಪದಪತ್ರದಲಿ ನಮ್ಮಮನ
ಭಿನ್ನವಿಲ್ಲದೆ ಬೆರೆದು ಅಚ್ಛೋತ್ತಿದಂತಿಹುದು
ನನ್ನಿಯಿಂದಾ ಪರಿಯ ತದ್ದಾನಪತ್ರದೊಳು ತೋರ್ಪಂತೆ ಭೂಕಾಂತನು ೩೧

ಮಿಂಚುತಿಹ ವರ ವರ್ಣಸಂಚಯಾಶ್ರಿತವಾದ
ಕಂಚಿನ ಸುಪತ್ರಕ್ಕೆ ಹಂಚನಿಲ್ಲದೆ ಮುದದಿ
ಕಾಂಚನಂಚಿತ ಪರಮ ಸಿಕ್ಕೆ ಮುತ್ತುಪಗಳನ್ನೊತ್ತುತ್ತವಾಕ್ಷಣದೊಳು
ಪಂಚಬಾಣಮದೇಭಪಂಚಾಸ್ಯನಿದಿರಿನೊಳ್
ಮುಂಚರಿಸಿ ಕರಕಂಜಗಳ ಮುಗಿದು ನಮಿಸುತ್ತ
ಸಂಚಿತಾದಿವಿನಾಶ ಮಹಲಿಂಗಗುರುವರ್ಯ ಕೈಕೊಳ್ವುದೆನೆ ಕರುಣದಿಂ ೩೨

ಕೊಡುವರಾರ್ ಕೊಂಬರಾರ್ ಕುವಲಯಾ ಮಂಡಲದಿ
ವೃಡನಾಜ್ಞೆ ನಿಜವಾಯ್ತು ಮೂಜಗದಿ ನೋಡುವೊಡೆ
ಪೊಡವಿಪತಿ ನಿಜಭಕ್ತಿಯೆಂತಿರ್ಪುದಂತಾಗಲೆಂದೆನುತ ಕೈಕೊಂಡರು
ಕಡುಧನ್ಯನಾದೆನೆಂದಡಿಗೆರಗಿ ಕೈಮುಗಿದು
ಜಡಜಶರಸಮರೂಪ ಮಾಲೋಜಿ ಮಾರಾಜ
ಜಡೆದಲೆಯ ದೇವ ಮುರುಘಾರುದ್ರಮಹಿಮನಂ ಪೊಗಳುತ್ತಮಿರುತಿರ್ದನು ೩೩

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ನೀಗಿ ಸಕಲ ಸೌಭಾಗ್ಯದಿಂ
ಮದನಹರಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೩೪

**ಅಂತು ಸಂಧಿ ೮ ಕ್ಕಂ ಪದ ೩೦೬ ಕ್ಕಂ**

**ಮಂಗಳಂ**

**ಶ್ರೀ**

ಶ್ರೀ

# ಒಂಬತ್ತನೆಯ ಸಂಧಿ

ಸೂಚನೆ : ಮಹಲಿಂಗನಾಜ್ಞೆಯಿಂ ಪುರಭೂಮಿಗಳಿಗಂದು
ಮಹಲಿಂಗಮುದ್ರೆಗಳ ಸ್ಥಾಪನಂಗೈವುತ್ತ
ಮಹರಾಜ ಚರತೃಪ್ತಿಯಿಂ ಮಾಡಿ ಬೀಳ್ಕೊಂಡು ನಿಜಪುರಕೆ ನೆರೆ ಸಾರ್ದನು

ಸನಕ ಶೌನಕ ಮುಖ್ಯ ಮುನಿಜಾಲನಮಿತಪದ
೧[ಮನಸಿಜನಮಹಮದಾ]೧ ವನದಾವ ಸದ್ಭಾವ
ಘನಘನಾರಥಪುತ್ರ ವರದ ವಾಗ್ವರವಂದ್ಯ ವನಜಾಕ್ಷಸಂಪೂಜಿತ
ಜನನಮರಣವಿನಾಶ ಜಾಹ್ನುಜಾಧರ ಪರಮ
ಕನಕನಗಕೋದಂಡ ಕರ್ಮಹರ ಕಾರುಣ್ಯ
ವನಧಿ ಪಾಲಿಪುದೆನ್ನ ಸಂತತಂ ಸೋಲೂರ ಶ್ರೀಚೆನ್ನವೀರೇಶ್ವರ ೧

ಚಿತ್ತೈಸು ಗಿರಿಜಾತೆ ಮಹಲಿಂಗ ಜಂಗಮಕೆ
ವೃತ್ತಿಯಿಂ ಭಯಭಕ್ತಿ ಭಾವದಿಂದಿತ್ತು ಭೂ
ಪೋತ್ತಮಂ ಪರಮ ಸಂತೋಷದಿಂದೆಡೆವಿಡದೆ ಪಾಲಿಸುತಲಾಕ್ಷಣದೊಳು
ಚಿತ್ತದೊಳು ಚಿನ್ಮಾತ್ರರೂಪನೆಂದರಿವುತ್ತ
ಚಿತ್ತಜಾರಿಯು ಪೇಳ್ದುದಂ ಮನದಿ ನೆನೆವುತ್ತ
ಮತ್ತಮಾ ಪುರುಷನಂಘ್ರಿಗೆ ನಮಿಸಿ ವಿನಯದಿಂ ಮಾಲೋಜಿ ಬಿನ್ನೈಸಿದಂ ೨

---

೧ ವನಜವಾಶ್ವರಲಿಂಗ (ಕ. ಚ.)

ಮಹಲಿಂಗ ಭವದೀಯ ಪುರಭೂಮಿಸೀಮೆಗಳು
ಮಹಲಿಂಗಮಯದಿಂದೆ ಮೆರಿಯಬೇಕೆಂಬಾಶೆ
ಮಹಪ್ರೀತಿಯಾ[೧]ಗೆನ್ನ[೧] ಮನದೊಳಗೆ ತೋರುವದು ನಂಬುಗೆಯ ಪಾಲಿಪುದೆನೆ
ಮಹರಾಜಮಣಿ ಕೇಳು ದಂತಿದಾನವನೊರ್ವ
ಬಹುಳಾಶೆಯಿಂ ಕೊಂಡು ಲೋಹದಂಕುಶಕಿಂದು
ಇಹದಲ್ಲಿ ವಿರತಿ ಮಾಡಿದರೇನು ರಾಜಿಪುದೆ ಶಿವಭಕ್ತಿಯಂತಾಗಲಿ ೩

ಧರಣಿಪತಿಯಾ ನುಡಿಗೆ ಮನಮೆಚ್ಚಿ ಮಂತ್ರಿಪಗೆ
ಒರಿಯಲಾಕ್ಷಣ ಜೀಯ ನಿಮ್ಮಾಜ್ಞೆಯಾದಂತೆ
ನಿರುಪಮದ ಮಹಲಿಂಗ ಮುದ್ರೆಗಳು ಮನದೆಣಿಕೆಯಾಮುನ್ನ ನಿರ್ಮಿಸಿದವು
ಕರುಣಿಸುವದೆನೆ ಬಳಿಕ ಮಹಲಿಂಗಗುರುವರನ
ಚರಣಾರವಿಂದಕ್ಕೆ ನೆರೆ ನಮಿಸಿ ಕೈಮುಗಿದು
ಪರಮ ಜಗದಾರಾಧ್ಯ ದಯಮಾಡಬೇಕೆನುತ ಬಿನ್ನೈಸಿ ಭಯಭಕ್ತಿಯಿಂ ೪

ಮುಕ್ತಿಕಾಂತನ ಕರೆವ ಸುಜ್ಞಾನಭಾವದಿಂ
ಭಕ್ತಿಭಾಮಿನಿ ಪಿಡಿದಳೆಂಬಂತೆ ಭೂಕಾಂತ
ರಕ್ತಿಯಿಂ ಮುನಿಕಾಂತನಸಮ ಕೈದಂಡಿಯಂ ಗ್ರಹಿಸುತ್ತಲಾಕ್ಷಣದೊಳು
ವ್ಯಕ್ತದಂದಳದೊಳಗೆ ಮೂರ್ತಿಗೊಳಿಸುತ್ತ ವಿ
ರಕ್ತಮಣಿಯೆಡಬಲದಿ ಸಹಜಾತರೊಡಬರಲು
ಮುಕ್ತವಾಹನಗಳಿಂ ಚತುರಂಗಬಲಸಹಿತ ನಡೆಗೊಂಡನೇನೆಂಬೆನು ೫

ಭೇರಿ ತಮ್ಮಟ ಢಕ್ಕೆ ಪಟಹ ಕಹಳೆಗಳಾಗ
ಚೀರುತ್ತ ಘೋರ್ಗರೆದು ಬ್ರಹ್ಮಾಂಡಭಾಂಡದೊಳ್
ಪೂರೈಸಿ ಪ್ರತಿಶಬ್ದ ಕೊಡುವಂತೆ ಮಾಲೋಜಿ ಮಹರಾಜನಾಕ್ಷಣದೊಳು
ಭೂರಿ ಸಂಭ್ರಮದಿಂದಮಾತ್ಯರೊಡನೈತರಲು
ಸಾರಚತುರಂಗಬಲ ದಟ್ಟಿಸುತನಡೆದಿರಲು
ಪೌರಜನರಾಗ ಮಹಪುರುಷನಂದಳಬಳಸಿ ಬರುತಿರ್ದರೇನೆಂಬೆನು ೬

---

೧ ಗಿನ್ನು (ಕ.)

ಎತ್ತಿದ ಪತಾಕೆ ವರ ಛತ್ರಗಳ ಮೊತ್ತದಿಂ
ಚಿತ್ರರದಿ ಸಾರ್ವಿಸೀಗುರಿ ಚಾಮರಂಗಳಿಂ
ಮತ್ತಿರದೆ ಕೀರ್ತಿಸುವ ವೇತ್ರಧಾರಿಗಳಿಂದಲೆಡೆವಿಡದೆ ಸಂಭ್ರಮಿಸುತ
ಚಿತ್ತಜಾರಿಯ ಬಳಸಿ ಮುತ್ತಿಬಹ ಮಾನಿಯರ
ವೃತ್ತಿಯಿಂದೆತ್ತನೋಡಿದಡತ್ತ ಚೆಲ್ವಾಗಿ
ಚಿತ್ತಕ್ಕೆ ನಲವಿತ್ತುದಿನ್ನಾವ ಕಬ್ಬಿಗರು ಬಿತ್ತರಿಪರೆಲೆ ಪಾರ್ವತಿ ೭

ಪೂರ್ವಪುರುಷ[೧]ನಿದ ಸ[೧]ನ್ಮಾನಿಸಿದನದರಂತೆ
ಬೇರ್ವರಿದು ನೆಲಸಿರ್ಪುದೆಂಬಂದಮಂ ಬಿಡದೆ
ಸರ್ವರಿಗೆ ತೋರ್ಪಂತೆ ಮಹಪುರುಷನಾಜ್ಞೆಯಿಂ ಮಾಲೋಜಿ ಭೂಕಾಂತನು
ಪೂರ್ವದಿಗ್ಭಾಗದೊಳ್ ಭೂಖನನಮಂ ಮಾಡಿ
ಸರ್ವಾಗಮೋಕ್ತವಿಧಿಯಿಂ ಲಿಂಗಮುದ್ರೆಗಳ
ಪಾರ್ವತೀವರಪರಮರೂಪಗರ್ಪಿತಮೆಂದು ಸ್ಥಾಪನಂ ಮಾಡಿಸಿದನು ೮

ಉತ್ತಮೋತ್ತಮನಿಂಗೆ ನಾನಿತ್ತಶಪ[೨][ಥಗಳ][೨]
ಉತ್ತರಗಳಿದರಂತೆ ನಿಜವೆಂದು ತೋರ್ಪವೊಲ್
ಬಿತ್ತರದಿ ಮಹರಾಜ ಮಹಲಿಂಗನಾಜ್ಞೆಯಿಂ ವರಲಿಂಗಮುದ್ರೆಗಳನು
ಉತ್ತರದಿಶಾಭಾಗ ಭೂಮಿಯಂ ಖನನಿಸುತ
ಉತ್ತರಾದ್ಯಾಗಮದ ವಿಧಿಗಳಿಂ ಸ್ಥಾಪಿಸುತ
ಚಿತ್ತಜಾರಿಯರೂಪಗಾಪೌರ ಭೂಮಿಗಳು ಶಾಶ್ವಿತಾರ್ಪಿತಮೆಂದನು ೯

ನಿಶ್ಚಲದ ಮಹಿಮಂಗೆ ಘನಭಕ್ತಿಪೂರ್ವಕದಿ
ಅಚ್ಚಳಿಯದಿಹಯೆನ್ನ ರಾಜಮುದ್ರೆಗಳಿಂದೆ
ಅಚ್ಚೊತ್ತಿದಸಮ ಕಂಚಿನಪತ್ರಮಿದರಂತೆ ಲೋಕದೊಳ್ ನಿಜಮೆಂಬುವ
ಎಚ್ಚರವ ತೋರ್ಪಂತೆ ಯತಿಚಂದ್ರನಾಜ್ಞೆಯಿಂ
ಪಶ್ಚಿಮದ ಧಾತ್ರಿಯಂ ಖನನಿಸುತ ಮುದ್ರೆಗಳ
ಇಚ್ಛೈಸುತಾ ಪೌರ ಭೂಮಿಗಳು ಗುರುವರಗೆ ನಿಚ್ಚವಾಗಿರಲೆಂದನು ೧೦

---

೧ ನದಿಮ (ಕ. ಚ.) ೨ ಥಾಗ್ನಿ (ಕ. ಚ.)

ಲಕ್ಷಿಸುತ ಮಹಿಮನೊಳ್ ಮದ್ದಾನಪತ್ರವಿದು
ಪಕ್ಷದಿದರಂತೆ [ಸಲೆ] ನೆಲಸಿರ್ಪುದೆಂದಳಿಗೆ
ಸುಕ್ಷಣದಿ ತೋರ್ಪಂತೆ ದಕ್ಷಿಣದ ಭೂಮಿಯೊಳು ವರಲಿಂಗ ಮುದ್ರೆಗಳನು
ಸಕ್ಷಮದಿ ನೆಲೆಗೊಳಿಸಿ ತಾಪಸಾರ್ಪಿತಮೆನಲು
ಮೋಕ್ಷವರಕುಂಭಜಂ ನಿಜಪಾತ್ರೆಲಾಕುಳ[೧][ತ][೧]
ರಕ್ಷಚರ್ಮವನು ನೆರೆ ತಾಳುತ್ತ ತಲೆಯೊಳಗೆ ಬರುತಿರ್ದನಾಕ್ಷಣದೊಳು ೧೧

ಇಂತು ಸಂಭ್ರಮದಿಂದೆ ಭೂವಿರಕ್ತನ ಪದಕೆ
ಸಂತಸದ ಭಕ್ತಿಯಿಂ ವರಲಿಂಗ ಮುದ್ರೆಗಳ
ಸಂತತಿಯನಾಕ್ಷಣಂ ಪುರಭೂಮಿ ಸೀಮೆಗಳಿಗೆಂಟಾಗಿ ನೆಲೆಗೊಳಿಸುತ
ಚಿಂತಿತಪದಾರ್ಥವನು ಶಿವಲಿಂಗಜಂಗಮಕೆ
ಮುಂತಿರದೆ ಕೊಟ್ಟುನಮಿಸುತ್ತಾಗ ಮೇದಿನೀ
ಕಾಂತ ಮಹಲಿಂಗನಂದಳಸಹಿತ ಹಿಂದುರಿಗಿ ಬರುತಿರ್ದ ಪುರದತ್ತಣಂ ೧೨

ಚತುರಂಗಬಲಸಹಿತ ವಾದ್ಯಶಬ್ದಂಗಳಿಂ
ಕ್ಷಿತಿಪನಾಪುರವನೊಳಪೊಕ್ಕು ಸಡಗರದಿಂದೆ
ಸಿತಕಂಠರೂಪನಂ ಪಲ್ಲಕ್ಕಿಯಿಂ ಮೆಲ್ಲನಿಳಿತರುತ ಗದ್ದುಗೆಯೊಳು
ಅತಿಭಕ್ತಿಯಿಂ ಮೂರ್ತಿಗೊಳಿಸುತ್ತ ಕೈಮುಗಿದು
ಯತಿವರೋತ್ತಮ ಲಿಂಗಸ್ಥಾಪನಾರಾಧನೆಯ
ಹಿತದಿಂದ ಕೈಕೊಳುವುದೆಂದಾಗ ಬಿನ್ನೈಸೆ ಮಾಲೋಜಿ ಮಹರಾಜನು ೧೩

ಪರಮಾನ್ನ ಪಾಯಸವು ಪರಡಿ ಮೋದಕ ಗುಳಿಗೆ
ಕರಿಗಡುಬು ವಡೆಗಾರಿಗೆಯು ಗುಳ್ಳಪಪ್ಪಡಿಯು
ವರಪೋಳಿಗೆಯು ಸೂಪಶಾಲ್ಯೋದನಂ ಭೋಜ್ಯ ಭಕ್ಷ್ಯಂಗಳುಪದಂಶಕಂ
ಪರಿಪರಿಯ ಶಾಕಪಾಕಾದಿಗಳು ಕಂಪಿಸುವ
ಸರಸ ಷಡ್ರಸದಿಂದೆ ಸವೆದ ನವ್ಯ ಪದಾರ್ಥ
ದಿರವಿನಿಂ ಘೃತಮುಖ್ಯ ನವ್ಯಸಾರಂಗಳಂ ನಿರ್ಮಿಸಿದರಾಕ್ಷಣದೊಳು ೧೪

---

೧ ದಿ (ಕ. ಚ.)

ಮೃಡರೂಪನಾಜ್ಞೆಯಿಂ ಶಿವಜಂಗಮಾವಳಿಗೆ
ಸಡಗರದಿ ಭಕ್ಷ್ಯಭೋಜ್ಯಾದಿಗಳ ಸಾರಗಳ
ನೆಡೆಮಾಡಿ ತಣಿಯುಣಿಸಿ ತಾಂಬೂಲ ದಕ್ಷಿಣವ ನೃಪನಿತ್ತು ಮಹಲಿಂಗನು
ಒಡನೆ ಸಿತಕಂಠಋಷಿಗೋತ್ರಸಂಭವನೆನಿಪ
ಎಡವಣಾಖ್ಯನ ಕರೆದು ಘನಲಿಂಗಮುದ್ರೆಗಳಿ
ಗೆಡೆಗಳಂ ಮಾಡಿಂದು ಮೊದಲಾಗಿ ಪೂಜಿಪುದು ನಿಜವಂಶಪಾರಂಪರಾ ೧೫

ಎಂದು ನಿರವಿಸಿ ಬಳಿಕ ಭೂಪಾಲನಂ ಕರೆದು
ಚೆಂದದಿಂ ಚತುರಂಗ ಬಲಕೆ ಪರಮಾನ್ನಗಳ
ವೃಂದಮಂ ಎಡೆಮಾಡಿ ಸವಿ ಸವಿದು ನೆರೆ ನಂಜಿ ನೋಡುತ್ತಲೀಯನ್ನವು
ಇಂದಮರನಾಥಂಗೆ ದುರ್ಲಭವಲಾ ಎಂದು
ಮುಂದೈಪ ಭಕ್ತಿಯಿಂದಂದು ಕೊಂಡಾಡುತ್ತ
ಬಂದು ಮಾನಿನಿಯರುಂ ಸಹ ಮಹಾಪುರುಷಂಗೆ ನಮಿಸುತ್ತ ಭಯಭಕ್ತಿಯಿಂ ೧೬

ಆ ಪರಮ ಮಹಿಮನಾಶೀರ್ವಾದಮಂ ತಳೆದು
ಮಾಪಶರ ಪೇಳ್ದಸಮ ಸ್ವಪ್ನ ಸಿದ್ಧಿಸಿತೆಂದು
ಭೂಪ ಚತುರಂಗಬಲಸಹಿತ ನಿಜಪೌರಮಂ ಸಾರ್ದು ಸುಖದಿಂದಿರ್ದನು
ತಾಪಸೋತ್ತಮನಿತ್ತ ನರವಾಲವಾಲಕ್ಕೆ
[ಓಪ]ನೆಂದೆನಿಸುತ್ತೆ ಸದ್ಭಕ್ತಸಂಕುಲದ
ತಾಪತ್ರಯಂಗಳಂ ಹರಸುತ್ತ ಮೆರೆದಿರ್ದ ಸದ್ಭಕ್ತವನಚೈತ್ರನು ೧೭

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಕೇಳುವರ್ ಪೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿರ್ಪರು ೧೮

**ಅಂತು ಸಂಧಿ ೯ ಕ್ಕಂ ಪದ ೩೨೪ ಕ್ಕಂ**

**ಮಂಗಳಂ**

**ಶ್ರೀ**

ಶ್ರೀ

# ಹತ್ತನೆಯ ಸಂಧಿ

ಸೂಚನೆ : ನರವಾಲವಾಲಾಖ್ಯ ಪೌರವಂ ಮಹಲಿಂಗ
ಪರಮ ಕೌಲಮುನಿತ್ತು ಕಟ್ಟಿಸಲ್ ಕುವಲಯದಿ
ಸುರಪುರದ ಸಂಭ್ರಮವ ಜರೆವುತ್ತ ತತ್ಪುರಂ ಮೆರೆದಿರ್ದುದೇನೆಂಬೆನು

ಶ್ರೀಗಿರಿಸುತಾವದನಪಂಕೇಜದಿನನಾಥ
ಯೋಗಿಜನಮಾನಸಾಲಯ ಗಣಪಗುಹತಾತ
ನಾಗದೈತ್ಯಮದಾಂಬುಧರಜಾಲಸಂಹಾರಂಝಂಝಾನಿಲಂ ಶಂಕರ
ಆಗಮೋನ್ನತಮಹಿಮ ಮರುತಸಂಜಾತಘನ
ರಾಗಸಂಪ್ರೀತ [1]ಶಮನಾಂಗಗಿರಿ[1]ಪುರುಹೂತ
ಭೋಗಿವರಸೂತ್ರಸಮರೂಪ ಚೆನವೀರೇಶ ಪಾಲಿಪುದು ಮೂಜಗವನು ೧

ಲಾಲಿಸೆಲೆ ಗಿರಿಜಾತೆ ಮಹಲಿಂಗ ಜಂಗಮದ
ಲೀಲೆಯಿಂ ಭಕ್ತಿಪೂರ್ವಕದಿಂದೆ ಮನವೊಲಿದು
ವ್ಯಾಲಪತಿ ಪೇಳಲಸದಳಮಾಯ್ತು ಬಳಿಕಾವ ಕಬ್ಬಿಗರು ಬಣ್ಣಿಸುವರು
ಮಾಲೋಜಿರಾಜ ಮನವೊಲಿದಿತ್ತ ನರವಾಲ
ವಾಲಾಖ್ಯನಗರಮಂ ಕೈಕೊಂಡು ಪಾಲಿಸುತೆ
ಶೂಲಧರರೂಪ ಮೆರೆದಿರ್ದನಾ ಪುರದಿ ಜಲಪದ್ಮಪತ್ರನ್ಯಾಯದಿ ೨

೧ ನುತಮದನಗಿರಿ ?

ಇಂತಿರುತ ಮಹಲಿಂಗನೊಂದು ದಿನ ತತ್ಪುರವ
ನಂತರಿಸದಲಿ ಕವಲಮೀಯಲ್ಕೆ ನೆರೆನಂಬಿ
ಕಂತುಹರರೂಪನಂ ಜಾನಿಸುತ ಮಾನಸದಿ ಇಂತೆಂದರಾ ಭಕ್ತರು
ದಂತಿದಂತಗಳಂತೆ ಪಾಷಾಣಲಿಪಿಯಂತೆ
ಸಂತರಾಡಿದ ಮಾತು ನಿಜವಲಾ ಎಂದೆನುತ
ಸಂತಸದಿ ತಮತಮಗೆ ನಿರ್ಮಿಸಿದರಶಿ ದಿವ್ಯಮಂದಿರದ ಸಂದಣಿಯನು ೩

ಸಕಲದೇಶದೊಳಿರ್ಪ ಸದ್ಭಕ್ತರಾಕ್ಷಣಂ
ಅಕಳಂಕ ಮಹಿಮನ ಸುಕೀರ್ತಿಯಂ ಲಾಲಿಸುತ
ಮುಕುತಿತಾಣಮಿದೆಂದು ಭಾವಿಸುತ ಮನದೊಳಗೆ ಘನತರದ ನಿಲಯಂಗಳಂ
ಯುಕುತಿಯಿಂ ನಿರ್ಮಿಸುವ ಸಡಗರವನೇನೆಂಬೆ
ಸುಖದ ಸುಗ್ಗಿಗೆ ತವರುಮನೆಯೆನಿಸಿ ತತ್ಪುರಂ
ಪ್ರಕಟಸತ್ಕೀರ್ತಿಯಿಂದೊಡಗೂಡಿ ಮೆರೆದಿರ್ದುದೇನೆಂಬೆನಚ್ಚರಿಯನು ೪

ಮನ್ನಣೆಯ ಮಹಪುರುಷನಾಜ್ಞೆಯಿಂ ಸದ್ಭಕ್ತ
ರುನ್ನತದ ಪರಮ ಗೇಹಂಗಳಂ ನಿರ್ಮಿಸಿದ
ರಿನ್ನಾವ ಕಬ್ಬಿಗರು ವರ್ಣಿಪರು ಸಂತತಂ ತನ್ನಗರ ಸಂಭ್ರಮವನು
ರನ್ನದಿಂ ಕಂಗೊಳಿಪ ಕಡುಮಾಡದೇಳ್ಗೆಯಿಂ
ಚಿನ್ನದಿಂ ಸವೆದ ಭಿತ್ತಿಗಳಿಂದ ಸಂತತಂ
ಚೆನ್ನಾಗಿ ರಂಜಿಸಲ್ ಚೆನ್ನಗಿರಿಯೆಂದೆಂಬ ಪೆಸರಾಯ್ತು ಮೂಜಗದೊಳು ೫

ಸಪಿಗಲ್ಗಳಿಂ ಸವೆದ ಸಾಲದಿಂ ಮಾಲದಿಂ
ಪೊಸರನ್ನದಿಂದಿಡಿದ ದ್ವಾರದಿಂ ಸಾರದಿಂ
ಮಿಸುನಿಗೆಲಸದಿ ಸವೆದ ಕದಗಳಿಂ ಪಿಂಜರಿಯ ಸದನಂಗಳಿಂ ರಂಜಿಪ
ಪಸುರವಣಿಯಂಗಡಿಯ ಕಾಂತಿಯಿಂ ಪಜ್ಜೆಯಿಂ
ಮಿಸುಪ ಮುತ್ತಿನಲೋವೆ ಯೇಳ್ಗೆಯಿಂ ಜಾಳ್ಗೆಯಿಂ
ದಸಮ ಹರಿನೀಲಕುಟ್ಟಿಮ ಭೂಮಿ ಸೀಮೆಯಿಂ ತನ್ನಗರ ಕಂಗೊಳಿಸಿತು ೬

ಜಾರರಾಸ್ಪದ ಕರ್ಮದುದ್ರೇಕದಿಂದ ತ
ದ್ವಾರಕಾನಗರಮದು ಸರ್ವಜಗಮರಿವಂತೆ
ನೀರೊಳಾಳ್ದುದು ಬಳಿಕ ಸುರಪುರಂ ಶಿಖಿಮುಖದ ಬೋಳೆಯರಿಗಾವಸಮುದು
ಸಾರ ಪಾತಾಳಮದು ದ್ವಿಜಿಹ್ವ ವಕ್ರಗತಿ
ಮಾರುತಾಹಾರಿಗಳ ನೆಲೆಯೆಂದು ಕೈಮಾಡಿ
ನಾರದಿಂ ನಗುವಂತೆ ಸೌಧಾಗ್ರಧ್ವಜಗಳಿಂ ಕಂಗೊಳಿಸಿತಾ ಪಟ್ಟಣಂ ೭

ಕಲಧೌತಮಯವಾದ ಲಂಕಾದ್ರಿ ರಾವಣನ
ಕೊಲಿಸಿ ಕಪಿಜಾಲದಿಂ ಪಾಳಾಯ್ತು ನೋಡುವೊಡೆ
ಜಲಜಾಕ್ಷನಿಂ ಮೋಸಗೊಲೆಮಾಡಿ ಕಂಸನಂ ಕೊಂದಿತ್ತು ಮಥುರಾಪುರಂ
ಕಲಭಪುರ ಧರ್ಮಾದಿ ಪಾಂಡವರನಾಕ್ಷಣಂ
ಸ್ಥಲಭ್ರಷ್ಟದಿಂದಡವಿಗೀಡುಮಾಡಿಸಿತಕಟ
ಇಳೆಯೊಳಿನ್ನೆನಗೆ ಸರಿಯಿಲ್ಲೆಂದು ನಗುವಂತೆ ಹರ್ಮ್ಯರುಚಿ ಕಣ್ಗೆಸೆದುದು ೮

ಆ ನಗರ ಧ್ವಜಪಟಂ ನಭದಲ್ಲಿ ಚಲಿಸುತಿರೆ
ಭಾನುವಿನ ತುರಗಮದ ಕಂಡು ಬೆದರುತ್ತಲಾ
ಸ್ಥಾನದೊಳ್ ರಥಸಹಿತ ಬೀಳಲ್ಕೆ ಸಾರಥಿಯು ರಥನೋರುಗಳ್ ಮುರಿವುತ
ಊನವನು ತಳೆದರುಣ ಕಾಸ್ಯಪಗಳಾಕ್ಷಣಂ
ಹಾನಿಗೀಡಾದರಿಂತಲ್ಲೆಂದು ಪೇಳುವೊಡೆ
ಮಾನನಿಧಿ ಖೇಚರರಿಗೆಂತು ಸಮನಿಪುದಕಟ ಭಾವಿಪೊಡೆ ಭೂತಳದೊಳು ೯

ಮಹಲಿಂಗನಾಜ್ಞೆಯಿಂದೀರೀತಿ ನಗರಮದು
ಮಹಲಿಂಗಮಯವಾಗನನ್ಯಗುಣದಿಂದೆಸೆಯೆ
ಮಹಲಿಂಗಪುರ ಚೆನ್ನಗಿರಿಯೆಂಬ ದ್ವಯನಾಮ ಸಮನಿಸುತ ರಂಜಿಸಿದವು
ಮಹಪುರುಷನಿಂದಾದ ಕಾರ್ಯವೀ ಜಗದೊಳಗೆ
ಮಹಮೇರು ಮುಂತಾದ ಸ್ಥಾನಗಳ ನಾ ಬಿಟ್ಟು
ಮಹಪ್ರೀತಿಯಿಂದಿರ್ಪೆನಾತನ ಮಹಾಪುರದಿ ಲಾಲಿಪುದು ಗಿರಿಜಾತೆಯೆ ೧೦

ನರಗಟ್ಟಿಯೆಂಬ ಪೆಸರರಿಯ ಬಾರದ ತೆರದಿ
ನರಿಯಂತೆ ಪಲ್ಗಿರಿದು ಸರಿದಿತ್ತು ಮುನ್ನವೇ
ಪರಮನಾಣತಿಯಿಂದೆ ಭ್ರಮರಕೀಟನ್ಯಾಯದಂತಾಯ್ತು ಭಾವಿಸುವೊಡೆ
ಗಿರಿಜಾತೆ ಚಿತ್ತೈಸು ಭಕ್ತಿಪೂರ್ವಕದಿಂದೆ
ಹರುಷದಿಂದಾಪುರದ ಸಂಭ್ರಮವ ಪೇಳುವೊಡೆ
ಪರಮೇಷ್ಠಿ ಪಾವನ ಸುರಾಚಾರ್ಯ ಯೋಗಿಪರಿಗರಿದಾಯ್ತು ಮೇದಿನಿಯೊಳು ೧೧

ಹರಿಯಂಗಸಂಗಮಂ ಬಿಟ್ಟಲ್ಲಿ ಸಿರಿಬಂದು
ಸ್ಥಿರಗೊಂಡಿರಲು ಕೇಳಿ ಹರನಂಜಿ ಗಿರಿಜೆಯಂ
ಎರವಿಲ್ಲದೆಡದೊಡೆಯೊಳಗೆ ತಳೆಯೆ ವಿಧಿ ಬೆದರಿ ನಿಜಪತ್ನಿ ಶಾರದೆಯನು
ವರ ಲಪನಕಂಜದೊಳು ಬಚ್ಚಿಡಲು ಸುರಪಾಲ
ಪರಿಕಿಸುತ ಮೈಗಂಗಳಿಂ ಶಚಿಯ ಕಾದಿರ್ದ
ಶರಜನ್ಮ ಲಗ್ನಮಂ ಬಿಟ್ಟಿರ್ದನಾ ಭಯದೊಳೇನೆಂಬೆನಚ್ಚರಿಯನು ೧೨

ಅಲ್ಲಿರ್ಪ ಭಕ್ತೋತ್ತಮರ್ ಪರಮ ಪ್ರಮಥಾಳಿ
ಅಲ್ಲಿರ್ಪ ಮಾನವರ್ ನಿರ್ಜರರು ಭಾವಿಪೊಡೆ
ಅಲ್ಲಿರ್ಪ ಪಶುಕುಲಂ ಸುರಧೇನುಗಳು ಬಳಿಕ ಶಿಲೆಯೆಲ್ಲ ಲಿಂಗಾಳಿಗಳ್
ಅಲ್ಲಿರ್ಪ ವಿಟಪಿಗಳ್ ಘನ ಕಲ್ಪಶಾಖೆಗಳ್
ಅಲ್ಲಿರ್ಪ ಜಲವೆಲ್ಲ ತೀರ್ಥರಸವೆಂದರಿಧು
ಅಲ್ಲಿ ನಾನತಿ ಪ್ರೀತಿಯಿಂದಿರ್ಪೆನಗಜಾತೆ ಕೇಳೆಂದನಾ ಶಂಕರಂ ೧೩

ಅಲ್ಲಿರ್ಪ ತೃಣವೆಲ್ಲ ಪರಮ ಸಂಜೀವನಂ
ಅಲ್ಲಿರ್ಪ ಬಳ್ಳಿಗಳ್ ಸುರವಲ್ಲಿಗಳ್ ಬಳಿಕ
ಅಲ್ಲಿರ್ಪ ಮೊರಡಿಗಳ್ ವರರೋಹಣಾದ್ರಿಗಳ್ ಅಲ್ಲಿರ್ಪ ಘನ ಪರ್ವತಂ
ಸಲ್ಲಲಿತ ಕಲಧೌತಗಿರಿಯೆಂದು ನಾ ತಿಳಿದು
ಅಲ್ಲಿ ಮಹಲಿಂಗನ ಸುಲೀಲೆಯಂ ನೋಡುತ್ತ
ಉಲ್ಲಾಸದಿಂದಿರ್ಪೆನಿದಕೆ ಸಂಶಯವಿಲ್ಲ ದಾಕ್ಷಾಯಣೀ ಲಾಲಿಸು ೧೪

ಆ ನಗರಕಧಿನಾಥನಾಗಿರ್ದ ನಿರ್ಮಾಯ
ಮೌನಿವರ ಮಹಲಿಂಗನೊಂದು ದಿನ ತಿಳಿದು ನಿಜ
ಮಾನಸದಿ ನಿಶ್ಚೈಸಿ ಪಂಚಮುಖಿ ಪರಶಿವನ ಪಂಚಮಾಸ್ಯದಿ ಜನಿಸಿದ
ಮಾನನಿಧಿ ಪಂಚವಕ್ತ್ರಗಣೇಶ್ವರಾನ್ವಯದಿ
ಭೂನುತೋನ್ನತರಾಗಿ ಮೆರೆದಿರ್ದ ವಾಣಿಜರ
ಸಾನುರಾಗದಿ ಕರೆದು ಸೆಟ್ಟಿತನವಿತ್ತವರ್ಗೆ ನಿಜ ವಂಶಪಾರಂಪರಾ ೧೫

ಆದಿರುದ್ರನ ಶಕ್ತಿ ಪಾರ್ವತಿಯ ಗರ್ಭದೊಳ
ಗಾದರದಿ ಜನಿಸಿರ್ದ ಕುರುಹುವಿನ ಸೆಟ್ಟಿಗಳ
ಭೇದವಿಲ್ಲದ ಕುಲದ ಭಕ್ತನೋರ್ವನಿಗಸಮ ಗೌಡಿಕೆಯ ಪಾಲಿಸುತಲಿ
ವಾದಿಜನ ಸಂಹಾರ ದೇವಾಂಗನಾನ್ವಯದಿ
ಮೋದದಿಂದಲಿ ಪುಟ್ಟಿ ಮೆರೆದಿರ್ದ ಭಕ್ತನಿಗೆ
ಮೇದಿನಿಯು ತಿಳಿವಂತೆ ನೇಮಿಸಿದ ಜಾಡಗೌಡಿಕೆಯನದನೇವೇಳ್ವೆನು ೧೬

ಬಳಿಕಾದಿರುದ್ರನ ಸುಜಾನುಮಧ್ಯದೊಳೊಗೆದ
ಎಲುವ[೧]ರಡ್ಡಿ[೧]ಯ ಪಂಚವಿಂಶತಿಯ ಘನಕುಲದ
ಚೆಲುವ ಭಕ್ತೋತ್ತಮರಿಗಾವಟಿಗತನವಿತ್ತು ಪಂಚಮಾನ್ವಯದುದಿಸಿದ
ಮಲಹರನ ಭಕ್ತಂಗೆ ದಲ್ಲಾಳತನವಿತ್ತು
ಉಳಿದ ಜೈನಾದಿ ಚಾರ್ವಾಕವಿಪ್ರಾಳಿಗಳ
ಕುಲಮಿರ್ಪೊಡೀ ಪುರದಿ ಜಯಮಿಲ್ಲಮೆಂದೆನುತ ಮಹಲಿಂಗ ಸೂಚಿಸಿದನು ೧೭

ಆವಾವ ಜಾತಿಗಳಿಗಾವಾವ ಕರ್ಮಗಳು
ಜೀವನೋಪಾದಿಯೊಳ್ ಜಗದಲ್ಲಿ ರಂಜಿಪವು
ಭಾವಿಸುವ ತತ್ಕಾರ್ಯಗಳನೊರ್ವರೊರ್ವರಿಗೆ ನೇಮಿಸುತ ಮಹಪುರುಷನು
ಓವಿ ಕುಲಕರ್ಣಿ ನಾಯಕ ಮುಖ್ಯ ಗೌಡರನು
ತೀವಿದ ಮಹಾದಯದಿ ತಮ್ಮಯಾದಿನದಿಂದೆ
ಭೂವಲಯದೊಳು ಬಾಳ್ವ ತೆರದಿಂದೆ ಸೂಚಿಸಿದನಾ ಪುರದೊಳಿರಲೆನ್ನುತ ೧೮

೧ ರಡಿ (ಕ. ಚ.)

ಮುನ್ನೋರ್ವ ಮಹಪುರುಷ, ಸಿದ್ಧರಾಮೇಶ್ವರಂ
ಸೊನ್ನಲಾಪುರದೊಳಗೆ ನೀರತಂ ರಾಜಿಸುವ
ಚೆನ್ನೆ ಸುಗ್ಗಲದೇವಿ ಮುದ್ದಗೌಡರ ಗರ್ಭಕ್ಷೀರಾಬ್ಧಿಯೊಳ್ ಜನಿಸುತ
ನನ್ನಿಯಿಂ ಧೂಳಿಮುಹಕಾಳವೆಂಬಾಖ್ಯದಿಂ
ಬಿನ್ನಣದ ಬಾಲಲೀಲೆಯ ತಳೆದು ಪಶುಪಾಲ
ನಂನಿಜದಿ ಪಾಲಿಸುತಲಿರುತಿರ್ದ ಸಂತತಂ ಭೂತಳದೊಳೇ ವರ್ಣಿಪೆಂ ೧೯

ಪಶುಗಳಂ ಪಾಲಿಸುವ ಕಾಂತಾರದೊಳಗೆನ್ನ
ಹಸುಳನೆಂದೆನಿಸುತಿಹ ಧೂಳಿಮುಹಕಾಳನುರಿ
ಹಸಿವನೆಂದೆನುತಾಗ ಮಾತೆ ಸುಗ್ಗಲದೇವಿ ಮನದೊಳಗೆ ಭಾವಿಸುತಲಿ
ಅಸಮ ಸಂತಸದಿಂದೆ ವರದಿನಂಪ್ರತಿಯಲ್ಲಿ
ಮೊಸರು ಶಾಲ್ಯೋದನ ಪದಂಕುಶ ಪಲಾಂಡುಗಳ
ಮಿಸುಪ ಬುತ್ತಿಯ ಕಟ್ಟಿಕೊಡುತಿರಲು ಬಳಿಕೊಂದು ವಾಸರದಿ ತದ್ಬಾಲನು ೨೦

ತುರುಗಳಂ ಕಾವುತ್ತ ಪೇರಡವಿಯೊಳು ಬಿಡದೆ
ವರ ಬಾಲ ತೃಣವೆಲ್ಲಿ ಬೆಳೆದಿರ್ದ ತಾಣದೊಳ್
ನೆರೆನಿಂದು ಮೇಸುತ್ತ ತಿಳಿನೀರಗುಡಿಸುತ್ತಮಿರದೆ ಬುತ್ತಿಯನುಣ್ಣಲು
ಹರುಷದಿಂ ಶ್ರೀಶೈಲವರ ಮಲ್ಲಿಕಾರ್ಜುನಃ
ಧರೆಯೊಳೀತನ ಮಹಿಮೆ ಮೆರೆಯಬೇಕೆಂದೆನುತ
ಪರಮ ಜಂಗಮರೂಪದಿಂ ಬಂದು ಬಳಿಯಲ್ಲಿ ನಿಂದು ಮಾತಾಡಿಸಿದನು ೨೧

ಮಂದಹಸಿತಾಸ್ಯದಿಂ ಮೆಲ್ಲಗೆಯು ಮಾತಾಡಿ
ಕಂದನೇ ಪಸಿವಡಸಿ ಬಳಲಿ ಬಾಯಾರುತ್ತ
ಮುಂದುಗೆಟ್ಟಿರ್ದ ಮುದಿಜಂಗಮನಲಾ ನಾನು ಪೇರಡವಿಯೊಳ್ ನಿನ್ನನು
ಇಂದು ಪುಡುಕುತ್ತ ನೆರೆ ಬಂದೆನೀ ಕ್ಷಣದಲ್ಲಿ
ಸಂದೇಹಮಿಲ್ಲದಕೆ ಕಟ್ಟೋಗರದ ಬುತ್ತಿ
ಚೆಂದದಿಂ ನೀಡಿ ತಣಿಸೆಂದೆಂಬ ನುಡಿಗಾಗ ಮನ ಮೆಚ್ಚಿ ನಮಿಸುತ್ತಲಿ ೨೨

ಎಲೆ ದೇವ ನೀನುಂಡು ಮಿಕ್ಕುದೆನಗಿರಲೆಂದು
ನಲಿದು ಕಟ್ಟೋಗರವ ತಾನುಂಬುದನು ಬಿಟ್ಟು
ಒಲಿದರ್ಕಪತ್ರದೊಳಗೆಡೆಮಾಡಲಾಕ್ಷಣದಿ ಮನವೊಲಿದು ಮಾಯಾತ್ಮಕಂ
ಬಲು ತುತ್ತುಗಳ ಮಾಡಿ ಭೋಜನಂ ಗೈಯುತ್ತ
ಜಲಜಾಕ್ಷ ವಿಧಿ ಶಕ್ರ ಮೊದಲಾದ ನಿರ್ಜರಾ
ವಳಿಗಿಂದು ದುರ್ಲಭವಲಾ ಮಗನೆ ಹುಳಿಬುತ್ತಿಯಿಂದಾನು ನೆರೆ ಬದುಕಿದೆಂ ೨೩

ಎಂದು ಸವಿದುಂಡು ಪರಸುತ್ತ ಮಾಯಾತ್ಮಕಂ
ಇಂದುಮೊದಲಾಗಿ ಘೋರಾರಣ್ಯದೊಳಗಿರ್ಪ
ಚೆಂದದಿಂ ತುರುಗಳಂ ಪಾಲಿಪೆನು ನಿನ್ನೊಡನೆ ಸಂದೇಹಮಿನಿತಿಲ್ಲವು
ಕುಂದದಿದರಂತೆ ಕಟ್ಟೋಗರವನಾರತಂ
ತಂದುಕೊಟ್ಟುಣಿಸಿದರೆ ಬದುಕುವೆಂ ಭೂತಳದಿ
ಮುಂದುಗೆಟ್ಟಿರ್ದಸಮ ಮುಪ್ಪಿನಾಯಕನಲ್ಲಿ ದಯವಿರ್ಪುದೆಲೆ ಬಾಲನೆ ೨೪

ಎಂಬ ನುಡಿಗೇಳುತ್ತ ಸಿದ್ಧರಾಮೇಶ್ವರಂ
ಹಂಬಲಿಸಿ ಮನದೊಳಗೆ ಘನಮುಗ್ಧಭಕ್ತಿಯಿಂ
ನಂಬಿ ನಮಿಸುತ್ತ ಮನ್ನಾಥ ನೀನೆಲ್ಲಿರ್ಪೆ ಪೆಸರೇನು ಪೇಳೆಂದನು
ಅಂಬಿಕಾಪತಿ ಮಂದಹಾಸ್ಯದಿಂ ನೋಡುತ್ತ
ಮುಂಬರಿದು ಮೈದಡವುತೆಲೆ ತರಳ ಲಾಲಿಪುದು
ಕುಂಭಿನಿಯು ಮಧ್ಯದೊಳ್ ಮೆರೆವ ಶ್ರೀ ಗಿರಿವಾಸ ಮಲ್ಲಿಕಾರ್ಜುನನೆಂಬರು ೨೫

ಅಲ್ಲಿರ್ದರೇನಾಯ್ತು ನೀನುಣಿಸಿದೋಗರಂ
ಎಳ್ಳನಿತುಮಿಷ್ಟ ಗಡ ಬಯಸಿದರೆ ಸಂತತಂ
ಒಲ್ಲೆನಾ ತಾಣಮಂ ಇಲ್ಲಿರ್ಪೆ ನಿನ್ನೊಡನೆ ಗೋಕುಲವ ಪಾಲಿಸುತಲಿ
ಸುಳ್ಳನಾಡುವನಲ್ಲ ಶ್ರೀಶೈಲವಾಸ ಮುದಿ
ಮಲ್ಲಯ್ಯನೆಲೆ ಮಗನೆ ನಂಬೆಂದು ಮೈದಡವಿ
ಘುಲ್ಲೈಸಲಾಕ್ಷಣದಿ ಮನಮೆಚ್ಚಿ ಎನ್ನೊಡನೆ ಮಾತಾಡಿದಗಜಾತೆಯೆ ೨೬

ಮುಪ್ಪಿನಯ್ಯನೆ ನಿಮ್ಮ ಮೃದುನುಡಿಯು ಷುನ್ಮನಕೆ
ಒಪ್ಪಾಯ್ತು ಗಡ ಬಳಿಕ ಮುನ್ನಿನಿಂ ಮಿಗಿಲಾಗಿ
ತರ್ಪೆ ಕಟ್ಟೋಗರದ ಬುತ್ತಿಯಂ ಸವಿದುಂಡು ಬದುಕಿದರೆ ಸಾಕಿಳೆಯೊಳು
ತಪ್ಪದಿಂ ವಿಪಿನದೊಳ್ ಬಪ್ಪ ಪರಿಯಂತರಂ
ಇಪ್ಪುದೆಂದೆನುತ ಮಂದಿರಕೆ ತೆರಳಲ್ ಬಾಲ
ಕಪ್ಪುಗೊರಳನು ಬಾಲ ಸಿದ್ಧರಾಮನ ಲೀಲೆ ಮೆರೆಯಬೇಕೆಂದೆನುತಲಿ ೨೭

ಮನದೊಳಗೆ ನಿಶ್ಚಯಿಸಿ ವರ ಮಲ್ಲಿಕಾರ್ಜುನಂ
ಮಿನುಪ ಶ್ರೀಗಿರಿಯತ್ತ ಪೋಗಲ್ಕೆ ಸಿದ್ಧೇಶ
ಜನನಿ ಬಳಿಯಲಿ ಬಂದು ಮುನ್ನಿನಿಂ ಮಿಗಿಲಾಗಿ ಕಟ್ಟೋಗರವನೀಕ್ಷಣಂ
ತನಗೆ ಪಾಲಿಪುದೆಂಬ ನುಡಿಗೇಳಿ ಸುಗ್ಗಲೆಯು
ತನುಜಾತನಾಸ್ಯಾಬ್ಜವಂ ನೋಡಿ ಹಿಗ್ಗುತ್ತ
ವಿನಯದಿಂ ಷಡ್ರಸಪದಾರ್ಥಗಳನನುದೊಳಿಸಿ ಬುತ್ತಿಯಂ ಕೊಡಲಾಗಳು ೨೮

ಹರುಷದಿಂ ಸಿದ್ಧಪತಿ ತಿರುಗುತ್ತ ಬಂದಾಗ
ವರ ವಿಪಿನಮಧ್ಯದೊಳ್ ಚರಿಸುತ್ತಲೆಡಬಲದಿ
ಪರಮ ಶ್ರೀಗಿರಿವಾಸ ಗುರು ಮಲ್ಲಿನಾಥಯ್ಯ ಧ್ವನಿದೋರು ಎಲ್ಲಿರ್ದಪೆ
ಪೊರಲಾರೆ ಬುತ್ತಿಯಂ ಘನಭಾರಮಾಗಿಹುದು
ಕರುಣಿಗಳ ಮಾತಲ್ಲ ನೆರೆನಂಬಿಸೆನ್ನನೀ
ಪರಿ ಮಾಳ್ಪರೇ ಅಕಟ ಧರ್ಮಿಗಳ ನೀತಿಯಲ್ಲಿದು ವೃದ್ಧಜಂಗಮಾರ್ಯ ೨೯

ಕಟ್ಟೋಗರವನೆನಗೆ ಮಾತೆ ಕಟ್ಟಿರ್ದಪಳು
ತಟ್ಟನೇ ದನಿದೋರು ಮುದಿಮಲ್ಲಿನಾಥಯ್ಯ
ಬಟ್ಟೆದಪ್ಪಿ[೧]ದೆ ನೀಗ[೧] ಬಲ್ಲವರು ಯಾರಿಲ್ಲ ಕಟ್ಟಣಕಮೇನೆನ್ನೊಳು
ಬಟ್ಟಬಯಲಾದೆ ಗಡ ನಟ್ಟಡವಿಯೊಳಗೆಂದು
ಮಿಟ್ಟನೇ ಮಿಡುಕುತ್ತ ಪುಡುಕಲಾ ಕ್ಷಣದಲ್ಲಿ
ಚಿಟ್ಟನೇ ಚೀರಿ ಬೆದಕುತ್ತಿರ್ದನಾ ಫಾಲಚಂದ್ರನಂ ಭರದೊಳಾಗ ೩೦

---

೧ ದ ಎನಗೆ (ಕ.)

ಗೋಕುಲವ ಪಾಲಿಸುವೆನೆಂದು ನಂಬಿಸಿಯೆನ್ನ
ನೀ ಕಳಿಸಿಕೊಡಲೀಗ ಕಟ್ಟೋಗರವ ತಂದೆ
ಸಾಕಾಗುವಂತೀಗ ತಣಿಸುವೆನು ಮಲ್ಲಯ್ಯ ಮೊಗದೋರು ಕಾನನದೊಳು
ಬೇಕಾದ ಶಾಕಪಾಕಾದಿಗಳ ಮನ್ಮಾತೆ
ತಾ ಕಟ್ಟಿಕೊಟ್ಟಿಹಳು ಪುಸಿಯಲ್ಲಲಾ ಎನುತ
ಲಾ ಕುವರ ಸಿದ್ಧಪತಿ ಬಳಲಿ ಬಾಯಾರಿ ಚೀರುತ್ತಿರ್ದನೇನೆಂಬೆನು ೩೧

ಅನಿತರೊಳು ಶ್ರೀಶೈಲ ಗುರುಮಲ್ಲಿಕಾರ್ಜುನನ
ಘನಯಾತ್ರೆಗೆಂದೆನುತ ಸಕಲ ದೇಶಡ ಭಕ್ತ
ಜನರೆಯ್ದುತಿರೆ ನೋಡುತಿಂತೆಂದನವರಿಂಗೆ ಮುದಿಮಲ್ಲಿನಾಥಯ್ಯನಂ
ವನಮಧ್ಯದೊಳಗೆಲ್ಲ ಕಂಡಿರಾ ಎಂದೆಂಬ
ವಿನಯೋಕ್ತಿಗಳ ಕೇಳ್ದು ಮುಗ್ಧಬಾಲಕನೆಂದು
ಮನದೊಳಗೆ ತಿಳಿದು ಮರುಗುತ್ತವನ ಮೊಗನೋದಿ ಪೇಳ್ದರಾ ವರ ಭಕ್ತರು ೩೨

ನಿನಗೆ ಶ್ರೀಗಿರಿಮಲ್ಲಿನಾಥನಂ ತೋರ್ಪೆವಾ
ವೆನಲು ಬೆಂಬಳಿವಿಡಿದು ನಡೆದಿತ್ತ ಮುಗ್ಧಪತಿ
ದಿನಪನಸ್ತಮಿಪ ಕಾಲದಿ ಮನೆಗೆ ತುರುವಿಂಡು ಎಡೆವಿಡದೆ ಬರಲಾಕ್ಷಣಂ
ತನುಜಾತನಾಗಮನ ಕಾಣದೆಯೆ ಕಾದಲರ್
ಮನದೊಳಗೆ ಮರುಗುತ್ತ ಚಿಂತಿಸುತಲಿರ್ದರೆಲೆ
ವನಜಮುಖಿ ಕೇಳೆಂದು ಶಂಕರಂ ಸಂತಸದಿ ಗಿರಿಜಾತೆಯೊಳ್ ಪೇಳ್ದನು ೩೩

ಚಿತ್ತಜಾರಿಯ ಭಕ್ತರೊತ್ತಿಡಿದು ಸಿದ್ಧಪತಿ
ನೆತ್ತಿಯೊಳು ಬುತ್ತಿಯನು ಪೊತ್ತುಕೊಂಡಾಕ್ಷಣಂ
ಉತ್ತಮೋತ್ತಮನೆನಿಪ ಶ್ರೀಶೈಲಪತಿ ಪರಮ ಮುದಿಮಲ್ಲಿನಾಥಯ್ಯನೇ
ಗೊತ್ತು ಎಲ್ಲಿರ್ದಪುದೊ ಪೊತ್ತಾಯ್ತು ಪಸಿದಿರ್ಪೆ
ಮತ್ತೆನಗೆ ತೋರೆಂದು ಮಿಡುಕುತ್ತ ಮನದೊಳಗೆ
ಬಿತ್ತರದ ಬೆಟ್ಟದೊಳಗತ್ತಿತ್ತ ನೋಡುತ್ತ ಬರುತಿರ್ದನಾ ಮಾರ್ಗದಿ ೩೪

ಮೀಸಲದ ಬುತ್ತಿಯಿದು ಶ್ರೀಗಿರಿಯ ವಾಸಂಗೆ
ಗಾಸಿಯಾಗುವದೆಂದು ಓಸರಿಸದಡಿಯಿಡುತ
ಆಸೆಯಿಂ ತಾ ಉಣದಹರ್ನಿಶೆಯೊಳುಂ ಒಸೆದು ಬರುತಿರ್ದನಾ ಗಿರಿಯೊಳು
ವಾಸರಸ್ಪತಿಕೋಟಿ ಕಾಂತಿಯುಂ ಧಿಕ್ಕರಿಪ
ಈಶನಾಲಯ ತೋರಲಾಕ್ಷಣದಿ ಸದ್ಭಕ್ತ
ರಾತುರದಿ ಒಳಪೊಕ್ಕು ಮುಗ್ಧಬಾಲಿಕ ಕರೆದು ಮುದಿಮಲ್ಲಿನಾಥಯ್ಯನಂ ೨೫

ನೋಡೆಂದು ತೋರಿಸಲ್ ಚಿತ್ತದೊಳು ನೋಡುತ್ತ
ಕಾಡಿನೊಳು ಬಂದೆನ್ನ ಬೇಡಿ ಬುತ್ತಿಯನುಂಡ
ನಾಡೊಡೆಯನಲ್ಲೆಂದು ಬಾಡುತ್ತ ಮನದೊಳಗೆ ಮರುಗಿ ಕಂಬನಿದುಂಬುತ
ಆಡಲೇನಕಟ ಜನದೊಳಗೆ ಎನ್ನನ್ನು ನಗೆ
ಗೇಡು ಮಾಡಿದನಲಾ ಮುದಿಮಲ್ಲಿನಾಥಯ್ಯ
ಗಾಡದಿಂ ನಡೆಗೊಂಡು ಬಂದುದಕೆ ಫಲವಾಗಲಿಲ್ಲ ಗಡ ಭೂತಳದೊಳು ೨೬

ಎಂದು ಶೋಕಾಬ್ಧಿಯೊಳು ಸಂದು ಸಮ್ಮುಖದಲ್ಲಿ
ನಿಂದ ಶ್ರೀ ಸಿದ್ಧಪತಿ ಮಹಿಮೆಯನು ಲೋಕದೊಳು
ಬಂಧುರದಿ ಪ್ರಕಟಿಸುವ ಕಾರಣದಿ ಶ್ರೀಶೈಲ ಭ್ರಮರಾಂಬಿಕಾನಾಧನು
ಮುಂದುವರಿದಾಕ್ಷಣಂ ನಿಜರೂಪದೋರಲ್ಕೆ
ಚೆಂದದಿಂ ನೋಡುತ್ತೆ ರೂಪಮಲ್ಲೆಂದೆನಲು
ಕಂದುಗೊರಳನು ಬಳಿಕ ಮಂದಸ್ಮಿತಾನನದಿ ಮುನ್ನಿನಂಗವ ತೋರ್ದನು ೨೭

ಮಲ್ಲಯ್ಯನಿವನೆ ನಿಜವೆಂದು ನಮಿಸುತ್ತ ಕರ
ಪಲ್ಲವಂ ಮುಗಿದು ಕೊಂಡಾಡಿ ಶ್ರೀ ಗಿರಿವಾಸ
ಸಲ್ಲಲಿತ ಕಟ್ಟೋಗರವನುಂಡು ಎನ್ನೊಡನೆ ಸೊನ್ನಲಾಪುರದತ್ತಲು
ನಿಲ್ಲದಲೆ ನಡೆಯೆನಲು ನಸುನಗುತ ಶಂಕರಂ
ಭುಲ್ಲವಿಸಿ ಸಿದ್ಧಪತಿ ನಿನ್ನಸಮ ಭಕ್ತಿಯಂ
ಎಲ್ಲರಿಗೆ ತೋರಲೋಸುಗವಾಗಿ ಭೂತಳದಿ ನಿನ್ನ ಕಾಡಿದೆನೆಂದನು ೨೮

ಸಂದೇಹವಿಲ್ಲೆಂದು ಸರ್ವಜನ ನೋಳ್ಪಂತೆ
ಇಂದುಧರ ಸಿದ್ಧೇಶ ತಂದ ಬುತ್ತಿಯನಾಗ
ಚೆಂದದಿಂ ಸವಿದು ಬಳಿಕುಳಿದ ಪ್ರಸಾದವನು ಕೊಟ್ಟು ತಣಿಸುತ್ತಾಕ್ಷಣಂ
ಇಂದುಮೊದಲಾಗಿ ನೀನಿರ್ಪಸವು ಠಾಣಕ್ಕೆ
ಬಂದಪೆನು ನಡೆಯೆನಲು ಮಂದ್ಯಪ ಭಕ್ತಿಯಿಂ
ಮುಂದುವರಿದಾಗಿರಿಯ ಲಿಂಗ ನದಿಗಳನೆಲ್ಲ ಕೊಂಡೊಯ್ದನೆಲೆ ಗಿರಿಜೆಯೇ ೩೯

ಸಿದ್ಧಪತಿ ಬಳಿವಿಡಿದು ಲಿಂಗನದಿಗಳನೆಲ್ಲ
ಶುದ್ಧವಾಗಿಯೆ ಕೊಂಡು ಶ್ರೀಶೈಲಮಂ ಬಿಟ್ಟು
ಎದ್ದು ಶ್ರೀ ಸೊನ್ನಲಾ ಪುರದತ್ತ ಬರಲೆನ್ನ ಸ್ಥಾಪನಂ ಗೈಸುತ್ತಲೀ
ಸಿದ್ಧಮಲ್ಲಯ್ಯನೆಂಬಾಖ್ಯದಿಂ ಲೋಕಪ್ರ
ಸಿದ್ಧವಾಗಿಯೆ ಕರೆದು ತನ್ನ ಪಡೆದಿರ್ದಸವು
ಮುದ್ದುಗೌಡನು ಪರಮ ಸುಗ್ಗಲಾಂಬೆಯರಿಂಗೆ ಮುದಗರೆದನಾ ಮಹಿಮನು ೪೦

ಸೊಲ್ಲಪಳ್ಳೆಂಬ ಪೆಸರಂ ಬಿಡಿಸಿ ಭೂತಳದಿ
ಎಲ್ಲರರಿವಂತೆ ಶ್ರೀ ಸೊನ್ನಲಾಪುರಮೆನಿಸಿ
ಅಲ್ಲಲ್ಲಿ ಲಿಂಗ ನದಿ ಜಾಲಗಳ ನೆಲೆಗೊಳಿಸಿ ಭಕ್ತಿಪೂರ್ವಕದಿಂದಲಿ
ಅಲ್ಲಲ್ಲಿ ಮಠ ಶಿವಾಲಯಗಳಂ ನಿರ್ಮಿಸುತ
ಅಲ್ಲಲ್ಲಿ ಕೆರೆ ಬಾವಿಗಳ ಮಾಡಿ ಸಂತತಂ
ಸಲ್ಲಲಿತ ಕೈಲಾಸಮೆಂದೆನಿಸಿ ಸಿದ್ಧೇಶ್ವರಂ ಮೆರೆದನೇನೆಂಬೆನು ೪೧

ಪರಮ ಕಥೆಯನು ಕೇಳ್ದು ಬಲ್ಲವೀ ಧಾತ್ರಿಯೊಳ್
ಪರಮಾತ್ಮ ಮಹಲಿಂಗನದರಂತೆ ಜಗದೊಳಗೆ
ನರಗಟ್ಟಿಯೆಂಬ ಪೆಸರಂ ಬಿಡಿಸಿ ಚೆನ್ನಗಿರಿಮಹಲಿಂಗಪುರವೆಂಬುವ
ವರನಾಮಧೇಯದಿಂ ಕರೆಸುತ್ತ ಸಂತತಂ
ಸ್ಥಿರಮಹಿಮೆಗಳ ಬೀರಿ ತತ್ಪುರವ ನಾಕ್ಷಣಂ
ಧರೆಗೆ ಕೈಲಾಸಮೆನಿಸಿದರೆಂದು ಭಕ್ತಜನ ಕೊಂಡಾಡುತಿಂತೆಂದರು ೪೨

ಅಂತಲ್ಲದಲಿ ಬಳಿಕ ಪೂರ್ವದೊಳು ಮತ್ತೊರ್ವ
ಭ್ರಾಂತಹರ ಮುಗ್ಧಸಂಗಮನೆಂಬ ಗಣನಾಥ
ಸಂತಸದಿ ಭೂತಳದೊಳವತರಿಸಿ ಮಹಿಮೆಗಳ ತೋರುತ್ತವೊಂದಿನದೊಳು
ಕಂತುಹರ ಪೂಜೆಯಂ ಮಾಡುತ್ತಪಶುಗಳಂ
ಕಾಂತಾರದೊಳಗೆ ಕಾಯುತ್ತ ಮುಪ್ಪುರ ಪಳ್ಳಿ
ಮುಂತಿರುವ ಸಮಯದೊಳು ಸಂಭ್ರಮದಿ ಶ್ರೀಗಿರಿಗೆ ಪೋಪ ಪರಸಿಯು
ಬಂದುದು　೪೨

ಬಂದ ಬರವಂ ನೋಡಿ ಮುಗ್ಧ ಸಂಗಮನಾಥ
ನಿಂದುಧರಪೂಜೆಯಂ ತೀರ್ಚಿ ತದ್ಭಕ್ತರನು
ಚೆಂದದಿಂ ಬೆಸಗೊಂಡದೆಲ್ಲಿಂಗೆ ಪೋಪಿರಿನೆ ಶ್ರೀಗಿರಿಯ ಮಲ್ಲಯ್ಯನ
ಸಂದ ಯಾತ್ರಾಗಮನವೆಂದೆನಲು ಕೇಳಿ ನಾ
ನಿಂದು ಪೋಗುವೆನೆಂದು ನಡೆದನೆಲೆ ಗಿರಿಜಾತೆ
ಒಂದುದಿನದೊಳುಬಂದನರುವತ್ತು ಗಾವುದವನೇನೆಂದು ಬಣ್ಣಿಸುವೆನು　೪೪

ಭರದಿಂದೆ ಶ್ರೀಗಿರಿಗೆ ಬಂದು ಭ್ರಮರಾಂಬಿಕಾ
ವರನ ಕೃಪೆಯಿಂ ಪಡೆವುತಲ್ಲಿರ್ಪ ಲಿಂಗಗಳ
ಪರಿವ ಪಾತಾಳಾದಿ ಲಿಂಗನದಿಗಳು ಬಿಡದೆ ಬರಲು ಪರಿವಿಡಿಯಿಂದಲಿ
ಹರುಷದಿಂದಾ ನಗದ ಗುರುತುಗಳ ನೆರೆಕೊಂಡು
ತರಣಿಯುದಿಸದ ಮುನ್ನ ತಿರುಗಿ ಮರುದಿನ ಬರಲು
ಪರಸಿ ಜನರೆಲ್ಲ ನೋಡುತ್ತಲಚ್ಚರಿಡಳೆಯೆ ಮುಗ್ಧಸಂಗಮನಾಥನು　೪೫

ಅಲ್ಲಿಂದ ತಂದಂಥ ಲಿಂಗನದಿಗಳನೆಲ್ಲ
ಅಲ್ಲಲ್ಲಿ ನೆಲೆಗೊಳಿಸಿ ಸರ್ವಜನರರಿವಂತೆ
ಅಲ್ಲಲ್ಲಿ ಗುಡಿಗೋಪುರಂಗಳಂ ನಿರ್ಮಿಸುತ [1]ಭವ್ಯಾರ್ಗೃ[1]ದ್ಗ್ರಹಂಗಳನ್ನು
ಅಲ್ಲಲ್ಲಿ ರಚಿಸುತ್ತ ಕೂಪ ಪದ್ಮಾಕರಗ
ಳಲ್ಲಲ್ಲಿ ನೆಲೆಗೊಳಿಸಿ ಪರಮ ಸಂತಸದಿಂದೆ
ಸಲ್ಲಲಿತ ಉಪ್ಪುರಕಟ್ಟೆಯ ಪೆಸರನಳಿವುತ್ತ ಕೈಲಾಸಮೆನಿಸಿರ್ದನು　೪೬

---

೧ ಭೂಮ್ಯಾ (ಕ.)

ಧರೆಗೆ ಶ್ರೀಕೈಲಾಸಮುಪ್ಪುರಾದ್ರಿಯುಮೆಂದು
ನಿರುತ ನಾಮವನಿಟ್ಟು ಮೆರೆದಿರ್ದನೇನೆಂಬೆ
ಪರಮ ಕಥೆಯನು ಕೇಳ್ದು ಬಲ್ಲಿವೀ ಜಗದೊಳಗೆ ನಿರಘ ಮಹಲಿಂಗಾಖ್ಯನು
ಪರಮನಾಣತಿಯಿಂದೆ ಅದರಂತಲೀ ಪುರವ
ತ್ವರಿತದಿಂ ನಿರ್ಮಿಸುತ ಮೆರೆದನೆಂದೆನುತಾಗ
ಹರುಷದಿಂ ಸರ್ವಜನ ಕೀರ್ತಿಸುತ್ತಿರ್ದರೆಲೆ ಗಿರಿಜಾತೆ ಕೇಳೆಂದನು ೪೭

ಮತ್ತಮಂತಲ್ಲದಲಿ ಲದ್ದಿಸೋಮನುಯೆಂಬ
ಉತ್ತಮೋತ್ತಮ ಭಕ್ತನಸಮನಿಷ್ಠೆಯನಿಳೆಗೆ
ಬಿತ್ತರದಿ ತೋರಲೋಸುಗವಾಗಿ ಶಿವಗೊಂದು ಪುರವ ರಚಿಸಿದನೆಂಬುವ
ವೃತ್ತಿಯಿಂ ಕೇಳ್ದು ಬಲ್ಲಿವು ಬಳಿಕ ಭೂತಳದಿ
ಚಿತ್ರಜಾರಿಯರೂಪ ಮಹಲಿಂಗನದರಂತೆ
ಸತ್ಯಶರಣಾವಳಿಯ ಪೊರೆವ ಕಾರಣದಿಂದೆ ನಿರ್ಮಿಸಿದನೀ ಪುರವನು ೪೮

ಎಂದು ಪಲವಂದದಿಂ ಸುಜನಾಳಿ ಕೀರ್ತಿಸಲು
ಸಂದ ಪರಮಾನಂದಮಯರೂಪ ಮಹಲಿಂಗ
ಸಂದು ಶಾಸ್ತ್ರಾಗಮಸುಪೌರಾಣ ಪರಮಾರ್ಥಗೋಷ್ಠಿಯಿಂ ಸುಖಿಮಿರ್ದನು
ಇಂದು ಬಣ್ಣಿಪರಾರು ತನ್ಮಹಿಮಸನ್ನಿಧಿಯ
ಇಂದುಮುಖಿ ಗಿರಿಜಾತೆ ಕೇಳೆಂದು ಕೈಲಾಸ
ಮಂದಿರದಿ ನಂದ್ಯಾದಿ ಪ್ರಮಥರಾಲಿಸುವಂತೆ ಪರಮಾತ್ಮ ಸೂಚಿಸಿದನು ೪೯

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದೆ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿರ್ಪರು ೫೦

**ಅಂತು ಸಂಧಿ ೧೦ ಕ್ಕಂ ಪದ ೩೭೪ ಕ್ಕಂ**

**ಮಂಗಳಂ**

**ಶ್ರೀ**

ಶ್ರೀ

# ಹನ್ನೊಂದನೆಯ ಸಂಧಿ

ಸೂಚನೆ : ಮಿಸುಪಕೂಪವನಗಿಸಿ ಬಸವತೀರ್ಥವಿದೆಂದು
ಅಸಮನಾಮವನಿಟ್ಟು ಶ್ರೀಚೆನ್ನಗಿರಿಯಲ್ಲಿ
ಅಸಮಾಕ್ಷಸಮರೂಪ ಮಹಲಿಂಗ ಜಂಗಮಂ ಮೆರೆದಿರ್ದನೆಲ್ಲಾಗಳು

ಶ್ರೀಗಿರಿಸುತಾಲಪನಪಂಕೇಜದಿನನಾಥ
ಭೋಗಿಶಯನಾರ್ಚಿತಪದಾಂಭೋಜ ಮುನಿಸಾರ
ಯೋಗಿಜನಮಾನಸಾಂಬುಜಸೂರ್ಯ ಗುಣಹಾರ ಶ್ರೀವ್ಯೋಮಗಂಗಾಧರ
ನಾಗದೈತ್ಯಮದಾಂಬುದಾಳಿತೀವ್ರಸಮೀರ
ಭೂಗಗನದಿಗ್ಭರಿತಕೀರ್ತಿಶಾಸ್ತ್ರವಿಚಾರ
ರಾಗದಿಂ ಪಾಲಿಪುದು ಸೋಲೂರ ವರ ಚೆನ್ನವೀರೇಂದ್ರ ಮೂಜಗವನು ೧

ಹೈಮವತಿ ಲಾಲಿಪ್ಪುದು ಮಹಲಿಂಗ ಜಂಗಮದ
ರಾಮಣೀಯಕ ಮಹಿಮೆಯಂ ಭಕ್ತಿಪೂರ್ವಕದಿ
ಭೂಮಿಯೊಳಗಖಿಳ ಸದ್ಭಕ್ತರನು ಪಾಲಿಸುತ ಶ್ರೀಚೆನ್ನಗಿರಿ ಮಧ್ಯದಿ
ಪ್ರೇಮದಿಂ ಪರಮಾನುಭವಗೋಷ್ಠಿಯಿಂದಲಭಿ
ರಾಮವೆತ್ತಿರ್ದು ಬಳಿಕೊಂದು ದಿನ ಸರ್ವಜನ
ಸ್ತೋಮಹಿತಕರವಾಗಲೋಸುಗದಿ ಕೂಪಮಂ ನಿರ್ಮಿಸಲು ನಿಶ್ಚಯಿಸಿದಂ ೨

ಚೆನ್ನಗಿರಿ ಪಶ್ಚಿಮದಿಶಾಭಾಗಭೂಮಿಯೊಳ್
ನನ್ನಿಯಿಂ ಬಾವಿಯಂ ತೆಗೆಯಲೋಸುಗದಿಂದೆ
ಮನ್ನಣೆಯ ಭಕ್ತಜನಕರುಹಿ ದಾನಾಖ್ಯನಂ ಕರೆದು ನೇಮಿಸಲಾಗಳು
ಧನ್ಯನಾದೆನು ದೇವ ನಿಮ್ಮಡಿಯ ಘನಸೇವೆ
ಗಿನ್ನು ವಂಚಿಪೆನಲ್ಲವೆಂದೆನುತ ನಮಿಸಿ ಕರ
ವನ್ನು ಮುಗಿದಾಕ್ಷಣದಿ ಭಕ್ತಿಪೂರ್ವಕದಿಂದೆ ಪಡೆಗೊಂಡನಾ ತಾಣಕೆ ೩

ನೆಟ್ಟನಾ ತಾಣಕಂ ಸರ್ವಜನರೊಡಗೊಂಡು
ಕಟ್ಟೋಜೆಯಿಂ ಬಂದು ಮಹಲಿಂಗ ಪೇಳ್ದಂತೆ
ತಟ್ಟನೇ ಕುದ್ದಾಲಮೊಲೆಗೋಲುಗಳ ಕೊಂಡು ದಾನಯ್ಯನಾಕ್ಷಣದೊಳು
ಕಟ್ಟಳವಿಯೊಳಗಗಿದು ನೋಡುತಿರಲಲ್ಲೊಂದು
ಬಟ್ಟ ಕರಿದಾದ ಪಡೆ ದಿಟ್ಟಗಸದಳವಾಗಿ
ಗಟ್ಟಿಗೊಂಡಿರೆ ಕಂಡು ಮಿಟ್ಟನೇ ಮಿಡುಕಿದರು ಬೆಟ್ಟಣುಗಿ ಕೇಳೆಂದನು ೪

ಮಡ್ಡಾಯ್ತು ಜಗದೊಳಗೆ ಕಿತ್ತಡಿಯ ಪುಣ್ಯಕ್ಕೆ
ಅಡ್ಡಾಯ್ತಲಾ ಎಂದು ಮನದೊಳಗೆ ಮಿಡುಕುತ್ತ
ಗುಡ್ಡರುಗಳಂ ಕರೆಸಿ ಹಡ್ಡಿಸಲು ಹಾರಿಗಳು ಬಡ್ಡಾಗಿ ನೆರೆಮುರಿಯಲು
ದೊಡ್ಡ ಪಡೆ ಜಡ್ಡಾಗಿ ಕಟ್ಟಾಳುಗಳ ದಣಿಸಿ
ಕಡ್ಡಮಾಡಿತ್ತಕಟ ಒಡ್ಡರನು ಗಳಿಗೆಯೊಳು
ಗುಡ್ಡಣುಗಿ ಕೇಳೆಂದು ಎಡ್ಡಮಾಗಲು ಪೇಳ್ದ ಪೆರೆಹಲೆಯನಾಕ್ಷಣದೊಳು ೫

ಗಣಗಳಿಂ ಹಣಿವುತಿರೆ ಫಣಿಮುರಿದು ನೆಲಕುರುಳೆ
ಫಣಿಪತಿಯ ತಲೆ ಮಣಿದು ದಣಿವ ತೆರನಾಗುತಿರೆ
ಖಣಿನಡುವೆ ಕುಣಿಗಳಂ ತೆಗೆಯಲ್ಕೆ ಕಬ್ಬಿಣದ ಮಣಿಹಾರಿಗಳನಣಿವುತಂ
ಕಣಕಣದ ದನಿಯಿಂದ ಕಡಿಯುತಿರಲಾಕ್ಷಣದಿ
ಒಣಗಿ ಧರೆಯಣು ಮಾತ್ರ ಚೂರ್ಣಿಸದೆ ಒಡ್ಡರಿಗೆ
ಹಣಿಯದಿರೆ ಕಂಡು ಕಡು ಭೀತಿಯಿಂ ದಾನಾಖ್ಯ ಬಂದು ಮಹಿಮನ ಬಳಿಯೊಳು ೬

ನಿಂದು ಕರದ್ವಂದ್ವಗಳ ಮುಗಿದು ನಮಿಸುತ್ತಾಗ
ಇಂದುಧರಸಮರೂಪ ಇಹಲೋಕ ಸಂಪೂಜ್ಯ
ಕುಂದಹರಿಚಂದನಾಮೃತಸಿಂಧುಮಂದಾರಸಮುಮಂದಹಸಿತಾನನ
ಸಂದ ಪರಮಾನಂದಮಯಲೋಲ ಮಹಲಿಂಗ
ಚೆಂದದಿಂದೆನ್ನ ವಿಜ್ಞಾಪನವ ಚಿತ್ತೈಪು
ದೆಂದಸಮ ಭಯಭಕ್ತಿಯಿಂ ಬಿಡದೆ ಮುಂಬರಿದು ಸೂಚಿಸಿದನಗಜಾತೆಯ ೭

ಚಿತ್ರಜಾರಿಯ ರೂಪ ಚಿತ್ತೈಸು ಬಾವಿಯೊಳ
ಗೆತ್ತ ನೋಡಿದಡತ್ತ ಸುತ್ತಿಡಿದುಕೊಂಡಿಹುದು
ಬಿತ್ತರದ ಪಡೆಯೊಂದು ಪತ್ತಿಹುದು ಗಟ್ಟಿ ಕೇಳ್ ಮತ್ತೇನುಪಾಯದಲ್ಲಿ
ಮುಕ್ತಿ ಶತಸಾವಿರ ಜನಾದಿಗಳು ಸುತ್ತಿಡಿದು
ಒತ್ತಿದರೆ ಸೊನ್ನಿಂಗೆ ಹತ್ತದಲೆ ಹಾರಿಗಳ
ಸುತ್ತರಿಸುವದು ಛಾಣದಿಂದೆತ್ತಿ ಪೊಡೆಯಲ್ಕೆ ಕತ್ತರಿಸದೆಳ್ಳನಿತವು ೮

ಕರಿಬಂಡಿ ಒಡ್ಡರಿಗೆ ಹರಿಯಲೊಲ್ಲದು ದೇವ
ಧರೆಯೊಳಗೆ ನಾವೆಲ್ಲಿ ಕಂಡರಿಯೆವೆಂದೆನುತ
ನೆರೆದ ಜನರೆಲ್ಲ ಬೆರಗಾಗುತ್ತ ಮನದೊಳಗೆ ಮಹಲಿಂಗ ಮುನಿಚಂದ್ರನ
ವರಮಹಿಮೆಯಂ ಮೆರೆಯಲೋಸುಗದಿ ತೋರಿತ್ತು
ಹರಹರಾ ಎನ್ನುತ್ತ ಕೊಂಡಾಡುತಿಹ ಪರಿಯ
ಹರುಷದಿಂ ನಿಮ್ಮಡಿಗೆ ಒರೆಯಬೇಕೆಂದೆನುತ ನಾ ಬಂದೆನೈ ಮಹಿಮನೆ ೯

ಎಂಬ ನುಡಿಗೇಳುತ್ತ ಮಹಲಿಂಗ ಮನದೊಳಗೆ
ಅಂಬಿಕಾಪತಿ ಲೀಲೆಯಿಂದೆ ತೋರಿತ್ತೆಂದು
ಮುಂಬರಿದು ನಡೆವುತ್ತ ದಾನಾಖ್ಯನೊಡಗೊಂಡು ಪಶ್ಚಿಮದಿಶಾಭಾಗಕೆ
ಬೆಂಬಿಡಿದು ಭಕ್ತಾಳಿ ಬರುತಿರಲು ಪಡಸೋಂಕಿ
ಕುಂಭಿನೀಪತಿ ಪುಳಕಮಂತಳೆದು ನಲಿಯೆ ದ್ವಿತಿ
ಸ್ತಾಂಬನೆಂಬಂತೆ ಕಂಗೊಳಿಪ ಕಾಯದಿ ಬಂದನಾ ಮಹಿಮನೇನೆಂಬೆನು ೧೦

ಕಾಂಚನಲತಾಳಿತಟಿದಂಚಿತಜಟಾಪಟಲ
ಮಿಂಚುತಿಹ ಫಣಿನೇತ್ರಕರದಕ್ಷಮಾಲೆಯಿಂ
ಪಂಚಾಕ್ಷರಿಯ ಮಂತ್ರ ಜಪಿಸುತಿಹ ರಸನೆಯಿಂ ಭಸಿತಲೇಪನ ಕಾಯದಿ
ವಂಚಿತ ಮಹಾಕಾಲಕರ್ಮದುಃಪನಟಣದಿಂ
ಪ್ರಾಂಚಿತ ಸುಕರ್ಣಕುಂಡಲಗಳಿಂ ಕಂಗೊಳಿಸಿ
ಪಂಚಬಾಣಪಹಾರ ಪಾವನಾಂಗ ಮಹೇಶ ಬರುತಿರ್ದನಾಕ್ಷಣದೊಳು ೧೧

ಇಂತು ನಡೆಗೊಂಡು ಬಂದಾಕೂಪದೆಡೆಯಲ್ಲಿ
ನಿಂತು ಕರುಣಾಪಾಂಗದಿಂ ನೋಡಿ ಮಹಲಿಂಗ
ಸಂತಸದಿ ದಾನಾಖ್ಯನಂ ಕರೆದು ಸೂಚಿಸಿದನೇನೆಂಬೆನಗಜಾತೆಯೆ
ಚಿಂತಿಸದಿರಾ ಮನದಿ ಬಸವಾಕ್ಷರತ್ರಯುವ
ನಂತರಂಗದಿ ಸ್ಮರಿಸಿ ಮಹ ಸುರಂಗವನೀಗ
ಮುಂತಿರುವ ಬಂಡೆಯೊಳ್ ಕುಂತು ಕಡಿಯೆಂದೆನಲು ಕರಕಂಜವಂ ಮುಗಿಯುತ ೧೧

ಗಜದಂತನಳಿದೊಡಂ ಗಗನ ಧರೆಗಿಳಿದೊಡಂ
ರಜನೀಶ ತಪ್ತಗುಣ ತಳೆದೊಡಂ ದಿನನಾಥ
ನಿಜಭಾವಮಂ ಬಿಟ್ಟು ತಂಗದಿರನಾಂತೊಡಂ ತಗರ್ದೇರ ತಂಪಾದೊಡಂ
ಸುಜನಸಮ್ಮತ ನಿಮ್ಮ ನುಡಿಬಂಜೆಯುಪ್ಪುದೇ
ವಿಜಯ ಮಹಿಮಾಂಕನೆಂದೆನುತ ಕೂಪವನಿಳಿದು
ಕುಜನರರಿವಂತೆ ಬಸವಾಕ್ಷರಗಳುಚ್ಚರಿಸಿ ಹಾರಿಯನು ಭುಜಶೌರ್ಯದಿಂ ೧೩

ಬಾ ಎಂದು ಜಡೆಯಲುಂ ಭಾಗಾಯ್ತು ತವಕದಿಂ
ಸಾ ಯೆಂದು ಪೊಡೆಯಲ್ಕೆ ಸರಿದಿತ್ತು ಸರಸದಿಂ
ವಾ ಯೆಂದು ಪಣಿಯಲ್ಕೆ ಒಡೆದಿತ್ತು ಪೋಳಾಗಿ ಸಮ್ಮುಖದೊಳೇನೆಂಬೆನು
ಹಾ ಯೆಂದು ಸರ್ವಜನ ನೋಡುತಿರಲಾಕ್ಷಣದಿ
ಹೋಯಿತ್ತೈ ಹಾರಿ ಒಂದಾಳುದ್ದ ಬಂಡೆಯೊಳ್
ತೋಯುಮಿಲ್ಲದ ಬಿಲವಿ ದಾನಯ್ಯ ಮದ್ದುಮಂ ಜಡೆವುತ್ತ ಮುದದಿಂದಲಿ ೧೪

ಪೂರೈಸಿ ಬಿರಿಮುದ್ದುಗಳ ಬಿಲದ ಬಾಯಿಂಗೆ
ಭಾರೈಸಿ ಬಂದೊಡನೆ ನಿಮ್ಮ ನುಡಿಯಂತಾಯ್ತು
ಮಾರಾರಿಯೆಂದೆನುತ ಸೂತ್ರಶಿಖಿಕೊಳವಿಗಳನಾಕ್ಷಣದಿನಾವರಿಸುತ
ವಾರೈಸಿ ಬಿಡಲಾಗ ಭರದಿಂದೆ ಪೋಗುತ್ತ
ನೇರ್ಯೈಸಿ ಒತ್ತಿಪಾರಿತ್ತುದರ್ಭಟದಿಂದೆ
ಜೇರ್ಯೈಸಿ ಪಡಿವೊಡೆದು ಸಿಡಿದು ಬಾನೆಡೆಯಲ್ಲಿ ಜಡಜಾಪ್ತನಿಗೆ ಬಡಿವುತ ೧೫

ಪೆಟ್ಟೈ ಪೂರೈಸೆ ಜಗ ದಿಟ್ಟದಂ[1]ತ[1]ಗಳುದುರಿ
ಬಟ್ಟದೊಡೆ ಮುರಿದು ವರುಣಂ ಪೆಳವನಾದನಾ
ಬಟ್ಟೆಯೊಳಗೆಂಬಂತೆ ಕಂಗೊಳಿಸುತಾ ಭಾವ ನೋಳ್ಪ ಜಾಣರ ಮನಸಿಗೆ
ತಟ್ಟನತ್ತಲ ಪೊಗೆಯು ಬಯಲಾಗಲಿತ್ತಲುಂ
ಕಟ್ಟಳವಿಯೊಳು ಬಂದು ನೋಡುತಿರಲೆಲ್ಲರುಂ
ಒಟ್ಟಯಿಸಿ ಬಾವಿಯೊಳು ಜಲವೇರಿ ಬರುತಿರ್ದುದೇನೆಂಬೆನಚ್ಚರಿಯನು ೧೬

ಕಾರಂಜಿಯೊಲ್ ಪುಟಿದು ನೀರು ಪೂರೈಸಲ್ಕೆ
ಮಾರಾರಿ ಕೃಪೆಯೆಂದು ಮಹಲಿಂಗ ಮನದೊಳಗೆ
ಹಾರೈಸಿ ಬಸವತೀರ್ಥವಿದೆಂದು ನಿಶ್ಚಯಿಸಿ ಕರೆಯುತ್ತ ಭೂತಳದೊಳು
ವಾರಣಾಶಿಯೊಳಿರ್ಪ ಭಾಗೀರಥೀ ನದಿಯ
ವಾರಿಸಮನೆಂದೆನುತ ಸರ್ವರಿಗೆ ಕರುಣದಿಂ
ದಾರೈದು ಸೂಚಿಸಿದ ಮಹಪುರುಷನಾಕ್ಷಣದೊಳೇನೆಂದು ಬಣ್ಣಿಸುವೆನು ೧೭

ಕರಚರಣ ಮೊದಲಾದ ಕರಣಗಳನೀ ಜಲದಿ
ಭರದಿಂದೆ ತೊಳೆದವರು ಪಂಚ ಮಹಾಪಾಪಕ್ಕೆ
ಗುರಿಯಾಗುವರು ಸತ್ಯಮೆಂದೆನುತ ಸೂಚಿಸಲು ಸರ್ವಜನರಾಕ್ಷಣದೊಳು
ಹರ ಹರ ಮಹಾಲಿಂಗ ನಿಮ್ಮಾಜ್ಞೆಯನು ಮೀರಿ
ಮರೆದಾದೊಡಂ ಬಳಸಿದವರಿಂಗದೇ ಗತಿಯು
ಸ್ಥಿರವಾಗಲೆಂದೆನುತ ತಮ ತಮಗೆ ಕೀರ್ತಿಸುತ ಕರಪದ್ಮವಂ ಮುಗಿದರು ೧೮

---

೧ ತಿ ( ಕ. )

ಬಾ ಯೆನಲು ಭವಬಂಧನಂ ಪರಿದು ಪೋಗುವದು
ಸಾ ಯೆನಲು ಶ್ರೀ ಸಂಪದಂ ಬಂದು ಒದಗುವದು
ವಾ ಯೆನಲು ವರಭೋಗ ಭರದಿಂದ ಸಿದ್ಧಿಪುದು ಸರ್ವಜನ ತಿಳಿವಂದದಿ
ತೀ ಯೆನಲು ಚಿರತರಾಯುಷ್ಯಮದು ದೊರೆದಪುದು
ರ್ಥಾ ಯೆನಲು ಪರಮಾರ್ಥಪದವಿ ಸಮನಿಪುದೆಂದು
ಆಯತದೊಳೆಲ್ಲರಿಗೆ ಮುನಿವರ್ಯ ನೆರೆಪೇಳ್ದನಗಜಾತೆ ಕೇಳೆಂದನು ೧೯

ಬಸವತೀರ್ಥವಿದನ್ನು ಮನವರಿವುತಾಕ್ಷಣಂ
ಒಸೆದು ನೋಡುವರವರು ಪಾಪಮುಕ್ತಕರಹರು
ಅಸಮಭಕ್ತಿಯೊಳಾರು ನಲಿದು ಸೇವಿಪರವರು ಪ್ರಮಥಪದವಿಯೊಳಿರ್ಪರು
ವಸುಧೆಯೊಳಗಿದು ಸತ್ಯಮೆಂದೆನುತ ಸದ್ಭಕ್ತ
ವಿಸರಕ್ಕೆ ಮಹಲಿಂಗ ಕರುಣದಿಂದಲಿ ಪೇಳ್ದ
ಬಿಸಜಾಕ್ಷಿ ಲಾಲಿಸೆಂದಸಮಾಕ್ಷ ನಂದ್ಯಾದಿ ಗಣರಿಂಗೆ ಸೂಚಿಸಿದನು ೨೦

ಎಂದು ಪಲವಂದದಿಂ ಬಸವತೀರ್ಥದ ಮಹಿಮೆ
ಯಂದವಿಟ್ಟೊರೆಯುತಿರೆ ಸರ್ವಜನ ಕೇಳುತ್ತ
ಮಂದೈಪ ಭಕ್ತಿಯಿಂ ಕರಪದ್ಮಗಳ ಮುಗಿದು ಮನವೊಲಿದು ಕೊಂಡಾಡುತ
ಕಂದರ್ಪಹರ ನಿನ್ನ ಘನತೆ ಬಲ್ಲವರಾರು
ಇಂದು ನಮ್ಮೆಲ್ಲರನು ಪಾಲಿಸುವ ಕಾರಣದಿ
ಚೆಂದದಿಂ ಚೆನ್ನಗಿರಿ ಕ್ಷೇತ್ರದೊಳಗೀ ರೀತಿ ತಪವನಾಚರಿಸುತ್ತಲೀ ೨೧

ಆದಿಯೊಳು ಭರತಕುಲದಲಿ ಭಗೀರಥ ಜನಿಸಿ
ಆದರದಿ ತಪವನಾಚರಿಸುತ್ತ ಶಿವನೊಡನೆ
ಮೇದಿನಿಯೊಳುಂ ದ್ವಾದಶಾಬ್ದ ಪರ್ಯಂತರಂ ಕಂದಮೂಲವ ಸೇವಿಸಿ
ಭೇದವಿಲ್ಲದೆ ಧ್ಯಾನಿಸುತ್ತಿರಲು ಭರದಿಂದೆ
ಜಾಧರಂ ಮೆಚ್ಚಿ ನಿಜರೂಪಮಂದೋರುತ್ತ
ಸಾಧುಜನ ಕುಲತಿಲಕ ನಿನ್ನ ಮನದಿಚ್ಛೆಯಂ ನೆರೆ ಬೇಡು ಬೇಡೆಂದೆನೆ ೨೨



ಬಸವತೀರ್ಥ

ಘನಹರುಷಮಂ ತಾಳ್ದು ನಮಿಸಿ ಭಯಭಕ್ತಿಯಿಂ
ಮನಸಿಜಾಂತಕ ಮೂರ್ತಿ ನೀ ಮೆಚ್ಚಿ ಪಾಲಿಪರೆ
ವಿನುತ ಮತ್ಪಿತ ಪಿತಾಮಹರಾದಿಯಾದಸವು ಭರತ ವಂಶದ ರಾಯರು
ಅನಘ ಶ್ರೀ ಕಪಿಲಮುನಿಯಿಂ ಶಾಪಹತರಾಗಿ
ತನತನಗೆ ಪೈಶಾಚರಾಗಿಳಾತಳದಲ್ಲಿ
ಎನಗೆ ಬಾಧೆಯ ಮಾಡುತಿರ್ಪರದರಿಂದವರನುದ್ಧರಿಪ ಕಾರಣದೊಳು ೨೩

ಭವದೀಯ ಮಸ್ತಕದ ದಿವ್ಯ ಗಂಗಾಂಬುವಂ
ಜವದಿಂದೆ ಪಾಲಿಸುವುದೆನೆ ನಗುತ ಮದನಾರಿ
ಕುವಲಯದಿ ನಿನ್ನಂಥ ಧನ್ಯರಾರಿಲ್ಲೆನುತ ಅಣುಮಾತ್ರ ಶೀಕರವನು
ವಿವರಿಸುತ್ತೀಯಲದು ಪ್ರಳಯಾಬ್ಧಿಯೆಂಬಂತೆ
ಶಿವನ ಜಡೆಯಿಂದಿಳಿದು ಮೇದಿನಿಯ ಬಳಸುತ್ತೆ
ಪವನ೧ಭಿ೧ಗ್ವರಪುರಕೆ ಪೋಯಿತ್ತದೇನೆಂದು ಬಣ್ಣಿಸುವೆನಚ್ಚರಿಯನು ೨೪

ಪೋಗಿ ಭೋಗಾವತಿಯ ತೀರದಲ್ಲಿಹ ಕಪಿಲ
ಯೋಗಿವರನಸಮ ಶಾಪಾಗ್ನಿಯಿಂ ನೆರೆ ಬೆಂದ
ರಾಗುಳಿದ ಎಲುಮಾಲೆಯೊಳು ಬಿಡದೆ ಮೇಲ್ವರಿಯಲೇನೆಂಬೆನಾಕ್ಷಣದೊಳು
ರಾಗದಿಂ ದಿವ್ಯ ತನುವಾಂತು ನಿಃಶಾಪದಿಂ
ಆಗ ಸ್ವರ್ಗಾಶ್ರಮಕೆ ಸಾರ್ದರೆಂದೆನುತ ಭೂ
ಭಾಗದೊಳು ಪೇಳುತಿಹ ಸತ್ಕಥೆಯ ಸಂತತಂ ಕೇಳ್ದು ಬಲ್ಲೆವು ಲೋಕದಿ ೨೫

ಭರತಕುಲಪಂಚಾಸ್ಯನಿಂತು ಭಾಗೀರಥಿಯ
ತರಿಸಿ ನಿಜಗೋತ್ರಸಂಭವರ ಪಾವನ ಮಾಡಿ
ಮೆರೆದಿರ್ದನಾದಿಯೊಳು ಅದರಂತೆ ಮಹಲಿಂಗ ನೀವಿಂದು ಜಗಮರಿಯಲು
ವರ ಬಸವ ತೀರ್ಥಮಂ ಚೆನ್ನಗಿರಿ ಧರೆಯಲ್ಲಿ
ಬರಿಸಿ ನಮ್ಮೆಲ್ಲರಂ ಪೊರೆದಿರೆಂದೆನುತಾಗ
ಕರಕಂಜಮಂ ಮುಗಿದು ಕೀರ್ತಿಸುತಲಾಬಳಿಕವಿಂತೆಂದರಾಕ್ಷಣದೊಳು ೨೬

---

೧ ಋ (ಚ.)

ಮುನ್ನೋರ್ವನುರುಲಿಂಗ ದೇವೋತ್ತಮನ ಶಿಷ್ಯ
ನನ್ನಿಯಿಂದಲಿ ಆವಜಾವೆಂಬ ಮಂತ್ರದಿಂ
ಬಿನ್ನಣದ ಲಿಂಗಮಂ ಪೂಜಿಸುತ್ತಿಳೆಯರಿಯೆ ಪೆರ್ಪಡೆಯನೊಡೆಸುತ್ತಲಿ
ಮನ್ನಣೆಯಲುದಕಪ್ರವಾಹಮಂ ತರಿಸುತ್ತ
ತನ್ನ ಗುರುಮಂತ್ರದಿಂ ಮೆರೆದಿರ್ದನದರಂತೆ
ಚೆನ್ನಗಿರಿಯಲ್ಲಿ ಮಹಲಿಂಗ ಬಸವಾಕ್ಷರದಿ ತೋರಿಸಿದನೀ ಜಲವನು ೨೭

ಅಚ್ಚರಿಯನೀ ಜಗದಿ ಕಂಡೆವೆಂದೆನುತಾಗ
ನಿಚ್ಚದಿಂ ನೆರೆದಿರ್ದ ಪೌರಜನ ಪರಿಜನರು
ಮೆಚ್ಚಿ ಕೊಂಡಾಡುತಿರಲಾ ಕೂಪದೆಡೆಯಲ್ಲಿ ಕಿಚ್ಚುಗಣ್ಣನ ರೂಪನ
ನಿಶ್ಚಲದ ಮಹಿಮೆಯಂ ಜಗದಚ್ಚಿ ನೋಡುತ್ತ
ಉಚ್ಚವದಿ ವರುಣಂಗೆ ಪೇಳಲೋಸುಗದಿಂದೆ
ಪಶ್ಚಿಮದ ಗೆಂಟಿಂಗೆ ನಡೆದನೆಂಬವೊಲಾಂಜನಾದ್ರಿಯಂ ನೆರೆ ಸಾರ್ದನು ೨೮

ಆ ಸಮಯದಲಿ ಸರ್ವಭಕ್ತಾಳಿಯೊಡಗೊಂಡು
ಭಾಸುರದ ಶ್ರೀಬಸವ ತೀರ್ಥದಿಂ ಚೆನ್ನಗಿರಿ
ವಾಸಕ್ಕೆ ಬಿಡದೆ ಬಿಜಯಂಗೈದು ಮಹಲಿಂಗ ಪರಮ ಸಂತಸದಿಂದಲಿ
ಆಸುರದಿ ಪರಸುತ್ತ ಭಕ್ತರಂ ಬೀಳ್ಕೊಟ್ಟು
ಈಶನ ಸುಪೂಜೆ ಲಿಂಗಾರ್ಪಿತಂಗಳ ತೀರ್ಚಿ
ಪಾಶಹರನಾ ಭಾವಲಿಂಗಮಯನಾಗಿರ್ದನಾ ರಾತ್ರಿಯೊಳ್ ಪಾರ್ವತಿ ೨೯

ಯೋಗನಿದ್ರಾಮುದ್ರೆಯಿಂದಿರುವ ಸಮಯದೊಳು
ರಾಗದಿಂ ಸ್ವಪ್ನಸೂಚನೆದೋರಿತೇನೆಂಬೆ
ಯೋಗಿವರ ಮಹಲಿಂಗ ನಾನಿರ್ಪೆ ಶ್ರೀರಜತಪುರಭೂಮಿಯೊಳು ಸಂತತಂ
ಈಗ ಪೂಜಾರ್ಪಣಗಳಿಲ್ಲದಲಿ ಬಹುಕಾಲ
ದೇಗುಲವ ಬಿಟ್ಟು ನಿಕ್ಷೇಪದಿಂದಿಹೆನೆನ್ನ
ಬೇಗದಿಂದಲಿ ತೆಗೆದು ಪಾಲಿಸುವದೆಂದೆನುತ ಶೂನ್ಯಲಿಂಗವು ಪೇಳಲು ೩೦

ರಾಮನಾಮೆನಗಿರ್ಪುದೆಲೆ ದೇವ ಕುಲನಾಥ
ರಾಮ ಸ್ಥಾಪಿತಲಿಂಗ ಸಿದ್ಧಾಂತ ಪುಸಿಯಲ್ಲ
ರಾಮಣೀಯಕವೆನಿಪ ಭವದೀಯ ಚೆನ್ನಗಿರಿ ಭೂಮಿಮಧ್ಯದಿ ರಾಜಿಪ
ರಾಮಗಿರಿಯಲ್ಲಿನ್ನ ನೆಲೆಗೊಳಿಸಿ ಕಾರುಣ್ಯ
ಪ್ರೇಮದಿಂದುದ್ಧರಿಸಿದರೆ ಸರ್ವಭೂಮಿಜನ
ಸ್ತೋಮಸಂಪೂಜ್ಯನಾಗುವೆನು ಮೂಜಗವರಿಯೆ ಬೆಂಬಿಡದೆ ನಡೆತರ್ಪೆನು ೩೧

ಸತ್ಯಮಿದು ಸರ್ವಜ್ಞ ಸಕಲ ದಿವ್ಯಾಗಮ
ಸ್ತುತ್ಯ ಚಿನ್ಮಯಮೂರ್ತಿ ಕೃಪೆಮಾಳ್ಪುದೆಂದೆನುತ
ಮೃತ್ಯುಹರಲಿಂಗ ಬ್ಭಯಲಾಗಲೆಳ್ಚತ್ತಿರದೆ ಯೋಗನಿದ್ರೆಯು ತಿಳಿವುತ
ನಿತ್ಯ ನಿರುಪಮ ನಿರಾಲಂಬ ಜಂಗಮರಾಯ
ನತ್ಯತಿಷ್ಠದ್ದಶಾಂಗುಲನ ಲೀಲೆಯಿದೆಂದು
ಮಿಥ್ಯವಲ್ಲೆಂದೆನುತ ಸುಜ್ಞಾನ ಮುಖದಿಂದೆ ನೆರೆ ತಿಳಿಯಲಾಕ್ಷಣದೊಳು ೩೨

ಅನಘ ಮಹಲಿಂಗ ಜಂಗಮದ ಬೆಂಬಳಿವಿಡಿದು
ಘನರಜತಪುರಲಿಂಗ ನಡೆಗೊಂಡು ಜಗಮರಿಯೆ
ಮನವೊಲಿದು ಪೋಪುದಂ ನೋಳ್ಪುದೆಂದೆನುತಾಗ ಪರಮ ಸಂತಸದಿಂದಲಿ
ಮನಸಿಜಾಂತಕ ತನ್ನನನ್ಯ ದಕ್ಷಿಣಭಾಗ
ಮಿನುಪ ನೇತ್ರವ ತೆಗೆದನೆಂಬಂತೆ ಪ್ರಜ್ವಲಿಸಿ
ದಿನಪನುದಯಾಚಲದ ತುದಿಯಲ್ಲಿ ಮುಂಬರಿದು ಮೆರೆದಿರ್ದನಾ ಸಮಯದಿ ೩೩

ಯೋಗಿವರನಾ ಕಾಲದೊಳು ನಿತ್ಯ ನಿರುಪಮ ನಿ
ಯೋಗವಿಧಿಗಳ ತೀರ್ಚಿಸುತ್ತಸಮ ಭಕ್ತಮಣಿ
ನಾಗಪತಿ ಶ್ರೀ ತೊಂಡಿಕಟ್ಟೆ ಬಸವಪ್ಪಯನ ಎಡವಣಾಖ್ಯನ ಕರೆಸುತ
ನಾಗಕಂಕಣಲಿಂಗ ಪೇಳ್ದ ಸ್ವಪ್ನೋನ್ನತಿಯ
ನಾಗ ಸೂಚಿಸೆ ಕೇಳ್ದು ನಮಿಸುತೆಲೆ ಮಹಲಿಂಗ
ಭೂಗಗನದೊಳು ನಿಮ್ಮ ನುಡಿ ಬಂಜೆಯಪ್ಪುದೇನೀಗ ಬಿಜಯಂಗೈವುದು ೩೪

ಎಂದು ಬಿನ್ನೈಸಿ ಕೀರ್ತಿಪಭಕ್ತ ಪುಂಗವರ
ಸಂದಣಿಯನೊಡಗೊಂಡು ರಜತಪುರದತ್ತಲುಂ
ಸಂದ ಪರಮಾನಂದ ಮಯರೂಪ ನಡೆಗೊಂಡನೇನೆಂಬೆನಗಜಾತೆಯೆ
ಚೆಂದದಿಂದಾ ತಾಣದೊಳ್ ಬಿಡದೆ ಭರದಿಂದೆ
ಬಂದು ರಾಮಾಖ್ಯಲಿಂಗಮದಿಲ್ಲಿ ನೆಲೆಸಿರ್ಪು
ದೆಂದೊರೆವ ನುಡಿಗೇಳಿ ಮೆಚ್ಚುತ್ತ ತಲ್ಲಿಂಗ ನಲಿವುತಿರ್ದನು ಭೂಮಿಯೊಳ್ ೩೫

ಹಿಂದಕ್ಕೆ ನಾನೊಂದು ಕಾಲದಲಿ ಗಿರಿಜಾತೆ
ಸಿಂಧುರಾಸುರನ ಮುಂದಲೆಯಲ್ಲಿ ನೆಲೆಸಿರಲು
ಬಂದು ಶ್ರೀ ನಂದಿನಾಥನು ಮದ್ದಲೆಯ ನುಡಿಸೆ ಕೇಳುತ್ತ ಮುದದಿಂದಲಿ
ಚಂದದಿಂ ಕುಣಿವುತಿರಲಂದವನ ಕಾರೊಡಲು
ದ್ವಂದ್ವಭಾಗಾಗಿ ಬಾಯ್ಬಿಟ್ಟಂತೆ ಮುನಿವರನ
ಮುಂದಿರ್ಪ ಭೂಮಿಯೊಳು ಆ ಲಿಂಗ ಕುಣಿಯುತಿರಲಿಬ್ಭಾಗವಾಯ್ತವನಿಯು ೩೬

ಮಲಹರನ ಭಕ್ತರದ ನೋಡುತ್ತ ಮನದೊಳಗೆ
ನಲಿದು ಕೊಂಡಾಡುತಚ್ಚರಿಯಲಾ ಎಂದೆನುತ
ಎಲೆಗೋಲುಗುದ್ದಲಿಗಳಿಂದಗಿಯೆ ನೆಲನ ಒಂದಾಳುದ್ದ ಪರಿಮಿತಿಯಲಿ
ಒಳಗಿರ್ಪ ಲಿಂಗ ಥಳಥಳಿಸುತ್ತ ಬೆಳಗುತಿರೆ
ಚೆಲುವ ಮಹಲಿಂಗಕರಪದ್ಮಮದು ಸೋಂಕಲ್ಕೆ
ಘಳಿಲನೇ ಪೊರಪೊಣ್ಮಿ ಬಂದಿತ್ತದೇನೆಂದು ಬಣ್ಣಿಸುವೆನಗಜಾತೆಯೇ ೩೭

ಮಜಭಾಪುರೀ ಚಾಂಗು ಪೂತುರುಘೆಯೆಂದೆನುತ
ನಿಜನಿಂದ ಸರ್ವಭಕ್ತೋತ್ತಮರು ಕೊಂಡಾಡೆ
ಅಜಮುಖಾಮರರೆಲ್ಲ ನೋಡುತಂಬರದಲ್ಲಿ ಪುಷ್ಪವೃಷ್ಟಿಯಗರೆಯಲು
ಯಜನಾದಿ ವಿಧಿಗಳಿಂದವೆ ತ್ರಿಜಗಮದರಂತೆ
ಸುಜನ ಸಂಸೇವಿತನ ಬೆಂಬಿಡದೆ ಪೊರಳುತ್ತ
ನಿಜದಿ ಬರಲಡಿಗಡಿಗೆ ತೆಂಗುಗಳನೊಡೆವುತ್ತ ಭಕ್ತಿಯಿಂ ಕೊಂಡಾಡಲು ೩೮



ಚೆನ್ನಗಿರಿ ದುರ್ಗ

ಪೊಡವಿಯೊಳು ಗುಡುಗುಡನೆ ಬೆಂಬಿಡದೆ ಪೊರಳುತ್ತ
ಒಡೆವುತ್ತ ತೆಂಗುಗಳ ಮೃಡಭಕ್ತ ಸಂಕುಲಂ
ಸಡಗರದಿ ಅಡಿಗಡಿಗೆ ಜಯಜಯತು ಜಯತೆಂದು ಭಕ್ತಿಯಿಂ ಕೊಂಡಾಡಲು
ಜಡೆಯ ಮಹಲಿಂಗಾಖ್ಯನೆಡಬಲದಿ ಸಂದಣಿಸಿ
ಅಡೆವಿಡದೆ ಚೆನ್ನಗಿರಿಮಾರ್ಗಮಂ ಪಿಡಿವುತ್ತ
ಒಡನೆ ತಲ್ಲಿಂಗಮದು ಬೆಡಗಿನಿಂ ಬಂದಿತ್ತು ಬಣ್ಣಿಸುವ ಕವಿಯಾವನು ೩೯

ಸಕಲ ಸಂಭ್ರಮದಿಂದೆ ಶ್ರೀಚೆನ್ನಗಿರಿ ನಗರ
ನಿಕರಸ್ಥ ಭೂಧರಮದೇಕ ಕೋಶದೊಳಿರಲು
ಸುಖನಿಧಿಯ ಬಳಿವಿಡಿದು ನಡೆಗೊಂಡು ಬರಲೆಲ್ಲವರು ನೋಡಿ ತನ್ನಗದಲಿ
ಅಕಲಂಕ ಲಿಂಗಮಂ ದಿವ್ಯಾಗಮೋಕ್ತದಿಂ
ಪ್ರಕಟದಿಂ ಸ್ಥಾಪಿಸಿ ಮಹಾಲಿಂಗಮುನಿ ಸುಜನ
ನಿಕರ ಸಂಸೇವ್ಯ ಗುಡಿ ಕೋಟೆ ಕೊತ್ತಳಗಳನು ನಿರ್ಮಿಸಿದನಾಕ್ಷಣದೊಳು ೪೦

ಮುನ್ನೋರ್ವ ಪರಮ ದೀಪದಕಲಿಯುನೆಂಬಸಮ
ಚೆನ್ನಭಕ್ತೋತ್ತಮಂ ಘನಮುಗ್ಧಭಾವದಿಂ
ಬಿನ್ನಣದ ಕಾಂತಾರ ಗಿರಿಯಮಧ್ಯದಲಿರ್ಪ ಪಾವನದ ದೇಗುಲವನು
ತನ್ನಯ ಪಿತಾಮಹರು ಗಳಿಸಿರ್ದ ದ್ರವ್ಯದಿಂ
ನನ್ನಿಯಿಂ ರಚಿಸಿರ್ದ ತೆರದಿಂದೆ ಮಹಲಿಂಗ
ಚೆನ್ನಾಗಿ ನಿರ್ಮಿಸಿದನಾ ಲಿಂಗಕೇನೆಂದು ಬಣ್ಣಿಸುವೆ ಭೂತಳದೊಳು ೪೧

ರಾಮಾಖ್ಯಲಿಂಗಕ್ಕೆ ಚೆನ್ನಗಿರಿಪತಿಯೆಂದು
ನಾಮಕರಣಂಗೈದನಗಜಾತೆ ಕೇಳೆಂದು
ಪ್ರೇಮದಿಂದಾ ಲಿಂಗ ನಡೆಗೊಂಡು ಬಂದುದಕೆ ಪಿಂದಲೆಯು ನೆಗ್ಗಿರ್ಪುದು
ಭೂಮಿಯೊಳ್ ಕೌತುಕವಲಾಯೆಂದು ಶಿವಭಕ್ತ
ಸ್ತೋಮವದು ಕಂಡು ಕೊಂಡಾಡುತ್ತೆ ಶಾಸ್ತ್ರಾಭಿ
ರಾಮನೆಂದೆನಿಪ ಬಸವಾಖ್ಯಪೌರಾಣಿಕನು ದೃಷ್ಟಾಂತ ಕಥೆ ಪೇಳ್ದನು ೪೨

ಮುನ್ನೋರ್ವ ಶೈವಕುಲ ಸಂಪನ್ನನೆಂದೆನಿಪ
ಪನ್ನಗಾಭರಣ ಪರಶಿವಭಕ್ತ ಭೋಗಣ್ಣ
ನನ್ನಿಯಿಂ ಕೆಂಭಾವಿ ಪುರದೊಳಗೆ ಸದ್ಧರ್ಮ ಕೀರ್ತಿಯಿಂದಲಿ ಬಾಳುತ
ಚೆನ್ನೆಸೆವ ಭಸಿತ ರುದ್ರಾಕ್ಷಿಗಳ ತಳೆದವರು
ಅನ್ಯಕುಲದವರಾದರೇನವರು ಲೋಕದೊಳು
ಎನ್ನ ಬಾಂಧವರೆಂದು ಭಯಭಕ್ತಿಯಿಂ ನಂಬಿ ಭಜಿಸುತಿರ್ದನು ಸಂತತಂ ೪೩

ಶಿವನೊಬ್ಬನೇ ದೈವ ಶಿವಭಕ್ತನೇ ಕುಲಜ
ಭುವನದೊಳಗೀ ನುಡಿಯು ಸಿದ್ಧಾಂತವೆಂದು ಹೃತ್
ಕುವಲಯದಿ ನೆರೆನಂಬಿ ಸನ್ಮಾರ್ಗವಂ ಹಿಡಿದು ಭೋಗಣ್ಣನಿರಲಾಕ್ಷಣಂ
ಭವನವನ ಭಕ್ತಿಯಂ ಪ್ರಕಟಿಸುವ ಕಾರಣದಿ
ಜವದಿ ಶ್ರೀಶೈಲಾಸದಿಂದಿಳಿದು ಕೆಂಭಾವಿ
ಕುವಲಯಕೆ ಕಾಪಟ್ಯವೇಷದಿಂದಲಿ ಬಂದನೇನೆಂದು ಬಣ್ಣಿಸುವೆನು ೪೪

ಚಿತ್ತರದಿ ಭಸಿತ ರುದ್ರಾಕ್ಷಿಗಳನಂಗದೊಳು
ಚಿತ್ತಜಾಂತಕ ತಳೆದು ಮಲಿನಾಂಬರಂಗಳಂ
ಸುತ್ತಿಕೊಂಡಾಕ್ಷಣಂ ಕಚ್ಚುಟವನಾಂತಿರದೆ ನೆರೆಗಂಬಳಿಯ ಗೊಂಪಿಯಿಂ
ಸತ್ತ್ರಕರ ಪೆಗಲಿನೊಳ್ ಪೊತ್ತಾಗಿ ಕೆಂಭಾವಿ
ಉತ್ತಮದ ಬಾಜಾರದೊತ್ತಿನೊಳಗೆಡೆವಿಡದೆ
ನೃತ್ಯಹರ ಭೋಗಣ್ಣನಾಲಯವ ಕೇಳುತ್ತ ಮುಂದೆಸೆಗೆ ನಡೆಗೊಂಡನು ೪೫

ಅಲ್ಲಿರ್ಪ ವಿಪ್ರೋತ್ತಮರು ಕಂಡು ಕೋಪದಿಂ
ಖುಲ್ಲನಿವ ಕುಲಭ್ರಷ್ಟರಾರಾದೊಡಂ ಬಿಡದೆ
ಸಲ್ಲಲಿತ ಭಸಿತ ರುದ್ರಾಕ್ಷಿಗಳ ತಳೆದಿರಲು ಬಳಿಕವರ ಮನ್ನಿಸುತಲಿ
ಕಲ್ಲಣುಗಿಯಾಣ್ಮನೆಂದೆಲ್ಲರನು ಕಾಣುತ್ತ
ಮೆಲ್ಲಡಿಗಳಂ ಭಜಿಸಿ ಭೋಜನಗಳಿಂ ತಣಿಸಿ
ನಿಲ್ಲದೀ ಪುರದೊಳಗೆ ಹೊಲೆಗಲಿಸುವನು ಬ್ರಾಹ್ಮ ಜಾತಿಗಳನೆಂದೆನುತಲಿ ೪೬

ಕುಲಗೇಡಿ ಭೋಗಣ್ಣನಿವನ ಕೆಂಭಾವಿ ಪೊಳ
ಲೊಳಗಿಂದ ಹೊರಹಾಕಬೇಕೆನುತ ತಮತಮಗೆ
ಛಲದಿಂದ ವಿಪ್ರಾಧಮರು ಕೂಡಿ ಮಾತಾಡುತಿರಲಾಗ ಭರದಿಂದಲಿ
ಕಲಧೌತಗಿರಿವಾಸ ಶಿವ ಬ್ರಾಹ್ಮಣೋತ್ತಮನ
ನಿಲಯಮಂ ಪೊಗಲು ಕಾಣುತ್ತ ಕಡು ಕೋಪದಿಂ
ಹೊಲೆಯನೊಳಪೊಕ್ಕನೆಂದೆನುತ ಬೆಂಬಳಿವಿಡಿದು ಬಂದರಾಕ್ಷಣದಲ್ಲಿಯೆ ೪೭

ಚಂಡಾಲನೊಳಪೊಕ್ಕನೆಲೆ ಪಾಪಿಭೋಗಣ್ಣ
ಖಂಡ ಮಾಡಿದಿ ಬ್ರಾಹ್ಮಣೋತ್ತಮರ ಕುಲವ ಭೂ
ಮಂಡಲದೊಳೆಂದೆಲ್ಲರೊಂದಾಗಿ ಮನೆಮುಂದೆ ಮುಂಬಾಗಿಲಂ ಮುತ್ತುತಂ
ಅಂಡರಿವುತಿರಲಿತ್ತಲತ್ತ ಕಪಟಾತ್ಮನಹ
ಚಂಡಿಕಾವರನ ಸಮ ಬಾಳಕಂಠಸ್ಥಲದ
ಮಂಡಿತಮಹಾಭಸಿತ ರುದ್ರಾಕ್ಷಿಗಳ ಕಂಡು ಭೂರುದ್ರನೆಂದೆನುತಲಿ ೪೮

ಭಕ್ತಿಯಿಂ ನಮಿಸಿ ಕರಕಂಜಮಂ ಮುಗಿಯಲ್ಕೆ
ಮುಕ್ತಾಂಗನಾಲಿಂಗನಾಕ್ಷಣದಿ ಮೈದೋರಿ
ಯುಕ್ತಲಾ ಭೋಗಣ್ಣ ನಿಗಮೋಕ್ತಮಾರ್ಗವಿದು ನಿಜನಿಷ್ಠೆಯಂ ನೋಡಲು
ವ್ಯಕ್ತಸ್ವಪಚಾಕೃತಿಯ ತಾಳ್ದು ಬಂದಿರ್ದೇಕ
ಯುಕ್ತಿಯಿಂ ಕಾಡುತಿಹ ದ್ವಿಜರಿಗಂಜದಿರೆಂದು
ರಕ್ತಿಯಿಂ ಪೇಳಿ ಬಯಲಾಗಲ್ಕೆ ಶಿವನತ್ತಲಾ ವಿಪ್ರನೀಚಾತ್ಮರು ೪೯

ಕೋಪದುದ್ರೇಕದಿಂ ಮಂದಿರವನೊಳಪೊಕ್ಕು
ಮಾಪನೇತ್ರಾರ್ಚಿತನ ರೂಪ ತಿಳಿಯದೆ ಬರಿದೆ
ಪಾಪಿಗಳು ಪುಡುಕುತ್ತ ಕಾಣದಾಕ್ಷಣದಲ್ಲಿ ಎಲೆ ಭೋಗಿ ನೀಚಾತ್ಮನೆ
ಈ ಪುರದ ಜನ ನೋಡುತಿರೆ ಬಂದು ಬಯಲಾದ
ಕಾಪಟ್ಯವಿದು ನೀನು ಕೆಂಭಾವಿಪುರ ಬಿಟ್ಟು
ಪೋಪುದೆಂದೆನುತಾಗ ಕರುಬದಿಂ ತಮತಮಗೆ ಮಾತಾಡುತಿಂತೆಂದರು ೫೦

ಸಾಮವೇದಿಗಳಿಗಿದು ಸಿದ್ಧಾಂತವೇ ಜಗದಿ
ಪ್ರೇಮವೇನಿದು ಯಜುರ್ವೇದಿಗಳ ಗೋತ್ರಕ್ಕೆ
ಸಾಮವೇದಿಗೆ ಪರಮ ಋಗ್ವೇದಿಗಳ ಮತಕೆ ದುಷ್ಕೃತ್ಯ ಭಾವಿಸುವೊಡೆ
ಭೂಮಿಯೊಳು ದಿವ್ಯಾಥರ್ವಣವೇದಿಗಳಿಗೆಯಭಿ
ರಾಮವೇ ಭೋಗಣ್ಣನಾಚಾರವೆಂದೆನುತ
ತಾಮಸದ ಗುಣಿಗಳೆಲ್ಲರು ಕೂಡಿ ಮಾತಾಡುತಿರ್ದರತಿ ಕೋಪದಿಂದೆ ೫೧

ಗೋವಿಂದಶಾಸ್ತ್ರಿಗಳು ಶ್ರೀರಾಮಪಂಡಿತರು
ಭಾವಗ್ನಿ ವಸುದೇವ ವಾಗ್ಮಿಗಳು ನರಸಿಂಹ
ಕೋವಿದರು ಮೊದಲಾದ ಪರಮ ವೈದಿಕರೆಲ್ಲ ನೆರೆದು ಮಂತಣಗೈವುತ
ಭೂವಲಯದೊಳು ಪಾಪಿ ಭೋಗಣ್ಣನಾಚಾರ
ಭಾವಿಪಡೆ ಜನವಿರುದ್ಧವಿದೆಂದು ತಮ್ಮೊಳಗೆ
ತೀವಿದುದ್ರೇಕದಿಂದಾ ಪುರವ ಬಿಟ್ಟವನ ಹೊರಹಾಕಬೇಕೆನುತಲಿ ೫೨

ನಿಷ್ಠುರೋಕ್ತಿಗಳಿಂದ ಮಾತಾಡುತೆಲೆಭೋಗ
ನಷ್ಟ ಮಾಡಿದೆಯಲಾ ಬ್ರಾಹ್ಮಣೋತ್ತಮ ಕುಲವ
ಭ್ರಷ್ಟಾಯ್ತು ಕೆಂಭಾವಿಪುರ ನಿನ್ನ ದೆಸೆಯಿಂದೆ ಮನೆಬಿಟ್ಟು ಪೋಗೆನುತಲಿ
ಶಿಷ್ಟನಾಚಾರ ತಿಳಿಯದೆ ಸರ್ವರೊಂದಾಗಿ
ಕಷ್ಟದಿಂ ಹೊರಹಾಕಲನಿತರೊಳು ಸಂಯಮಿಯು
ಭೀಷ್ಟದಾಯಕನ ಪದಪದ್ಮಮಂ ಧ್ಯಾನಿಸುತ ನಡೆಗೊಂಡ ಬೇರೂರಿಗೆ ೫೩

ಗೂಗೆಗಳಿಗಂಜುವನೆ ಕಂಜಾಪ್ತ ಘನವಿರಹ
ರಾಗಿಗಳು ನಿಂದಿಸಲು ಭೀತಿಪನೆ ದ್ವಿಜರಾಜ
ರಾಗದಿಂ ಭೇಕಾಳಿ ಜರಿಯೆ ಕುಂದುವನೇನು ಕಂಜಾಕ್ಷ ಪರಬ್ರಹ್ಮದ
ಯೋಗಿಗಳು ಮದನಾನುರಂಜನೆಗೆ ಕೊರಗುವರೆ
ತ್ಯಾಗಿಗಳ ತಾಮಸದ ಮಾತಿಂಗೆ ಭೂತಳದಿ
ಭೋಗಣ್ಣ ಬೆದರುವನೆ ಭಕ್ತಾಳಿ ಕೇಳೆನುತ ಬಸವಾಖ್ಯ ನೆರೆ ಪೇಳ್ದನು ೫೪

ಸೂರ್ಯಾಸ್ತಮಯ ಕಾಲಕಾ ನಗರಮಂ ಬಿಟ್ಟು
ಧೈರ್ಯಸ್ಥನಾಗಿ ಶಿವಸ್ಮರಣೆಯಿಂ ನಡೆಯುತ್ತಿ
ಸ್ಥೈರ್ಯದಿಂದಲ್ಲಿರ್ಪ ಮುನ್ನೂರ ಮೂವತ್ತು ಲಿಂಗಂಗಳಾಕ್ಷಣದೊಳು
ತೂರ್ಯದಿಂ ದೇಗುಲಗಳಂ ಬಿಟ್ಟು ಭೋಗಿಮಾ
ಧುರ್ಯ ಭಕ್ತಿಗೆ ಮೆಚ್ಚಿ ಬೆಂಬಿಡದೆ ಸದ್ಬ್ರಹ್ಮ
ಣಾರ್ಯ ನಿನ್ನಗಲಿ ಜೀವಿಪರಲ್ಲವೆಂದೆನುತ ನಡೆಗೊಂಡವೇನೆಂಬೆನು ೫೫

ಲಾಲಿಪುದು ನಾಗಾಖ್ಯ ಮುಖ್ಯ ಭಕ್ತೋತ್ತಮರು
ಭಾಳಾಕ್ಷಲಿಂಗಗಳು ಬೆಂಬಿಡದೆ ಪೊರಳುತ್ತ
ಓಲೈಸುತೆಡಬಲದಿ ಭೋಗಿಪತಿ ಬಳಿವಿಡಿದು ಬರಲೊಂದು ಗಾವುದದಲಿ
ಬೇಲೂರುಎಂದೆಂಬ ಗ್ರಾಮು ಕಂಗೊಳಿಸಲ್ಕೆ
ಬಾಲೇಂದುಧರನ ವರ ಧ್ಯಾನಂದಿಂದಾ ರಾತ್ರಿ
ಕಾಲಮಂ ಕಳೆಯಲೋಸುಗದಿಂದೆ ನಿಶ್ಚೈಸಿ ಬಳಿಕೊಂದು ದೇಗುಲದಲಿ ೫೬

ಅವಿರಳಾನಂದಮಯನಾಗಿ ಭೋಗಣ್ಣನಿರೆ
ಪ್ರವಿಮಳ ಮಹಾಲಿಂಗಗಳು ಬಂದು ಕೆಲಬಲದಿ
ತವಕದಿಂ ಮೂರ್ತಿಗೊಂಡಿರಲಾಗ ನೆರೆನೋಡಿ ಮಸ್ತಕವನಲ್ಲಾಡುತ
ಶಿವಶಿವ ಮಹಾದೇವ ನೀವೇಕೆ ಬಳಲಿದಿರಿ
ಕುವಲಯದಿ ಕೌತುಕವಿದೆಂದೆನುತ ಲಿಂಗಗಳ
ವಿವಿಧಾನುರಾಗದಿಂ ಬಿಡದೆ ಕರದಿಂದೆ ಮೈದಡವುತಿರಲಾಕ್ಷಣದಲಿ ೫೭

ನನ್ನ ದೆಶೆಯಿಂದೆ ಭೋಗಣ್ಣ ಕೆಂಭಾವಿಯನು
ನನ್ನಿಯಿಂ ಬಂದು ಬಿಟ್ಟಿರ್ಪನು ಜಗಮರಿಯೆ
ಮುನ್ನವನ ನೋಡಬೇಕೆಂದೆನುತ ಸಂತಸದಿ ಶ್ರೀಗಿರಿಸುತಾಕಾಂತನು
ತನ್ನಸಮ ದಕ್ಷಿಣಾಕ್ಷಿಯ ತೆರೆದನೆಂಬಂತೆ
ಬಿನ್ನಣದ ಪೂರ್ವಶೈಲಾಗ್ರದಲಿ ರವಿಬಿಂಬ
ಚೆನ್ನಾಗಿ ತಲೆದೋರಲಾ ಸಮಯದಲಿ ಬಿಡದೆ ವಿಪ್ರಾಧಮರು ಕೂಡುತ ೫೮

ಇತ್ತ ಕೆಂಭಾವಿಯೊಳು ಪೊತ್ತರೆದ್ದಾ ಕ್ಷಣಂ
ಮೃತ್ಯುಹರಲಿಂಗಗಳ ಚಿತ್ತಶುದ್ಧದಿ ಭಜಿಪ
ಕೃತ್ರಿಮದ ವಿಪ್ರೋನ್ನತರು ಕೂಡಿ ತಮತಮಗೆ ಭೋಗಣ್ಣಪೋದೆನುತಲಿ
ನಿತ್ಯನೇಮಂಗಳನುತೀರ್ಚಬೇಕೆಂದೆನುತ
ಮತ್ತಸಮ ದೇಗುಲಗಳಂ ಪೊಕ್ಕು ನೋಡುತಿರೆ
ಬಿತ್ತರದ ಪೀಠಗಳು ಶೂನ್ಯವಾಗಿರಲಾಗ ಭಯಗೊಂಡು ಪಾಪಾತ್ಮರು ೫೯

ತಮತಮಗೆ ಗರಹೊಡೆದ ತೆರದಿಂದೆ ಗಾವಿಲರ್
ಭ್ರಮಿಸುತ್ತ ಭಾವದೊಳು ಕೌತುಕವಲಾ ಜಗದಿ
ಕಮಲಾಕ್ಷನೇ ಬಲ್ಲ ದೇಗುಲಂಗಳಲೊಂದು ಲಿಂಗಿಲ್ಲ ಪೂಜಿಸುವಡೆ
ನಮಗಾವ ಜನ್ಮಾಂತರದ ಕರ್ಮ ಸಿದ್ಧಿಸಿತು
ವಿಮಲ ಶಂಕರಶಾಸ್ತ್ರಿಗಳಿಗರುಹಬೇಕೆನುತ
ಅಮಿತ ಚಿಂತಾಭಾರದಿಂದೆಲ್ಲರೊಂದಾಗಿ ಬಂದು ಪೇಳ್ದರು ಭರದೊಳು ೬೦

ಚಿತ್ತವಿಪುದೀ ಮಾತು ಶಂಕರೋತ್ತಮರಿಂದು
ಮೃತ್ಯುಹರಲಿಂಗಗಳು ಮುನ್ನೂರ ಮೂವತ್ತು
ಎತ್ತ ಪೋದವುವೊ [1][ತಾವೊ][1]ಂದಿಲ್ಲ ದೇಗುಲದಿ ನಿತ್ಯನೇಮಗಳೆಲ್ಲವು
ಸತ್ಯವಿದು ಭೂತಳದಿ ಪರಕಿಪೊಡೆ ಸರ್ವಜ್ಞ
ಚಿತ್ತರೇ ಬಲ್ಲಿರೆಂದೆನುತಾಗ ಪೇಳಲ್ಕೆ
ಚಿತ್ತಜಾರಿಯ ಭಕ್ತ ಭೋಗಿಪತಿ ಬಳಿವಿಡಿದು ಪೋಗಿರ್ಪುವಾ ರಾತ್ರಿಯೊಳ್ ೬೧

ಎಂದೆನುತ ಪೇಳಲ್ಕೆ ಕೇಳ್ದು ವಿಪ್ರಾಧಮರು
ಸಂದೇಹಮುಳಿದಾಗ ಸಿದ್ಧಾಂತಮೆಂದೆನುತ
ಮುಂದುವರಿದಾಕ್ಷಣದಿ ಸರ್ವರೊಂದಾಗುತ್ತ ಭಕ್ತಿಭಾವದಿ ನಮಿಸುತ
ಮುಂದೆವಾಳುವದಾಯ್ತು ಜಗದೊಳಗೆ ಭೋಗಣ್ಣ
ನಂದವರಿಯದ ಮೂರ್ಖತನಕಿಂದು ಸಮನಿಲ್ಲ
ವೆಂದು ತಮ್ಮೊಳು ತಾವೆ ಮಾತಾಡುತಂ ಮಹಿಮ ನೆಲಸಿರ್ಪ ಬೇಲೂರಿಗೆ ೬೨

---

೧ ನೋಡಲೊ (ಕ. ಚ.)



ರಾಮಲಿಂಗ ದೇವಾಲಯ

ನಡೆಗೊಂಡು ಭಕ್ತಿಯಿಂದಡಿಗೊಂಡು ನಮಿಸುತ್ತ
ಕಡುಭಕ್ತಿಯಿಂ ಬಿಡದೆ ನಮಿಸುತ್ತ ಮನದೊಳಗೆ
ನಡನಡುಗುತೆಯ್ತಂದು ತತ್ಪುರದ ಬಹಿರೋಪದೇಶಸ್ಥ ದೇಗುಲದಲಿ
ನಡೆಗೊಂಡು ಭೋಗಣ್ಣನೆಡಬಲದೊಳಿಡಿದಿರ್ಪ
ಮೃಡಲಿಂಗಗಳ ನೋಡಿ ಪೊಡವಿಯೊಳ್ ಸೈಗೆಡೆದು
ದೃಢದಿಂದೆ ಕರಜಡಜಗಳ ಮುಗಿದು ಶಿವಬ್ರಾಹ್ಮಣೋತ್ತಮನೆ ಪಾಲಿಸುವದು ೬೩

ಗೂಗೆಗಳು ದಿನಪತಿಯ ಸಂಕಾಶದುನ್ನತಿಯು
ಕಾಗೆಗಳು ಕೆನೆವಾಲದುರು ಸವಿಯ ಪರಮಾರ್ಥ
ದಾಗಮದ ಪದ್ಧತಿಯು ಹ್ಯಾಗಿಗಳು ತಾವೆತ್ತ ಬಲ್ಲರೀ ಕುವಲಯದೊಳು
ಭೋಗಣ್ಣ ನಿಮ್ಮಿರವ ಪರಕಿಸಲು ತಾಮಸದಿ
ರಾಗಿಗಳಿಗೆತ್ತಣ್ತು ಭಾವಜ್ಞ ಕಾರುಣ್ಯ
ಸಾಗರನೆ ಪರಿಪಾಲಿಸೆಂದೆನುತ ಭಕ್ತಿಯಿಂ ಕೊಂಡಾಡಲಾಕ್ಷಣದೊಳು ೬೪

ಕುಜನರವಗುಣಗಳೆಷ್ಟಿರ್ದೊಡಂ ಜಗದೊಳಗೆ
ಸುಜನೋತ್ತಮರು ನೋಳ್ಪುದಿಲ್ಲೆಂಬ ನೀತಿಯಂ
ದ್ವಿಜರಿಂಗೆ ತೋರ್ಪನೆಂಬಂದಮಂ ಬೀರುತ್ತ ಭೋಗಣ್ಣನಾ ಸಮಯದಿ
ದ್ವಿಜರಾಜಧರಲಿಂಗಗಳು ಬಿಡದೆ ಕೆಲಬಲದಿ
ನಿಜದಿಂದೆ ಪೊರಳುತ್ತ ಬರುತಿರಲು ನಡೆಗೊಂಡು
ಅಜಮುಖ್ಯ ಅಮರ ನತಪಾದಮಂ ಧ್ಯಾನಿಸುತ ಕೆಂಭಾವಿಪುರದತ್ತಲು ೬೫

ಅಂಗಜಾಂತಕರೂಪನಾಪುರಕೆ ಬರಲಾಗ
ತುಂಗವಿಪ್ರೋನ್ನತರು ತಮತಮಗೆ ನೋಡುತಿರೆ
ಲಿಂಗಗಳು ಪಲ್ಲಟಿಸಿ ದೇಗುಲಗಳಂ ಪೊಕ್ಕು ಹಿರಿಕಿರಿಯ ಪೀಠಂಗಳೊಳ್
ಪಿಂಗದಲೆ ನೆಲಸಿದವು ಜಗಮರಿಯದೆಂದೆಂಬ
ಮಂಗಲಮಹಾತ್ಮ್ಯೆಯನು ಕೇಳ್ದು ಬಲ್ಲೆವು ಬಳಿಕ
ಜಂಗಮೋತ್ತಮನಿಂದೆ ಸರ್ವಜನ ತಿಳಿವಂತೆ ಪ್ರತ್ಯಕ್ಷ ತಾನಾದನು ೬೬

ಆ ಲಿಂಗಗಳು ಪೋಗಿ ನಡೆಗೊಂಡು ಒಂದುದಕೆ
ನೀಲಮಯ ಪೀಠಂಗಳೊಳ್ ಮರಳಿ ಪೊಕ್ಕುದಕೆ
ಈ ಲಿಂಗ ಮಹಲಿಂಗ ಮುನಿವರನ ಬಳಿವಿಡಿದು ಬಂದಿರ್ದ ಪ್ರತ್ಯಕ್ಷವು
ಲೋಲ ಪಿಂದಲೆಯು ನೆಗ್ಗಿ ಪುರ್ದೇ ಕುರುಹೆಂದು
ಬಾಲೇಂದುಧರಭಕ್ತಸಂತತಿಗೆ ಬಸವಾಖ್ಯ
ಪೇಳುತಿರೆ ಕೇಳ್ದು ಸಂತಸದಿಂದೆ ತಮತಮಗೆ ಕೊಂಡಾಡಿದರು ಸರ್ವರು ೬೭

ಎಂದು ಪಲವಂದದಿಂ ಭಕ್ತೋತ್ತಮರು ನುತಿಸ
ಲಂದು ಪರಮಾನಂದಮಯರೂಪ ಮಹಲಿಂಗ
ಸಂದ ಶಾಸ್ತ್ರಾಗಮ ಸುಪೌರಾಣ ಪರಮಾರ್ಥಗೋಷ್ಠಿಯಿಂ ಸುಖಮಿರ್ದನು
ಇಂದು ಬಣ್ಣಿಪರಾರು ಜಂಗಮಾಧಿಕ್ಯವನು
ಇಂದುಮುಖಿ ಗಿರಿಜಾತೆ ಕೇಳೆಂದು ಕೈಲಾಸ
ಮಂದಿರದಿ ನಂದ್ಯಾದಿ ಪ್ರಮಥರಾಲಿಸುವಂತೆ ಪರಮಾತ್ಮ ಸೂಚಿಸಿದನು ೬೮

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿ ಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿರ್ಪರು ೬೯

ಅಂತು ಸಂಧಿ ೧೧ ಕ್ಕಂ ಪದ ೪೪೩ ಕ್ಕಂ
ಮಂಗಳಂ
ಶ್ರೀ

ಶ್ರೀ

# ಹನ್ನೆರಡನೆಯ ಸಂಧಿ

**ಸೂಚನೆ :** ಮಾಲೋಜಿ ಭೂಪತಿಯು ಬಿನ್ನಪವ ಕೈಕೊಂಡು
ಲೋಲ ಶ್ರೀ ಚೆನ್ನಗಿರಿಯಿಂದೆ ಬಿಜಯಂಗೈದು
ಲೀಲೆಯಿಂ ಮಹಲಿಂಗ ಮೋದಪುರಿ ಛಾತ್ರದೊಳ್ ಪರಮಸುಖದಿಂದಿರ್ದನು

ಸೋಮಸವಿಕಾಂಬರಸಮೀರಸಪ್ತಾರ್ಚಿಶರ
ಭೂಮಿ ಯಜಮಾನಾಭಿರಾಮತನು ವಾಮಾಂಗ
ಸೋಮ ಸಂಭಿನ್ನಸುತ್ರಾಮ ಸದ್ಗುಣಧಾಮ ಸನಕಾದಿ ಮುನಿಸೇವಿತ
ರಾಮಗಲ ಕಮಲಾಕ್ಷಚಕ್ಷುವರದಾತ ನುತ
ಹೈಮವತಿವಕ್ಷೋಜಕಲಿತಹಸ್ತಪಯೋಜ
ಧಾಮನಿಧಿ ಸೋಲೂರ ಶ್ರೀಚೆನ್ನವೀರೇಶ ಪಾಲಿಪುದು ಮೂಜಗವನು ೧

ಗಿರಿಜಾತೆ ಲಾಲಿಪುದು ಮಹಲಿಂಗ ಜಂಗಮದ
ವರಲೀಲೆಯಿಂ ಬಳಿಕ ಚೆನ್ನಗಿರಿ ನಗರದೊಳ್
ಪರಮಾನುಭವಗೋಷ್ಠಿಯಿಂ ಭಕ್ತಸಂಘಟವು ಕರುಣಾವಲೋಕನದೊಳು
ಪರಿಪಾಲಿಸುತ್ತಿರಲು ಬಸವತೀರ್ಥದ ಮಹಿಮೆ
ಗುರು ಚೆನ್ನಗಿರಿಲಿಂಗ ನಡೆಗೊಂಡು ಬಂದುದನು
ಧರಣೀಶ ಮಾಲೋಜಿ ಮಹರಾಜ ಕೇಳುತ್ತ ಪರಮ ಸಂತಸದಿಂದಲಿ ೨

ಘನಶಬ್ದಮಂ ಕೇಳ್ದ ನೀಲಕಂಠನ ತೆರದಿ
ಮನದೊಳಗೆ ಮುದವೇರಿ ಸರ್ವಮಾತ್ಯರಿಗರುಪಿ
ಮುನಿಚಂದ್ರ ಮಹಲಿಂಗ ಗುರುವರನ ಮಹಿಮೆಗಳ ನೋಡಲೋಸುಗ ಬೇಗದಿ
ವಿನಯದಿಂ ಚತುರಂಗ ಬಲಸಹಿತ ಮಹರಾಜ
ಘನಭಕ್ತಿಯಿಂ ಬಿಡದೆ ನಡೆಗೊಂಡನಾ ಪುರಕೆ
ವನಜಮುಖಿ ಗಿರಿಜಾತೆ ಲಾಲಿಸೆಂದೆನುತಾಗ ಪೇಳುತಿರ್ದನು ಶಂಕರ ೩

ಮುನ್ನಿನಂದದಿ ಸಕಲಸಂಭ್ರಮದಿ ಬಲಸಹಿತ
ಮನ್ನೆಯರ ಗಡಣದಿಂದೊಡಗೂಡಿ ಬರುತಿರಲು
ಚೆನ್ನಗಿರಿ ತೋರಿತ್ತು ಕಣ್ಗೆ ಮಂಗಳವಾಗಿ ಸುರಪುರವನೇಳಿಸುತಲಿ
ನನ್ನಿಯಿಂದಾ ನಗರದಕ್ಷಿಣದ ಭಾಗಸ್ಥ
ಬಿನ್ನಣದ ಶೈಲಾಗ್ರಮಧ್ಯದೊಳ್ ಸ್ಥಾಪಿಸಿದ
ಚೆನ್ನಗಿರಿ ಲಿಂಗದ ಮಹಾದುರ್ಗ ದೀರ್ಘದಿಂ ಮನಕೆ ಮಂಜುಲವಾದುದು ೪

ಕನಕಮಯ ಪ್ರಾಕಾರದೇಳ್ಗೆಯಿಂ ಕಲಧೌತ
ಮಿನುಪ ಕೊತ್ತಳಗಳಿಂ ಕೆಂಬವಳದಗಳೆಯಿಂ
ಘನ ಪದ್ಮರಾಗದಾಳ್ವೇರಿಯಿಂ ಮಣಿಖಚಿತ ಕನಕವಿಪ್ರದ ಸಂಗದಿಂ
ವಿನುತ ಹರಿನೀಲ ಮುಗಿಲಟ್ಟಣೆಗಳಿಂ ಪಚ್ಚ
ದೆನೆಗಳಿಂ ರಂಜಿಸುವ ಮಹದ್ವಾರದಿಂದಿಡಿದು
ಮನಕೆ ಮಂಜುಲವಾಗಿ ದುರ್ಗಮದು ತೋರಿತ್ತು ಕಣ್ಗೆ ಮಂಗಳವೀವುತ ೫

ಚಂದ್ರಮಂಡಲ ಕಂಡ ಕ್ಷೀರಾಬ್ಧಿಯಂತೆ ರಾ
ಜೇಂದ್ರ ಮುದವೇರುತ್ತ ಮನದಲ್ಲಿ ಮೌನಿಕುಲ
ಚಂದ್ರ ಮಹಲಿಂಗನಡಿದಾವರೆಯ ಧ್ಯಾನದಿಂ ತದ್ಗಿರಿಯ ತಪ್ಪಲದಲಿ
ಸಾಂದ್ರ ಚತುರಂಗಬಲಮಿಳಿಸುತ್ತ ಭರದಿಂದ
ರುಂದ್ರ ಮಹನಿಯರ ಸಂಕುಲಸಹಿತ ನಡೆಗೊಂಡು
ಇಂದ್ರಾದಿ ಸುರಸೇವ್ಯ ಶ್ರೀಚೆನ್ನಗಿರಿಲಿಂಗಪಾಲಯಕೆ ಸಂಭ್ರಮದಲಿ ೬

ಮುತ್ತಿನಿಂ ತೆತ್ತಿಸಿದ ಸೋಪಾನಗಳ ಸಿರಿಯ
ಚಿತ್ತದೊಳ್ ನಲವಾಂತು ಮಧ್ಯದೊಳಗುತ್ತಮದೊ
ಳುತ್ತಮದ ಶ್ರೀಶೈಲಮಿದುಯೆಂದು ನಂಬುತ್ತ ಮಹದುರ್ಗಮಂ ನೋಡುತ
ಬಿತ್ತರದ ದ್ವಾರಮಂ ಒಳಪೊಕ್ಕು ತದ್ಗಿರಿಯ
ನುತ್ತರಿಸಿ ಭಕ್ತಿಯಿಂ ನಡೆಯಲ್ಕೆ ಸಮ್ಮುಖದಿ
ಮೃತ್ಯುಹರನಾಲಯಂ ಕಾಣಿಸಿತು ಸೋಮರವಿಕೋಟಿಗಳ ತೆವರುತ್ತಲಿ ೭

ಕಂಗೊಳಿಸೆ ಮಾಲೋಜಿ ಭೂಪಾಲ ಭರದಿಂದ
ರಂಗಮಂಟಪದೆಡೆಗೆ ಬಂದು ಭಯಭಕ್ತಿಯಿಂ
ತುಂಗ ವೃಷಶೃಂಗದೊಳ್ವಾಮಹಸ್ತವನಿಟ್ಟು ತದ್ವೃಷಣಮಂ ಮುಟ್ಟುತ
ಹಿಂಗದಾ ಲಿಂಗಮಂ ನಿಟ್ಟಿಸುತ ಪೊಡಮಟ್ಟು
ಮಂಗಲ ಮಹಾಲಿಂಗ ಸ್ಥಾಪನದ ಮಹಿಮೆಯನು
ಅಂಗಜಾಂತಕ ಬಲ್ಲನೆನುತಿರದೆ ಬಲವಂದು ಕೊಂಡಾಡುತಾಕ್ಷಣದೊಳು ೮

ಅಲ್ಲಿಂದ ತನ್ನಗವನಿಳಿವುತ್ತ ನಡೆಗೊಂಡು
ಮೆಲ್ಲನಾ ಮಹನಿಯರನೊಡಗೊಂಡು ಮಹರಾಜ
ಸಲ್ಲಲಿತ ಪಶ್ಚಿಮದಿಶಾಭಾಗದೊಳಗಿರ್ಪ ಬಸವತೀರ್ಥವ ನೋಡಲು
ಉಲ್ಲಾಸದಿಂ ಚೆನ್ನಗಿರಿನಗರಮಂ ಬಳಸಿ
ಪುಲ್ಲಶರಹರರೂಪ ಮಹಲಿಂಗ ಮುನಿಪಾದ
ಪಲ್ಲವಂ ಕೀರ್ತಿಸುತ ಬಂದನಾಕ್ಷಣದಲ್ಲಿ ನಗಜಾತೆ ಲಾಲಿಸುವದು ೯

ಮಂದಗಾಮಿನಿಯರಾರಾಟದಿಂ ಶ್ರೀಪರಮ
ಚಂದನಾಂಗಿಯರ ಸಂಚಾರ ಸಂಭ್ರಮದಿಂದೆ
ನಿಂದು ನೀರ್ದುಂಬುತಿಹ ಸುಂದರೀಜನದಿಂದೆ ಸಂದಣಿಸುತೆಲ್ಲಾಗಳು
ಸಂದ ಶ್ರೀ ಬಸವತೀರ್ಥಮದೊಪ್ಪೆ ಮಹರಾಜ
ನಿಂದು ನೋಡುತ್ತಿರಲು ಚೆಂದವಾದುದು ಕಣ್ಗೆ
ಇಂದು ಬಣ್ಣಿಪನಾವ ಕಬ್ಬಿಗನು ಭೂತಳದಿ ತತ್ಕೂಪದುನ್ನತಿಯನು ೧೦

ಕಂಕಣಂ ಝಣರೆನಲ್ ಕರಕಂಜದೊಳ್ ಕುಂಭ
ಸಂಕುಳಗಳಂ ಪಿಡಿದು ನೀರ್ದುಂಬಿ ಬೆಡಗಿನಿಂ
ಅಂಕದಿಂದುತ್ತಮಾಂಗದೊಳು ನೆರೆ ಪೊತ್ತು ಕೆಲಬಲವನಾರಯ್ವುತಾಗ
ಕಂಕಣಸುಕೇಶಬಂಧನದ ಕರಿಗಮನೆಯರು
ಶಂಕಿಸದೆ ಹರಿನೀಲ ಸೋಪಾನಗಳನೇರಿ
ಬಿಂಕದಿಂ ಬರುತಿರ್ದರೇನೆಂದು ಬಣ್ಣಿಸುವೆ ತೀರ್ಥದುನ್ನತಿಯ ನಾನು ೧೧

ಬಡನಡುವು ಬಳ್ಕುತಿರೆ ಬಟ್ಟಮೊಲೆಯದುರುತಿರೆ
ನಿಡುಜಡೆಯು ಬೆನ್ನೊಳಗೆಯಾಡುತಿರೆ ಕಡೆಗಣ್ಣ
ಕುಡಿಮಿಂಚ ಸೂಡರು ಬಿತ್ತರಲಾಗ ಕನ್ನವುರಮುಳ್ಕಾಡೆ ಜಘನಂಗಳು
ಪೊಡರೆ ಕಾಲುಂಗುರಗಳೊದರುತಿರೆ ನಿರಿಗಳಂ
ಅಡಿಗಡಿಗೆ ಬೆಡಗಿನಿಂದೊದೆವುತ್ತ ಕಡವರದ
ಕೊಡಪೊತ್ತ ಚೆಲ್ವೆಯರ ಗಡಣದಿಂ ಕಂಗೊಳಿಸಿತಾ ತೀರ್ಥ ಭೂಪಾಲಗೆ ೧೨

ಕೊಡ ಮುಡಿಯ ಭಾರದಿಂ ಕೊರಳು ಕೊಂಕುತ್ತಿರಲು
ಬಡನಡುವು ಪೊಂಗೊಡದ ಮೊಲೆಯಿಂದೆ ಬಳ್ಕುತಿರೆ
ಪೊಡರುತಿಹ ವರಜಘನಮಂಡಲದಿ ಜಂಘೆಗಳು ಜಳ್ಗುತಿರೆ ನಡೆವುತ್ತಲಿ
ಬೆಡಗಿನಿಂದಾ ಪೌರ ಜಲಜಾಕ್ಷಿಯರು ಬಿಡವೆ
ಎಡೆಯಾಡುತಿರೆ ಬಸವತೀರ್ಥವೀಥಿಯೊಳಗಾ
ಪೊಡವಿಪತಿ ನೋಡುತ್ತ ಮನದಣಿಕೆ ಕೈಸಾರ್ದುದೆಂದಾಗ ಕೊಂಡಾಡುತ ೧೩

ನರಗಟ್ಟಿ ತಾನಳಿದು ಸಿರಿಗಟ್ಟಿಯಾಗಿಂದು
ಸುರಪುರವನೇಳಿಸಿತು ಶ್ರೀಗುರುವಿನಾಜ್ಞೆಯಿಂ
ಧರೆಯೊಳಗೆ ನಾ ಧನ್ಯನಿಂದಾಗ ಸಾತ್ವಿಕದ ಭಕ್ತಿಯಿಂ ನಲವೇರುತ
ಪರಮ ಭಾಗೀರಥಿಯ ಜಲವೆಂದು ಮನದೊಳಗೆ
ನೆರೆ ನಂಬಿ ಬಸವತೀರ್ಥಾಂಬುವಂ ಬಲ ಸಹಿತ
ನಿರುತದಿಂ ಸೇವಿಸುತ ಬಂದನಲ್ಲಿಂ ಬಳಿಕ ನಡೆಗೊಂಡು ತತ್ಪುರದೊಳು ೧೪

ಸೋಮ ರವಿ ವೀಥಿಗಳ ಸಂಭ್ರಮವ ನೋಡುತ್ತ
ಪ್ರೇಮದಿಂ ಮಹಲಿಂಗನಾಶ್ರಮವನೊಳಪೊಕ್ಕು
ಭೂಮಿಪತಿ ಮೈಯಿಕ್ಕಿ ಕರಕಂಜವಂ ಮುಗಿದು ಭಕ್ತಿಯಿಂ ಕೊಂಡಾಡಿದಂ
ಹೇಮಗರ್ಭಾದಿ ಸುರಸ್ತೋಮಸೇವಿತಪಾದ
ಕಾಮಮದಕಾಂತಾರಭೀಮ ಮಂಜುಲನಾಮ
ಸ್ವಾಮಿ ಶಾಶ್ವತ ಸುಗುಣಧಾಮ ಭವಗಿರಿಭೀಮ ಪಾಲಿಪುದು ಕಾರುಣ್ಯದಿಂ ೧೫

ಕಾಂಚನಲತಾಭಾಸಮಂಚಿತಜಟಾಪಟಲ
ಕಾಂಚನಾಚಲಧಾಮ ಕಾರುಣ್ಯನಿಧಿ ಭೀಮ
ಸಂಚಿತಾದಿವಿನಾಶ ಸರ್ವೇಶ ಸನಕಾದಿಮುನಿಜಾಲಸಂಪೂಜಿತ
ಪಂಚವರ್ಣಾಂಕ ಕರುಣಾಕರ ಮಹೇಶಗುಣ
ಸಂಚಯಾನತಭಕ್ತ ¹[ವಾ]¹ಂಛಿತದವ್ರದಹಸ್ತ
ಪಂಚಬಾಣವಿನಾಶ ಪರಮೇಶ ಪಾಲಿಪುದು ಮಹಲಿಂಗ ಗುರುವರ್ಯನೆ ೧೬

ಧರೆಯೊಳಗೆ ನಿಮ್ಮ ಘನಮಹಿಮೆಯಂ ಬಣ್ಣಿಪೊಡೆ
ಸರಸಿಜಾನನ ಬೃಹಸ್ಪತಿಗಳಿಗೆ ವಶವಲ್ಲ
ಗುರುವರನೆ ಶ್ರೀಮೋದಪುರಕಿಂದು ದಯಮಾಡಿ ಮದ್ಭಕ್ತಿಭಿನ್ನಪವನು
ಕರುಣದಿಂ ಕೈಕೊಂಡು ಸದ್ಭಕ್ತಸಂತತಿಯು
ಪರಿಪಾಲಿಸುತ್ತಲ್ಲಿ ಪರಿಣಾಮದಿಹುದೆಂಬ
ನರಪತಿಯ ವದನಾರವಿಂದಮಂ ನೋಡುತ್ತ ಮುನಿಚಂದ್ರನಿಂತೆಂದನು ೧೭

ಚಿನ್ನಕ್ಕೆ ಬಣ್ಣಕ್ಕೆ ಪುಷ್ಪಕ್ಕೆ ಪರಿಮಳಕೆ
ಭಿನ್ನಗುಣವೆಲ್ಲಿಹುದೊ ಮಾಲೋಜಿ ಭೂಪಾಲ
ನನ್ನಿಯಿಂದದರಂತೆ ನಿನ್ನಸಮಭಕ್ತಿಯೊಳ್ ಬೇರ್ಪಡಿಸದೀ ಜಂಗಮಂ
ಚೆನ್ನಗಿರಿಮಧ್ಯದಲಿ ತಂತುಪಟನ್ಯಾಯದೊಲ್
ಮನ್ನಣೆಯ ಜಗಮರಿಯೆ ಪರಿಣಾಮಿಸುತ್ತಿರಲು
ಇನ್ನಿದಕೆ ಸಂದೇಹಮಿಲ್ಲೆಂಬ ಮುನಿವರನ ನುಡಿಗೇಳುತಾಕ್ಷಣದೊಳು ೧೮

---

೧ ಲಾ ( ಕ. ಚ. )

ಕಮಲಪರಿಮಳವಿರ್ದ ವನದೆಡೆಗೆ ಭ್ರಮರಗಳು
ಅಮಿತ ಪಣ್ಗೊನೆಯಾಂತ ಮಾಮರಕೆ ಗಿಳಿವಿಂಡು
ವಿಮಲ ತಳಿರಂಗಳಿಂಬಿಡಿದಿರ್ದ ಬನಕೆ ಮೋಹಿಸುವಂತೆ ಕೋಗಿಲೆಗಳು
ಕ್ರಮದಿಂದೆ ಬಂದು ಪರಮಾನಂದದಿಂದಲ್ಲಿ
ರಮಿಸಿರ್ಪುವೆಲೆ ದೇವ ಮಹಲಿಂಗ ಬಳಿಕಿನ್ನು
ಪ್ರಮದೆಯರ ಬಳಿಗೆ ಪುರುಷೋತ್ತಮರು ಬರ್ಪುದೇ ಸನ್ಮಾರ್ಗ ಭೂತಳದೊಳು ೧೯

ಅದರಂತೆ ತತ್ಪಾದಸೇವಕನ ಪಾಲಿಸುವ
ಸದಮಲದ ಕಾರುಣ್ಯಭಾವದಿಂದೆಡೆವಿಡದೆ
ಮುಧುಳಕ್ಕೆ ದಯಮಾಡಬೇಕೆಂದು ಬಿನ್ನೈಪ ಮಾಲೋಜಿ ಭೂಪಾಲನ
ವಿದಿತ ವಿನಯೋಕ್ತಿಗಳ ಕೇಳುತ್ತ ಮನಮೆಚ್ಚಿ
ಮದನಹರ ಮಹಲಿಂಗ ಮಂದಸ್ಮಿತಾನನದಿ
ಇದಿರುತ್ತರಿಲ್ಲಿಹುದು ಸದ್ಭಕ್ತರಾಚರಣೆಗಿದು ಸತ್ಯವೆಂದೆನುತಲಿ ೨೦

ಸತ್ಯಭಕ್ತರ ಮನವನೊತ್ತಿ ನೋಡುವದೇನು
ಮೃತ್ಯುಹರನಾಜ್ಞೆ ನಿನಗಾದಂತೆ ಇರ್ದಪುದು
ನಿತ್ಯವೆಂದೆನುತಾಗ ಮಹಲಿಂಗ ಕರುಣದಿಂ ಪರಸಲ್ಕೆ ಮಹರಾಜನು
ಶ್ರುತ್ಯಾಗಮಾತೀತ ಮಹಪುರುಷನಾಗಮನ
ಕೃತ್ಯಕ್ಕೆ ಮೋದಪುರ ಶೃಂಗರಿಸಬೇಕೆಂದು
ಭೃತ್ಯರಿಗೆ ಸೂಚಿಸುತ ಕಳುಹಲ್ಕಮಾತ್ಯರಾರಂಭಿಸಿದರಾ ಪುರದೊಳು ೨೧

ಕತ್ತುರಿಯ ಸಾರಣೆಯ ಕುಂಕುಮದ ಕಾರಣೆಯ
ಬಿತ್ತರದ ತೋರಣದ ಬೀದಿಗಳ ವಾರಣದ
ಚಿತ್ತರದ ಭಿತ್ತಿಗಳ ಪನ್ನೀರ ಚಳೆಯಗಳ ಪರಿರಮ್ಯವಾಗೊಪ್ಪುವ
ಇತ್ತರದ ಕನ್ನಡಿಯ ಮುತ್ತಿನ ಸುಕಳಸಗಳ
ಸುತ್ತಿಡಿದ ಫಲಭಾರಗಳ ಮೊತ್ತದಿಂದಿರದೆ
ಎತ್ತ ನೋಡಿದಡತ್ತ ಕಣ್ಗೆ ಮಂಗಳವಾದುದೇನೆಂಬೆನಾ ಪಟ್ಟಣಂ ೨೨

ಇಂತಸವು ಮೋದಪುರ ಸಂಭ್ರಮಿಸಿ ಬಿಡದೆ ತದ
ನಂತರದಿ ಚೆನ್ನಗಿರಿಪರಿಯಂತ ಗಾವುದದಿ
ಸಂತಸದಿ ತಂಪಿನಿಂದಿಡಿದಿರ್ದ ಹಂದರವ ನಿರ್ಮಿಸಿದರಾ ಕಾಲದಿ
ಅಂತರಿಸದಲಿ ಕದಳಿ ತರುಗಳಿಂದಿಕ್ಷುವಿನ
ಸಂತತಿಯು ಲಾವಂಚ ಪಲ್ಲವ ಲತಾಂತಗಳ
ಪಂತಿಯಿಂ ಪರಿರಮ್ಯವಾಗಿರ್ದುದಾ ಪಥಂ ಬಣ್ಣಿಸುವೊಡರಿದಾದುದು ೨೩

ಜಡಜಸಖಕಿರಣಗಳ ಪೊಗಗೊಡದ ಜೊಂಪಿನಿಂ
ಎಡೆವಿಡದೆ ತೀಡುತಿಹ ಮಾರುತನ ತಂಪಿನಿಂ
ಕಡುರಮ್ಯವಾಗಿರ್ದ ಪಲ್ಲವಲತಾಂತಗಳ ಸೊಂಪು ಕೆಂಪುಗಳಿಂದಲಿ
ಇಡಿಕಿರಿದ ಫಲಭಾರಗಳ ಇಂಪಿನಿಂ ಬಿಡದೆ
ಪ್ಪೃಡರೂಪ ಮಹಲಿಂಗನಾಗಮನ ಸನ್ಮಾರ್ಗ
ಸಡಗರಸಿ ತೋರಿತ್ತದೇನೆಂದು ವರ್ಣಿಪೆನು ಭೂಭಾಗದೊಳ್ ಸಂತತಂ ೨೪

ಸಿಂಗರಿಸಿ ಮಂತ್ರಿಗಳು ಬಂದರುಹಲಾಕ್ಷಣಂ
ಮಂಗಲೋತ್ಸಹದಿಂದೆ ಮಾಲೋಜಿ ಮಹರಾಜ
ನಂಗಜಾಂತಕರೂಪನಂಘ್ರಿಗಳಿಗೆರಗುತ್ತನಂತ ಭಯಭಕ್ತಿಯಿಂದ
ತುಂಗ ಕರಕಂಜಗಳ ಮುಗಿವುತ್ತ ಮನ್ನಾಥ
ಜಂಗಮೋನ್ನತಚಂದ್ರ ಕಾಲಹರ ಕಮಾಳಿ
ಭಂಗ ವಿಜಯಂಗೈವುದೆಂದೆನುತ ನಲವೇರಿ ಕೊಂಡಾಡುತಾ ಸಮಯದಿ ೨೫

ಮುಕ್ತಿಕಾಂತನ ಕರಿವ ಪರಮ ಸಂತಸದಿಂದೆ
ಭಕ್ತಿಭಾಮಿನಿ ಪಿಡಿದಳೆಂಬಂತೆ ನರನಾಥ
ಭಕ್ತಿಯಿಂ ಮುನಿಚಂದ್ರಮನ ಪಾಣಿಪಲ್ಲವಂ ಗ್ರಹಿಸುತ್ತ ತದನಂತರಂ
ವ್ಯಕ್ತ ಕಲಧೌತಮಯದಂಡಳದ ಮಧ್ಯದೊಳ್
ಯುಕ್ತಿಯಿಂ ಮೂರ್ತಿಗೊಳಿಸುತ್ತಸವು ಬಲಸಹಿತ
ಮುಕ್ತಾತಪತ್ರದಿಂ ಶ್ರೀಚೆನ್ನಗಿರಿ ಬಿಟ್ಟು ಸಕಲ ಸಂಭ್ರಮದಿಂದಲಿ ೨೬

ಭೇರಿ ತಮ್ಮಟೆ ಕಹಳೆ ನಿಸ್ಸಾಳಗಳ ಶಬ್ದ
ಭೋರಿಡುತ ದಿಕ್ತಟದಿ ಪೂರೈಸಲಾಕ್ಷಣದಿ
ಮಾರಹರ ಮಹಲಿಂಗನಂದಳದ ಕೆಲಬದಿ ಸಂದಣಿಸುತತಿ ಭಕ್ತಿಯಿಂ
ಧಾರುಣೀಪತಿ ತನ್ನ ಚತುರಂಗ ಬಲಸಹಿತ
ಭೂರಿಸಂಭ್ರಮದಿಂದೆ ರಾಜಿಪಾ ಹಂದರದ
ಸಾರತರ ತಂಪಿನೊಳ್ ಶ್ರೀಮೋದಪುರದತ್ತ ನಡೆಗೊಂಡನಾ ಕಾಲದಿ ೨೭

ಮರಕತದ ತೋರಣವ ಮಹಲಿಂಗ ರಾಜನಿಗೆ
ಹರುಷದಿಂ ಭೂಕಾಂತೆ ನೆರೆಪಿಡಿದಳೆಂಬಂತೆ
ಪರಿರಾಜಿಸುತ್ತಿರ್ಪ ಹಂದರದಿ ಬರುತಿರಲವರು ಮೇಚರಾಂಗಣದೊಳು
ಹರಿಬ್ರಹ್ಮ ಮೊದಲಾದ ಸುರಕುಲದ ಮುಖ್ಯರೊಳ್
ಗಿರಿಜಾತೆ ಸಹಿತಂದು ತನ್ಮಹಿಮನಾಗಮನ
ಪರಮೇಶ ನೋಡಿ ಮನ್ಮನವೆಣಿಕೆ ಕೈಸಾರ್ದುದೆಂದೆನುತ ಕೊಂಡಾಡಿದಂ ೨೮

ಜಂಗಮದ ಲೀಲೆಯಿದು ಮಾಜಗದಿ ನಿಜವಾಯ್ತು
ಮಂಗಲೆಯೆ ನೋಡೆಂದು ಗಗನಾಂಗಣದಿ ನಿಂದು
ತುಂಗ ನಂದೀಶಾದಿ ಪ್ರಮಥರಿಗೆ ತೋರುತ್ತ ಬಣ್ಣಿಸುತ್ತಿರುತಿರ್ದ್ದಲು
ಅಂಗಜಾಂತಕರೂಪ ಮಹಲಿಂಗನೊಡಗೊಂಡು
ಮಂಗಲೋತ್ಸವದಿಂದೆ ಮಹರಾಜ ಬರುತಿರಲು
ಕಂಗೊಳಿಸಿ ಸಮ್ಮುಖದಿ ಶ್ರೀಮೋದಪುರಮೆರೆದುದೇನೆಂದು ಕೀರ್ತಿಸುವೆನು ೨೯

ಸುರಲೋಕದುನ್ನತಿಯು ಜರಿವ ಸಂಭ್ರಮದಿಂದೆ
ಮೆರೆಯುತಿಹ ತತ್ಪುರದ ಬಹಿರೋಪಕಂಠದೊಳ್
ಬರುತಿರಲು ಚತುರಂಗಬಲಸಹಿತ ಮಹಪುರುಷನಂದಳದ ಕೆಲಬಲದಲಿ
ಭರದಿಂದೆ ಭೋರ್ಗರೆವ ವಾದ್ಯಗಳ ನಾದ ದಿ
ಗ್ಧರೆಯಲ್ಲಿ ಪೂರೈಸುತಿರಲಾಗ ಸಮ್ಮುಖದಿ
ಹರುಷದಿಂ ಕಹಳೆಗಳು ಧ್ವನಿಗೆಯ್ಯಲೆಡೆವಿಡದೆ ಕೇಳ್ವರಿಗೆ ಸೊಂಪಾಗಲು ೩೦

ಬಂದನಿದೆ ಬಂದನಿದೆ ಮಹಲಿಂಗಪುರನಾಥ
ಬಂದನಿದೆ ಬಂದನಿದೆ ಮಾಲೋಜಿವರದಾತ
ಬಂದನಿದೆ ಬಂದನಿದೆ ಚೆನ್ನಗಿರಿಲಿಂಗವನು ನಡೆಸಿರ್ದ ಘನಮಹಿಮನು
ಬಂದನಿದೆ ಬಂದನಿದೆ ಪರಮ ಜಗದಾರಾಧ್ಯ
ಬಂದನಿದೆ ಬಂದನಿದೆ ನಿಗಮಾಗಮಾಭೇದ್ಯ
ಬಂದನಿದೆ ಶ್ರೀಮೋದಪುರಕೆಂದು ಕಹಳೆಗಳು ಚೀರಿದವು ಮುಂದೆಸೆಯೊಳು ೩೧

ಬಂದನಿದೆ ಭವಸಾಗರೋತ್ತರಣಘನಛೈತ್ರ
ಬಂದನಿದೆ ಸದ್ಭಕ್ತಸಂಜಾತವನಚೈತ್ರ
ಬಂದನಿದೆ ಮಾಯಕೋಲಾಹಾಲನೆಂದೆನಿಪ ಮಹಲಿಂಗ ಭೂರುದ್ರನು
ಬಂದನಿದೆ ಕಾಲಕರ್ಮಾರಣ್ಯದಾವಾಗ್ನಿ
ಬಂದನಿದೆ ಮಾರಮದಮತ್ತೇಭಪಂಚಾಸ್ಯ
ಬಂದನಿದೆ ಕಲ್ಕುದುರೆ ಶಿವನಮನೆ ರಾವುತರ ಪುರಕೆಂದು ಭೋರ್ಗರೆವುತ ೩೨

ಕಾಳೆಗಳು ಚೀರುತಿರೆ ತತ್ಪೌರಜನರೆಲ್ಲ
ಕೇಳುತ್ತ ಭಕ್ತಿಯಿಂ ಸಂತೋಷಜಲಧಿಯೊಳ
ಗಾಳುತ್ತಲೇಳುತ್ತ ಬಂದು ಸಾಷ್ಟಾಂಗದಿಂದೆರಗುತ್ತ ಕರಕಂಜವಂ
ಭಾಳದೊಳು ಮಡಗುತ್ತ ತಮತಮಗೆ ಮನವೊಲಿದು
ಬಾಲಚಂದ್ರಕಿರೀಟ ಜಯತೆಂದು ಕೀರ್ತಿಸಲು
ಬಾಲೆಯರು ಮುತ್ತಿನಾರುತಿಗಳಂ ಬೆಳಗಿದರು ಮುನಿವರನ ಸಮ್ಮುಖದೊಳು ೩೩

ಆ ಪುರದ್ವಾರಮಂ ಒಳಪೊಕ್ಕು ಸಂಭ್ರಮದಿ
ಮಾಪಶರರೂಪನಂದಳದ ಕೆಲಬಲದಲ್ಲಿ
ಭೂಪತಿಯು ಮನ್ನೆಯರನೊಡಗೊಂಡು ಬರುತಿರಲು ತತ್ಪುರದ ಕಾಂತಾಜನಂ
ಸೈಪಿನಿಂ ಭವ್ಯಹರ್ಮ್ಯಾದಿಗಳನೇರಿ ಸುಕ
ಲಾಪಗಳ ಭಾರದಿಂ ಬಳುಕುತ್ತ ಸುರಪುರದ
ರೂಪಜೀವಿಯರಂತೆ ನಿಂದು ನೋಡುತ್ತಿರ್ದರಾ ಮಹಿಮನಾಗಮನವ ೩೪

ಬಿಡುಮುಡಿಯ ಮಲ್ಲಿಗೆಯ ಮುಗುಳುಗಳು ಸೂಸುತಿರೆ
ಕಡೆಗಣ್ಣುಗಳ ಕಾಂತಿ ಕುಡಿಮಿಂಚ ಬೀರುತಿರೆ
ತೊಡೆಗಳತಿಭಾರಕ್ಕೆ ಸರ್ವಾಂಗ ಬಳ್ಕುತಿರೆ ಬಡನಡುವಿನಬಲಾಜನಂ
ಕಡವರದ ಸೌಧಗಳನೇರುತ್ತ ತಮತಮಗೆ
ವೃಡರೂಪ ಮಹಲಿಂಗ ಜಡೆಯ ಜಂಗಮವರನ
ಸಡಗರವ ನೋಡುತ್ತ ಕರಜಡಜಗಳ ಮುಗಿದು ಬೆಡಗಿನಿಂ ಬಣ್ಣಿಸಿದರು ೩೫

ಅಂಜನವ ಭಾಳದೊಳ್ ಕತ್ತುರಿಯ ನೇತ್ರದೊಳ್
ಅಂಜನದ ಮಾಲೆಯಂ ಗಳದಲ್ಲಿ ಮೌಕ್ತಿಕದ
ರಂಜಿತ ಸುಹಾರಮಂ ಮುಡಿಯಲ್ಲಿ ಕುಂಕುಮವನಂಗದೊಳು ಶ್ರೀಗಂಧಮಂ
ಮಂಜುಲಸ್ತನದಲ್ಲಿ ಕಂಕಣವ ಚರಣದೊಳ್
ಪಿಂಜರಿಯ ಕಾಲ್ಗಡಗ ಮುಂಗೈಯೊಳಂ ತಳೆದು
ನಂಜುಗೊರಲನ ರೂಪ ಪೋಪನೆಂದಾತುರದಿ ಬಂದು ನೋಡಿದಳಾಕ್ಷಣಂ ೩೬

ಕೆಳದಿಯರು ತತ್ಸತಿಯ ಶೃಂಗರವ ನೋಡುತ್ತ
ನಲಿದು ಘನಮುಗ್ಧೆಯೆನುತಾಗ ನಗುನಗುತಿರಲು
ಇಳೆಯೊಳ್ಸಂಪೂಜ್ಯನಂಧ್ಲಳಂ ಮುಂದೆಸೆಗೆ ಬರುತ್ತಿರಲು ಸಂಭ್ರಮದೊಳು
ಬಳಿಕೊಂಡು ಕಲಧೌತ ಸೌಧಾಗ್ರದೊಳಗೋರ್ವ
ಜಲಜಾಕ್ಷಿ ಮಹಲಿಂಗನಾರೆಂದು ನಿಜಸಖಿಯ
ಒಲವಿನಿಂ ಬೆಸಗೊಳಲ್ ಕೈಸನ್ನೆಯುಂ ತೋರಿ ಬಣ್ಣಿಸಿದಳಾ ಮಹಿಮನ ೩೭

ಈತನೇ ಕೈಲಾಸದಿಂ ಬಂದ ಚರನಾಥ
ನೀತನೇ ಸಕಲ ಕ್ಷೇತ್ರಾಳಿಗಳ ಗೈದಾತ
ನೀತನೇ ಸಪ್ತಶತವರುಷಪರ್ಯಂತರಂ ಬಾಳ್ದಸಮುತ್ಕಿವ್ಯಾಂಕನು
ಈತನೇ ಮುಪ್ಪಿನಪ್ಪನ ಭಕ್ತಿಗೊಲಿದಾತ
ನೀತನೇ ರುದ್ರಮ್ಮನಕ್ಷಿಯಂ ಕೊಟ್ಟಾತ
ನೀತನೇ ನೃಪನಾನೆಯಿಂ ಮಡಿದ ಗಂಗಾತ್ಮಜಗೆ ಪ್ರಾಣವಿತ್ತಾತನು ೩೮

ಈತನೇ ಮಾಲೋಜಿ ವರದಾತ ಸಂಪೂಜ್ಯ
ನೀತನೇ ಪರಮ ಮಹಲಿಂಗಪೌರಾಧೀಶ
ನೀತನೇ ಶ್ರೀಬಸವತೀರ್ಥಮಂ ಸತ್ವರದಿ ನಿರ್ಮಿಸಿದ ಗುರುವರ್ಯನು
ಈತನೇ ಚೆನ್ನಗಿರಿಲಿಂಗಮಂ ನಡೆಗೊಳಿಸಿ
ಪ್ರೀತಿಯಿಂ ಸ್ಥಾಪಿಸಿದ ಘನಮಹಿಮನಂದಳದಿ
ಖ್ಯಾತಿಯಿಂ ಬರ್ಪನಿದೆ ನೋಡೆಂದು ತೋರಲ್ಕೆ ಕೈಮುಗಿದಳಾ ಬಾಲೆಯು ೩೯

ಇಂತು ಕಾಂತಾಜನಂ ಕೊಂಡಾಡೆ ವಂದಿಗಳು
ಸಂತಸದಿ ಕೈವಾರಿಸುತ್ತಿರಲು ಸಮ್ಮುಖದಿ
ನಿಂತು ವೇಶ್ಯಾಜನಂ ನರ್ತಿಸುತ್ತಿರಲಾಗ ಮಾಲೋಜಿ ಭೂಕಾಂತನು
ಸಂತಸದಿ ಸೇವಿಸುತ್ತಾ ಮಹಿಮನೆಡಬಲದಿ
ಅಂತರಿಸದಲೆ ಬರಲು ಪುಣ್ಯಾಂಗನಾವೀಧಿ
ಮುಂದೆ ಕಂಗೊಳಿಸಿತ್ತು ಮನಕೆ ಮಂಜುಲವಾಗಿ ಬಣ್ಣಿಸುವ ಕವಿಯಾವನು ೪೦

ಮಾರರಾಜನ ಮಹಾಸಾಮ್ರಾಜ್ಯದಂತೆಸೆವ
ವಾರನಾರಿಯರು ವಿಪಣಿಯೊಳು ಬರುತಿರಲು ಶಮ
ನಾರಿ ಮಹಲಿಂಗನಾಗಮಸಂಭ್ರಮವ ನೋಡಲುಜ್ಜುಗಿಸಿ ಸಂಭ್ರಮದೊಳು
ದ್ವಾರಗಳ ಮುಂದಿರ್ಪ ಪೊಂಜಗುಲಿಗಳ ನೆಮ್ಮಿ
ವಾರಿದುರುಬಿನ ಪರಮ ವೈಯಾರಿಗಳು ನಿಂದು
ವಾರದಿಂದಪ್ಸರೆಯ ತೆರದಿ ನೋಡಿದರಾಗ ತನ್ಮಹಿಮನುನ್ನತಿಯನು ೪೧

ಕಲಕೀರವಾಣಿಯರ್ ಕಾಳಾಹಿವೇಣಿಯರ್
ಕಲಭಮೃದುಯಾನೆಯರ್ ಕಮನೀಯಗಾನೆಯರ್
ಕಲಿತಕರವದನೆಯರ್ ವಿಲಸಿತದರದನೆಯರ್ ಕರಿಕೋಶವಕ್ಷೋಜೆಯರ್
ಜಲಜನಿಭಪಾಣಿಯರ್ ವಿಟಜನಪ್ರಾಣಿಯರ್
ಕಲಧೌತಗಾತ್ರೆಯರ್ ಕಂಜಾಭನೇತ್ರೆಯರ್
ಬಲು ಬಿಂಕದಿಂ ಬಂದು ಹರ್ಮ್ಯಾಗ್ರದೊಳ್ ನಿಂದು ನಿಟ್ಟಿಸಿದರಾ ಮಹಿಮನಂ ೪೨

ಮುನಿಜಾಲಪಂಚಾಸ್ಯನೆಲ್ಲಿರ್ಪನೆಲೆ ಸಖಿಯೆ
ಮನಸಿಜನ ಮದ್ದಾನೆ ನೀನೆಂತು ನಿಟ್ಟಿಸುವೆ
ಘನಮಹಿಮಕುಲಚಂದ್ರನಂ ತೋರ್ಪುದೆಲೆ ಕೆಳದಿ ವನಜಾಕ್ಷಿಯೆಂತೀಕ್ಷಿಪೆ
ವನಿತೆಮಣಿ ಜಂಗಮೇಂದ್ರನ ಕಾಣಿಸೆನಗಿಂದು
ಅನುಪಮದ ಗಿರಿಜಘನೆ ನೀನೋಳ್ಪುದಚ್ಚರಿಯು
ಎನುತ ಕುಶಲೋತ್ತರವನಾಡುತ್ತ ನೋಡಿದರು ತನ್ಮಹಿಮನೊಂದೆಡೆಯೊಳು ೪೩

ಈ ಮಹಿಮನಂ ನೋಳ್ಪಡಕ್ಷಿಗಳು ನನಗೆ ಸು
ತ್ರಾಮನಂತಿರಲಿಲ್ಲ ಎಲೆ ಕೆಳದಿ ಭಕ್ತಿಯಿಂ
ದೀಮಹಿಮನಂಘ್ರಿಗಳ ಬಹುವಿಧದಿ ಪೂಜಿಪಡೆ ಬಾಣನೊಲ್ ಹಸ್ತಂಗಳು
ಈ ಮಹಿಮನಂ ಬಣ್ಣಿಪಡೆ ಬಿಡದೆ ಜಿಹ್ವೆಗಳು
ಭೂಮಿಯಸು ತಳೆದನೋಲಿರಲಿಲ್ಲವೆಂದೆನುತ
ಹೇಮಗರ್ಭನ ಜರೆದು ಮತ್ತೋರ್ವ ಉತ್ತಮೆಯು ಕೀರ್ತಿಸಿದಳಾ ಮುನಿಪನ ೪೪

ಇಂತು ವೇಶ್ಯಾಜನಂ ತಮತಮಗೆ ಭಕ್ತಿಯಿಂ
ಸಂತಸದಿ ನೋಡುತ್ತ ಕೊಂಡಾಡುತಿರಲಾಗ
ಕಂತುಮದಮರ್ದನ ಮಹಾಲಿಂಗನಂದಳಂ ಬರುತಿರಲು ಮುಂದೆಸೆಯೊಳು
ಸಂತತಂ ಸೋಮ ರವಿಕೋಟಿಗಳ ಕೀಳ್ಪಡಿಪ
ಕಾಂತಿಯಿಂ ಕಂಗೊಳಿಪ ಘನ ದುರ್ಗದ್ವಾರಗಳ
ಸಂತತಿಯನುತ್ತರಿಸಿ ಭೂಕಾಂತನಾಲಯುವನೊಳಪೊಗಲು ಸಂಭ್ರಮದಲಿ ೪೫

ಮಾಲೋಜಿ ಮಹರಾಜನಾ ಸಮಯದೊಳು ದಿವ್ಯ
ಮಾಲಿಂಗನಂದಳವನಿಳಿಸುತ್ತ ಭಕ್ತಿಯಿಂ
ದಾಲೋಲ ಕನಕಮಯ ಘನಸಭಾಮಂಟಪದ ಮಧ್ಯದೊಳು ಕಂಗೊಳಿಸುವ
ನೀಲಮಯ ಮೃಗಪೀಠದೊಳ್ಮೂರ್ತಿಗೊಳಿಸಲ್ಕೆ
ಬಾಲೆಯರ ಗಡಣದಿಂ ತದ್ರಾಜನರ್ಧಾಂಗಿ
ಲೀಲೆಯಿಂ ಬಂದಳಂಗಜನಾನೆ ಬಂದಂತೆ ನಿತ್ಯನಿರುಪಮನ ಚರಕಂ ೪೬

ಮುತ್ತಿನಾರುತಿ ಪಿಡಿದು ಮಹರಾಜನರ್ಧಾಂಗಿ
ವೃತ್ತಸ್ತನದಭಾರದಿಂ ಬಳ್ಕುವಂತಾಗ
ಚಿತ್ತಜಾಂತಕನಂಘ್ರಿಗಳಿಗೆರಗಿ ಬೆಳಗುತ್ತ ಜಯತೆಂದು ಕೊಂಡಾಡಲು
ಮತ್ತಗಜಗಮನೆಯರು ತಮತಮಗೆ ಕೈಮುಗಿಯೆ
ಬಿತ್ತರದ ಚತುರಂಗಬಲಕೆ ಬೀಳ್ಕೊಟ್ಟು ನೃಪ
ನತ್ತ ಸುಖಮಿರ್ದನಾ ಮಹಿಮನಂ ಓಲೈಸಿ ಗಿರಿಜಾತೆ ಲಾಲಿಸುವದು ೪೭

ಆ ರಾತ್ರಿಕಾಲದೊಳ್ ಮಾಲೋಜಿ ಮಹರಾಜ
ಮಾರಾರಿ ಮಹಲಿಂಗ ಮುನಿಪೋತ್ತಮನ ಚರಣ
ನೀರೇಜಗಳನಪ್ಪಿ ನಿಜಪತ್ನಿಯೊಡಗೂಡಿ ನಿಗಮಾಗಮೋಕ್ತಂಗಳ
ಸಾರೋನ್ನತಿಯನರಿದ ಶೈವಪೂಜೆಗಳಿಂದ
ಪೂರೈಪ ಸಾತ್ವಿಕದ ಭಕ್ತಿಯುದ್ರೇಕದಿಂ
ದಾರೈದು ಪೂಜಿಸುತ್ತಿರ್ದನಾ ಭೂಪಾಲನೇಂ ಧನ್ಯನೋ ಜಗದೊಳು ೪೮

ಜಲ ಗಂಧ ತಿಲ ತಂಡುಲಾದ್ಯಷ್ಟವಿಧಪೂಜೆ
ಬಳಿವಿಡಿದು ಮಾಡುತ್ತ ಒಲವಿಂದ ನಮಿಸುತ್ತ
ಒಲಿದು ಕೊಂಡಾಡುತ್ತ ಘನಮಹಿಮನಂಘ್ರಿಯೊಳ್ ತನುವನೀಡಾಡುತ್ತಲಿ
ಇಳೆಯಾಣ್ಮ ಸಾತ್ವಿಕದ ಭಕ್ತಿಸಾಗರದಲ್ಲಿ
ಮುಳುಗುತ್ತ ಮನವ ಮರೆದಿರಲು ತದ್ವಾರ್ತೆಯಂ
ನಲಿದು ಭೂತಳದಲ್ಲಿ ಪೇಳುವಂತಾಕ್ಷಣದಿ ಬೀರಿತ್ತು ಮುಂಗೋಳಿಯು ೪೯

ಮುನಿಪೋತ್ತಮನ ಪಾದಪದ್ಮ ಸುರಭೂರುಹದಿ
ಜನಪತಿಯ ಭಕ್ತಿಸುರವಲ್ಲರಿಯು ಕುಡಿವರಿದು
ಕೊನರಿ ಬೇರ್ವಡಿಸದಲಿ ಬೆಚ್ಚಂತೆ ಪರ್ಬುತ್ತ ನನೆಯೇರಿ ಫಲವಾದುದು
ಮನವೊಲಿದು ನಾನೋಳ್ಪೆನೆಂದೆನುತೆ ಜಗಮರಿಯೆ
ಮನಸಿಜಾಂತಕ ದಕ್ಷಿಣಾಕ್ಷಿಯಂ ತೆರೆದಂತೆ
ದಿನಪನುದಯಾಚಲದ ತುದಿಯಲ್ಲಿ ಮಿನುಗುತ್ತ ಮೆರೆದಿರ್ದನಾ ಸಮಯದಿ ೫೦

ಭರದಿಂದೆ ಮಂತ್ರಿಪತಿ ಕರಕಂಜಗಳ ಮುಗಿದು
ಧರಣೀಶ ಮುನ್ನವೇ ನೀವು ನಿರವಿಸಿದಂತೆ
ವರ ಶಿಲ್ಪ ಶಾಸ್ತ್ರೋಕ್ತದಿಂ ಕುಸುರಿಗೆಲಸಗಳ ರಚಿಸುತ್ತ ರಸಿಕತ್ವದಿಂ
ಪರಮ ಛಾತ್ರಮನಿರದೆ ಬಂಧಿಸಿದ ಭಣತಿಯದು
ಸುರಪುರದ ಘನವಿಶ್ವಕರ್ಮಗರಿದಾಯ್ತಂತು
ಪರಿಯಿಂದ ಪರಿರಮ್ಯವಾಗಿರ್ಪುದೆಲೆ ಜೀಯ ಬಣ್ಣಿಸುವರಾರಿಳೆಯೊಳು ೫೧

ಎಂದೆಂಬ ಮಂತ್ರಿಪನ ನುಡಿಗೇಳಿ ಮಹರಾಜ
ನಂದು ಸಂತೋಷಯುತನಾಗುತ್ತ ಮನದೊಳಗೆ
ಇಂದುಧರಚಿದ್ರೂಪ ಮಹಲಿಂಗ ನಿಮ್ಮಲಿಂಗಾನಂದ ಘನಮಹಿಮೆಗೆ
ಸಂದ ಛಾತ್ರಾಂತರಕೆ ದಯ ಮಾಳ್ಪುದೆಂದಡಿಗೆ
ವಂದಿಸುತ ಮುನ್ನಿನೊಲು ಸಂಭ್ರಮದಿನೊಡಗೊಂಡು
ಬಂದರಾಸ್ಥಾನಕ್ಕೆ ನಡೆಗೊಂಡು ಗಿರಿಜಾತೆ ಲಾಲಿಸುವದತಿ ಭಕ್ತಿಯಿಂ ೫೨

ದ್ವಾದಶಸಹಸ್ರಾಬ್ದವರ್ಷ ಪರಿಯಂತರಂ
ಜಾಧರಗೆ ವಿಶ್ವಕರ್ಮಾಖ್ಯ ಭೂಸ್ಯಂದನವ
ನಾದರದಿ ನಿರ್ಮಿಸಿದ ನೂತ್ನಕಿಂ ಮಿಗಿಲಾಗಿ ಕಂಗೊಳಿಪ ಘನಛಾತ್ರದಿಂ
ಮೇದಿನೀಶ್ವರ ಜಂಗಮೋತ್ತಮಗೆ ತೋರುತ್ತ
ಮೋದದಿಂದೊಳಪೊಕ್ಕು ಘನಸಿಂಹಪೀಠದೊಳ್
ಆದಿಮಧ್ಯಾಂತವರ್ಜಿತರೂಪನಂ ಮೂರ್ತಿಗೊಳಿಸುತ್ತ ಸದ್ಭಕ್ತಿಯಿಂ ೫೩

ಪಲವಂದದಿಂ ಬಿಡದೆ ಕೊಂಡಾಡುತೆಲೆ ದೇವ
ಫಲವಾಯ್ತು ಮಮಜನ್ಮ ಭೂಜಾತವೆಂದೆನುತ
ಬಳಿಕ ತನ್ಮಹಿಮನಾಶೀರ್ವಾದವಂ ತಳೆದು ಪೊಡಮಟ್ಟು ಸಂತಸದಲಿ
ಇಳೆಯಾಣ್ಮ ಪಿಂದಿರುಗಿ ಬಂದು ನಿಜಮಂದಿರದಿ
ಒಲಿದು ಸುಖದಿಂದಿರ್ದನಗಜಾತೆ ಕೇಳತ್ತ
ಮಲಹರಾತ್ಮಕನಿರ್ದ ಮಹಮೇರುವಾಸದೊಳ್ ನೆಲಸಿರ್ಪವೊಲ್ ಸಂತತಂ ೫೪

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದೆ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೫೫

ಅಂತು ಸಂಧಿ ೧೨ ಕ್ಕಂ ಪದ ೪೯೮ ಕ್ಕಂ

ಮಂಗಳಂ

ಶ್ರೀ

ಶ್ರೀ

# ಹದಿಮೂರನೆಯ ಸಂಧಿ

ಸೂಚನೆ : ಮೋದವುರ ಛಾತ್ರಾಂತರಾಳದೊಳು ಸುಖಮಿರ್ದು
ಸಾದರದಿ ಸಕಲ ಮಹಿಮೆಗಳ ನೆರೆ ಬೀರುತ್ತ
ಮೇದಿನೀಶ್ವರನಿಂದೆ ಸಂಪೂಜ್ಯನಾಗಿರ್ದ ಮಹಲಿಂಗ ಮುನಿರಾಜನು

ಅಭ್ರದೈತ್ಯಮದೇಭ ಪಂಚಾಸ್ಯ ಪರಮೇಶ
ಶುಭ್ರಕರ ಶಶಿಮೌಳಿ ದಿಗ್ವಸನದಾವೇಷ
ಅಭ್ರಕುಂತಳ ಕುಂದ ಮಂದಾರ ಡಿಂಡೀರ ಚಂದನಸ್ಮಿತ ಸುಂದರ
ಅಭ್ರಮಪುರಾರಣ್ಯಸಪ್ತಾರ್ಚಿಪವಿಶಾರ
ದಭ್ರಸಿತ ಸಂಹನನ ಸರ್ವೇಶ ಜಿತಕಾಲ
ಅಭ್ರಮರ ಸಿತಕಂಠ ಶ್ರೀಚೆನ್ನವೀರೇಶ ಪಾಲಿಪುದು ಮೂಜಗವನು ೧

ಗಿರಿಜಾತೆ ಲಾಲಿಪುದು ಮಹಲಿಂಗ ಜಂಗಮದ
ವರಲೀಲೆಯಂ ಬಳಿಕ ಮೋದಪುರ ಛಾತ್ರದೊಳ್
ನಿರುತದಿಂ ಪರಮಾನುಭವಗೋಷ್ಠಿಯಿಂದಿರಲು ಸುಟರಟ್ಟಿಯೆಂದೆಂಬುವ
ಕಿರುಪಳ್ಳಿಯೊಳಗಿರ್ಪ ಹರಭಕ್ತ ಗಂಗಾಖ್ಯ
ಹರುಷದಿಂದಾ ಸಮಯದೊಳು ಬಂದು ಭಕ್ತಿಯಿಂ
ಕರಕಂಜಮಂ ಮುಗಿದು ಗುರುವರನ ಚರಣಕ್ಕೆ ಪೊಡಮಟ್ಟು ಬಿನ್ನೈಸಿದಂ ೨

ಪರಮ ಲಿಂಗಾರ್ಪಣದ ಬಿನ್ನಪವನೆಲೆ ದೇವ
ಕರುಣದಿಂ ಕೈಕೊಳ್ವುದೆಂದೆನಲು ಸಂತಸದಿ
ಚರವರೋತ್ತಮನಾಗ ಪರಸಲ್ಕೆ ಹರಭಕ್ತಕುಲತಿಲಕ ಗಂಗಾಖ್ಯನು
ತ್ವರಿತದಿಂದಾ ದಿವ್ಯ ಛಾತ್ರಾಂತರಾಳದೊಳ್
ಪರಿಪರಿಯ ಶಾಕಪಾಕಾದಿಗಳ ಸಾರಗಳ
ಪರಮಾನ್ನ ಪಾಯಸಾಜ್ಯಾದಿಗಳ ಭಕ್ತಿಯಿಂದನುಗೊಳಿಸುತಿರಲಾಕ್ಷಣಂ ೩

ಘನವೀರಮಾಹೇಶ್ವರಾವಳಿಯು ಮಹಲಿಂಗ
ನನುಪಮದ ಸತ್ಕೀರ್ತಿ ವಾರ್ತೆಗಳ ನೆರೆ ಕೇಳಿ
ಮನವೊಲಿದು ಸಕಲದೇಶಾಳಿಯಿಂದೆಯ್ತಂದು ಸಂದರ್ಶನಾಪೇಕ್ಷೆಯಿಂ
ಬಿನದದಿಂ ಬರುತಿರಲು ಛಾತ್ರಾಂತರಾಳದೊಳ್
ಮಿನುಪಯೋಗಾಲಯದಿ ತನ್ಮಹಿಮ ಶಿವಯೋಗ
ದನುವಿನಲ್ಲಿರಲು ಕರದಿಷ್ಟಲಿಂಗಾಂತರದಿ ಪ್ರತಿಬಿಂಬಗಳು ತೋರಲು ೪

ಆ ಪರಮ ಶಿವಜಂಗಮಾವಳಿಯು ಬಪ್ಪ ನಿಜ
ರೂಪಂಗಳಗಣಿತಸಹಸ್ರಗಳು ಲಿಂಗದೊಳ್
ವ್ಯಾಪಿಸಿರ್ಪುದ ಕಂಡು ಮಹಲಿಂಗ ಮುನಿರಾಜ ಶಿವಯೋಗಮಂ ತೀರ್ಚಿಸಿ
ಸ್ವೈಪಿನಿಂ ಹರಭಕ್ತ ಗಂಗಾಖ್ಯನಂ ಕರೆದು
ಊಪರಿಯೊಳುಂ ಬಂದ ಗಣ ತಿಂಥಿಣಿಗೆ ಬಿಡದೆ
ಸೂಪಾಕಮಂ ತೃಪ್ತಿಬಡಿಸೆಂದೆನುತ ಪೇಳುತಿರಲಿತ್ತಲಾ ಸಮಯದಿ ೫

ಲಿಂಗದೊಳು ಕಂಡಂತೆ ಬಹಿರಂಗದಲಿ ಬಂದ
ಜಂಗಮಾವಳಿಯು ಮನ್ನಿಪ ಸತ್ಯದೇವ ಮಾ
ಲಿಂಗನಂಘ್ರಿಗೆ ನಮಿಸಲಾಭಕ್ತ ಗಂಗಾಖ್ಯ ವಿಸ್ಮಯದೊಳಿಂತೆಂದನು
ಅಂಗಜಾಂತಕ ನಿಗಮ ಪರಿಮಿತದಿ ನಿರ್ಮಿಸಿದ
ಮಂಗಲದ ಪಾಕಮದು ನೀಡುವೊಡೆ ಪ್ರಮಥಕುಲ
ಪುಂಗವರಿಗೆಂತು ಸಾಲುವದೆಂದು ಚಿಂತೆಯಿಂ ಬಿನ್ನೈಪ ನುಡಿಗೇಳುತ ೬

ಇಂದುಧರನಾಜ್ಞೆಯಿಂ ತೃಣಪರ್ವತಾಗುವದು
ಸಂದೇಹವಿಲ್ಲಿದಕೆ ಪ್ರಮಥರಾಚರಣೆಯಿದು
ಬಂದ ಒರ ನಿಂದ ನಿಲುವಂ ತಿಳಿದು ಮಾಡುವದೆ ಸದ್ಭಕ್ತಗಿದು ಸನ್ಮತಂ
ಎಂದು ಮುನಿಪೋತ್ತಮ ಮಹಾಲಿಂಗ ಸೂಚಿಸಲು
ಚೆಂದದಿಂ ಗಂಗಾಖ್ಯ ತಜ್ಜಂಗಮಾವಳಿಯ
ನಂದು ಸತ್ಕರಿಸಲಾರಂಭಿಸಿದನಗಜಾತೆ ಬಣ್ಣಿಸುವರಾರಿಳೆಯೊಳು ೭

ಪರಿಪರಿಯ ಶಾಕಪಾಕಾದಿಗಳ ಗಡಣಮಂ
ಗುರುವರ ಮಹಾಲಿಂಗ ನಿಜಪರುಷದೃಷ್ಟಿಯಿಂ
ಹರುಷದಿಂ ನೋಡಿ ಕರಸ್ಪರ್ಶನಂ ಮಾಡಲ್ಕೆ ಹರಭಕ್ತ ಗಂಗಾಖ್ಯನು
ನೆರೆ ನಂಬಿ ಭಕ್ತಿಯಿಂದೆಡೆವಿಡದೆ ಮುಂಕೊಂಡು
ಹರಿವಾಣದೊಳು ತಂದು ರಸಮಯ ಪದಾರ್ಥಗಳ
ಚರಕುಲಕೆ ನೀಡುತಿರಲಾ ಪಾಕ ಪೊರೆಯೇರುತಿರ್ದತ್ತು ತನ್ಮಹಿಮೆಯಿಂ ೮

ರಸಮಯ ಪದಾರ್ಥಗಳ ವಿಸರಮದು ತಮತಮಗೆ
ಎಸಕದಿಂ ಮಿಸುಗುತಿರೆ ಸವಿಸವಿದು ಪರಮ ಸಂ
ತಸದಿಂದೆ ಶಿವಜಂಗಮಾವಳಿಯು ತೇಗುತಿರಲಾ ಸಮಯದೊಳ್ ಸಂತತಂ
ವಸುಧೀಶಮುಖ್ಯ ಪರಿಜನ ಪೌರಜನರೆಲ್ಲ
ರಸಮಾಕ್ಷನವತಾರನಾಜ್ಞೆಯಿಂ ಭೋಜನವ
ಒಸೆದು ಮಾಡಿದ ಬಳಿಕ ದಿವ್ಯಾನ್ನಮದು ಮುನ್ನಿನಂತಿರ್ದುದಗಜಾತೆಯೆ ೯

ದೃಢಭಕ್ತ ಗಂಗಾಖ್ಯ ವೀರಮಾಹೇಶ್ವರರು
ಪೊಡವಿಪತಿ ಮುಖ್ಯ ಪರಿಜನ ಪೌರಜನರೆಲ್ಲ
ಬಿಡದೆ ವಿಸ್ಮಯವಾಂತು ಮನದೊಳಗೆ ತಮತಮಗೆ ಪರಮಸಂತಸದಿಂದಲಿ
ಜಡೆಯದೇವನ ಮಹಿಮೆ ಜಗದೊಡೆಯ ಬಲ್ಲೆನುತ
ಅಡಿಗಡಿಗೆ ಬಣ್ಣಿಸುತ ಕರಕಂಜಗಳ ಮುಗಿದು
ಮೃಡನೆ ಜಯಜಯತು ಲೋಕಾರಾಧ್ಯ ಜಯತೆಂದು ನಮಿಸುತ್ತಲಿರುತಿರ್ದರು ೧೦

ಕಲ್ಯಾಣನಗರದಲಿ ಮೋಳಿಗೆಯ ಮಾರಯ್ಯ
ಎಲ್ಲರರಿವಂತಿರದೆ ಬಾಂಡದಂಬಲಿಯಿಂದೆ
ಸಲ್ಲಲಿತ ಲಕ್ಷಗಣನೆಯ ಮೀರಿ ರಾಜಿಸುವ ಪ್ರಮಥಗಣಸಂಜಾತಕೆ
ಅಲ್ಲಿ ಸಂತೃಪ್ತಿ ಮಾಡಿದನೆಂಬ ಸತ್ಕಥೆಯ
ಬಲ್ಲ ಕೋವಿದಜನಂ ಪೇಳ್ದುದಂ ನೆರೆ ಕೇಳಿ
ಬಲ್ಲಿವೀ ಜಗಕೆಲ್ಲ ಪ್ರತ್ಯಕ್ಷವಾಗಿಂದು ಮಹಲಿಂಗಮುನಿ ತೋರ್ದನು ೧೧

ಎಂದು ಪಲವಂದದಿಂಡೆವಿಡದೆ ಬಣ್ಣಿಸುತ
ಚೆಂದದಿಂ ಧರಣಿಪತಿ ಮೊದಲಾದ ಪೌರಜನ
ರಂದು ತನ್ಮಹಿಮನಡಿದಾವರೆಗೆ ನಮಿಸುತ್ತ ಕೈಮುಗಿದು ಭಯಭಕ್ತಿಯಿಂ
ಕಂದರ್ಪಹರನಿಂದ ಬೀಳ್ಕೊಂಡು ಬಂದು ನಿಜ
ಮಂದಿರಗಳಂ ಸಾರ್ದರಿಲೆ ಗಿರಿಜೆ ಕೇಳಿತ್ತ
ಸಂದ ಪರಮಾನಂದ ರೂಪನಂ ನಮಿಸಿ ಕಾರುಣ್ಯದಿಂ ಗಂಗಾಖ್ಯನು ೧೨

ಗುರುವರನ ಚರಣಾಂಬುಶೇಷಂಗಳಿಂ ತಣಿದು
ಪರಮ ಸಂತಸದಿಂದೆ ಚರಕುಲಕೆ ನಮಿಸುತ್ತ
ಮರಳಿ ತನ್ನಾಲಯಕೆ ಬೀಳ್ಕೊಂಡು ಬಂದು ಸುಖದಿಂದಿರ್ದನಗಜಾತೆಯೆ
ಶರಣಸಂಕುಲಮಧ್ಯದೊಳಗಿತ್ತ ಮಹಲಿಂಗ
ಪರಮಾನುಭವಗೋಷ್ಠಿಯಿಂದಸಮ ಭಕ್ತರಂ
ಪರಿಪಾಲಿಸುತ್ತ ಪರಮಾನಂದದಿಂದಿರ್ದನಾ ಛಾತ್ರದೊಳ್ ಸಂತತಂ ೧೩

ಜಗದೊಳಗೆ ಜಂಗಮದ ಲೀಲೆಯುಂ ಬಲ್ಲರಾರ್
ನಗಜಾತೆ ಕೇಳೆಂದು ಬಳಿಕೊಂದು ವಾಸರದಿ
ಸುಗುಣಮಣಿಮಾಲ ಮಹಲಿಂಗ ಮುನಿಪೋತ್ತಮಂ ನಿತ್ಯ ವೈಭವದಿಂದಲಿ
ಬಗೆಗೊಳಿಪ ಘನಸಭಾಮಧ್ಯದಲಿ ಪ್ರಜ್ವಲಿಪ
ಮೃಗಪೀಠದೊಳು ಮೂರ್ತಿಗೊಂಡಿರಲು ಕೆಲಬಲದಿ
ಅಗಣಿತ ಮಹಾಭಕ್ತ ಮಾಹೇಶ್ವರಾವಳಿಯು ಕಂಗೊಳಿಸಲಾ ಸಮಯದಿ ೧೪

ಚಂಡಿಕಾವರನಸಮ ಲೀಲೆಗಳ ಬಳಿವಿಡಿದು
ಪಂಡಿತರು ಪೇಳುತಿರಲಾ ಸಮಯದಲ್ಲಿ ಭೂ
ಮಂಡಲಾಧಿಪ ಬಂದು ಭಕ್ತಿಯಿಂದಡಿಗೆರಗಿ ಕೇಳುತ್ತ ಸಮ್ಮುಖದೊಳು
ಮಂಡಿಸಿರಲಾಕ್ಷಣದಿ ಮತ್ತೋರ್ವ ಮೃಡಭಕ್ತ
ಪಂಡಿತಾಮರಭೂಜ ಸಮರೂಪನೆಂದೆನಿಪ
ಮುಂಡಾಸದಾ ಬಸವಲಿಂಗನಾತ್ಮಜನೆನಿಪ ಸಂಗನಾಬಸವಾಖ್ಯನು ೧೫

ಬಂದು ಮುನಿಪೋತ್ತಮನ ಮೆಲ್ಲಡಿಗೆ ನಮಿಸಿ ಕರ
ದ್ವಂದ್ವಗಳ ಮುಗಿದು ನಿಜಶ್ರದ್ಧೆಯಿಂ ಕೀರ್ತಿಸಿದ
ಕಂದರ್ಪಹರ ಕಾಮಕಾಂತಾರದಾವಾಗ್ನಿ ಕಾಲಾರಿ ಖಲಸಂಹರ
ಕುಂದಮಂದಾರಚಂದನದ ನಿರ್ಮಲಕಾಯ
ಬಂಧುರಾನತಭಕ್ತಸಂಜಾತವರದಾತ
ಸಂದ ಪರಮಾನಂದಮಯರೂಪ ಸಂತತಂ ಪಾಲಿಪುದು ಕಾರುಣ್ಯದಿಂ ೧೬

ಉನ್ನತ ಮಹಾಮಹಿಮ ಮಹಲಿಂಗ ಮುನಿವರ್ಯ
ಎನ್ನ ನೇತ್ರಾಬ್ಜಗಳು ಅಡಗಿ ಕಾಣಿಸದಂತೆ
ಬನ್ನಬಡಿಸುತ್ತಿಹವು ಬಲುವೈದ್ಯರಿಂದೇನು ಮಾಡಿದರೆ ಫಲವಾಗದೆ
ಮುನ್ನ ಮಾಡಿದ ಧೂರ್ತಕರ್ಮವೆಡೆಗೊಂಡ ಮೇ
ಲಿನ್ನು ಪ್ರತಿಪಾಲಿಪರೆ ನೀವಲ್ಲದಾರಿಲ್ಲ
ಚೆನ್ನ ರುದ್ರಮ್ಮನಕ್ಷಿಯ ಕೊಟ್ಟ ತೆರದಿಂದ ಕರುಣಿಪುದು ಕಾಮಾಂತಕ ೧೭

ಎನುತ ಕೊಂಡಾಡುತಿಹ ಸದ್ಭಕ್ತನಮಲಮುಖ
ವನಜಮಂ ಕರುಣಾವಲೋಕನದಿ ನೋಡುತ್ತ
ಮನಸ್ಪೊಲಿದು ಮುಂದಕ್ಕೆ ಕರೆದು ಮೈದಡವುತ್ತ ಮಹಲಿಂಗ ಮುನಿವರ್ಯನು
ಘನಭಸಿತ ಪಾದಾಂಬುಗಳನಾದಿ ನಿಜಕರದಿ
ಅನುಲೇಪನಂ ಮಾಡೆ ತನ್ನಯನದ್ವಂದ್ವಗಳು
ಕನಕಪಂಕಜದಂತೆ ಥಳಥಳಿಸಿ ತೋರಿದುವು ಏನೆಂಬೆನಚ್ಚರಿಯನು ೧೮

ಚಂಚಲದ ಮಾಳ್ಕೆಯಿಂ ನಿಜನೇತ್ರಪದ್ಮಗಳು
ಸಂಚಲಿಸಿ ಕೆಲಬಲದಿ ಸರ್ವರಿಗೆ ತೋರುತ್ತ
ಮಿಂಚುತಿರಲಾಕ್ಷಣದಿ ಮುದವೆತ್ತು ಮನದೊಳಗೆ ಭಕ್ತಸಂಗನಬಸವನು
ಕಾಂಚನಲತಾಭನೇತ್ರಾಂಚಿತನ ಮೂರ್ತಿಯಂ
ಮುಂಚಿ ನೋಡುತ್ತಸಮ ಭಕ್ತಿಯಿಂ ಕೈಮುಗಿದು
ಸಂಚಿತಾದಿವಿನಾಶ ನಾ ಧನ್ಯನಾದೆನೆಂದೆನುತಾಗ ಕೀರ್ತಿಸುತಿರೆ ೧೯

ಪೊಡವಿಪತಿ ಮೊದಲಾದ ಸರ್ವಜನರಾಕ್ಷಣದಿ
ಎಡೆವಿಡದೆ ನೋಡಿ ವಿಸ್ಮಯವಾಂತು ಮನದೊಳಗೆ
ಜಡೆಯದೇವನ ಮಹಿಮೆ ಜಗದೊಡೆಯ ಬಲ್ಲೆನುತ ತಮತಮಗೆ ಕೊಂಡಾಡುತ
ಮೃಡಪುರಾತನರಿಂತು ಪೂರ್ವದಲಿ ನೇತ್ರಗಳ
ದೃಢಭಕ್ತರಿಗೆ ಕೊಟ್ಟರೆಂದೆಂಬ ಸತ್ಕಥೆಯ
ಬಿಡದೆ ಪೌರಾಣದೊಳು ಕೇಳ್ವು ಬಲ್ಲೆವು ಬಳಿಕ ದೃಷ್ಟಾಂತಮಂ ತೋರ್ದನು ೨೦

ಎಂದೆನುತ ತತ್ಸಭಾಮಧ್ಯದೊಳು ಸರ್ವಜನ
ರಂದು ಬಣ್ಣಿಸುತಿರಲು ಮಾಲೋಚಿ ಮಹರಾಜ
ನಿಂದುಧರ ಚಿದ್ರೂಪನಂಘ್ರಿಗಳಿಗೆರಗುತ್ತ ಮನ್ನಾಥ ಮಹಲಿಂಗನೆ
ಇಂದು ಸಂಗನಬಸವ ಭಕ್ತೋತ್ತಮನ ನೇತ್ರ
ದ್ವಂದ್ವಗಳಿಗನುಲೇಪನಂಗೈದು ರುಜುಮಾಳ್ಪ
ಸಂದ ಪಾದಾಂಬುಘನಭಸಿತಗಳ ಮಹಿಮೆಯಂ ಕರುಣಿಸುವದೆಂದಾಕ್ಷಣಂ ೨೧

ಬಿನ್ನೈಪ ಭೂವಲ್ಲಭನ ನುಡಿಗೆ ಮನಮೆಚ್ಚಿ
ನಿನ್ನ ಜನ್ಮಾಂತರದ ಪುಣ್ಯ ಸಮನಿಸಿತು ಕೇ
ಳಿನ್ನು ಚರಣಾಂಬುವರಭಸಿತಗಳ ಮಹಿಮೆಯಂ ಪೇಳುವಡೆ ಪದ್ಮಾಸನ
ಪನ್ನಗಾಧೀಶರಿಗೆ ವಶವಲ್ಲ ಭೂತಳದೊ
ಳಿನ್ನಾವ ಕಬ್ಬಿಗರು ಬಣ್ಣಿಸುವರೆಂದೆನುತ
ಚೆನ್ನಗಿರಿ ಪುರನಾಥ ಪೇಳಲುಜ್ಜುಗಿಸಿದಂ ಗಿರಿಜಾತೆ ಕೇಳೆಂದನು ೨೨

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೨೩

ಅಂತು ಸಂಧಿ ೧೩ ಕ್ಕಂ ಪದ ೫೨೧ ಕ್ಕಂ
ಮಂಗಳಂ
ಶ್ರೀ

ಶ್ರೀ

# ಹದಿನಾಲ್ಕನೆಯ ಸಂಧಿ

ಸೂಚನೆ : ಪಾದಾಂಬು ಶ್ರೀಭಸ್ಮ ಮಹಿಮೆಗಳನೆಡೆವಿಡದೆ
ಸಾದರದಿ ಮಹಲಿಂಗ ಮುನಿ ಪೇಳುತಿರಲಾಗ
ಮೋದಪುರನಾಥ ಮಾಲೋಜಿ ಭೂಪಾಲಕಂ ಲಾಲಿಸಿದನತಿಭಕ್ತಿಯಿಂ

ಮಾಪವರಗೋತ್ರ ಹರಿಮುಖ್ಯಸುರನಮಿತಪದ
ಗೋಪರಥ ಗೋವಸನ ಗೋಜಾತ ಶರನಾಶ
ಗೋಪಮಂದಿರವಾಸ ಗೋಜಾರಿಧರಧರ್ಮ ಸಂಜಾತ ವರದಾಯಕ
ಗೋಪಪುರಲೋಪಸುಕಲಾಪಕೃತ ಭೋಗಿಪತಿ
ತಾಪಸಮನೋಭೀಷ್ಟದಾಯಕ ಮಹಾದೇವ
ಪಾಪಹರ ಸೋಲೂರ ಚೆನ್ನವೀರೋತ್ತಮನೆ ಪಾಲಿಪುದು ತ್ರೈಜಗವನು ೧

ಧರಣೀಶ ಕೇಳಿನ್ನು ಭಸಿತ ಪಾದಾಂಬುಗಳ
ವರ ಮಹಿಮೆಯಂ ಪೇಳ್ವಡಚ್ಚರಿಯು ಲೋಕದೊಳ್
ನೆರೆ ನಂಬಿ ಧರಿಸಿ ಪಾವನರಾದರಾಕ್ಷಣಂ ಸ್ವರ್ಗಾದಿ ಲೋಕಂಗಳೊಳ್
ಪರಿಪರಿಯ ರೋಗ ದಾರಿದ್ರ್ಯಗಳ ಪರಿಹರಿಸಿ
ದುರಿತಂಗಳಂ ಕಳೆದು ಶ್ರೀಗೌರಿವಲ್ಲಭನ
ಕರುಣಮಂ ಪಡೆದರೆಂದೆನುತ ಮಹಲಿಂಗೇಂದ್ರ ಸೂಚಿಸಿದ ಸಂತಸದೊಳು ೨

ಕಂಜಸಖಪೂರ್ವದೊಳು ಗೌತಮನ ಕುಲಸತಿಯು
ಮಂಜುಲಾಂಗದ ಗಾಡಿಯುಂ ನೋಡಿ ಮನಸೋತು
ಕಂಜಶರನಾಟಕ್ಕೆ ಕರೆಯಲ್ಕೆ ತನ್ಮುನಿಪನರಿವುತ್ತ ಘನಕೋಪದಿಂ
ಭಂಜಿಸುತ್ತಲೆ ಪಾಪಿ ಕೃಷ್ಣಾಂಗನಾಗೆನಲು
ನಂಜೇರಿದಂತೊಡಲ ಬಣ್ಣಳಿಯೆ ಭಾವದೊಳ
ಗಂಜುತ್ತ ಬಂದನಲ್ಲಿಂ ಬಳಿಕ ನಂದೀಶನಾಶ್ರಮಕೆ ಮರುಗುತ್ತಲಿ ೩

ಬಂದಸಮ ಮಹಿಮನಡಿದಾವರೆಗೆ ಭಕ್ತಿಯಿಂ
ವಂದನವ ಗೈಯುತ್ತ ಎಲೆ ದೇವ ಲಾಲಿಪುದು
ಇಂದು ಗೌತುಮನಿಂದೆ ಶಾಪ ಸಮನಿಸಿತೆಗನಗೆ ಪರಿಶುದ್ಧನೆಂತಪ್ಪುವೆ
ಚೆಂದದಿಂ ಕರುಣಿಸೆನಲಾ ನುಡಿಯ ಕೇಳುತ್ತ
ಕಂದರ್ಪಹರನಂಘ್ರಿ ಜಲದಿಂದೆ ಮನವೊಲಿದು
ಮಿಂದು ಪರಿಶುದ್ಧನಾಗೆನಲು ತಜ್ಜಲದಿಂದೆ ಪರಿಪೂರ್ಣ್ಯ ತಾನಾದನು ೪

ಧರಣೀಶ ಬಿಜ್ಜಳಂ ಕಲ್ಯಾಣನಗರದಲಿ
ಬರುತಿರಲು ಬಸವನಾಲಯದಿಂದೆ ಮುಂದೆಸೆಗೆ
ಚರತೀರ್ಥದಾಕೊಳಂ ಪರಿರಮ್ಯವಾಗಿರಲು ನೋಡುತ್ತ ಬಸವೇಶನ
ಪರಿಹಾಸ್ಯದಿಂ ಕೇಳೆ ಸಿದ್ಧರಸ ಸರಸಿಯೆನೆ
ವರ ಪಂಚಲೋಹಗಳ ತರಿಸಿ ಕಾಸುತ್ತದರೊ
ಳಿರಿಸಲ್ಕೆ ಚೊಕ್ಕ ಬಂಗಾರವಾದುದು ಭೂಪ ಕೇಳೆಂದ ಮಹಲಿಂಗನು ೫

ಕುಕ್ಕುಟಂ ಕಿಟಿಯ ಬೆನ್ನತ್ತಿ ಬರುತಿರೆ ಭಯದಿ
ಮಿಕ್ಕು ಮುಂಬಿನೊಳಿರ್ದ ಪಾದಾಂಬುವಿನ ಕೊಳದಿ
ಚಕ್ಕನೇ ಬೀಳಲ್ಕೆ ಚೊಕ್ಕ ಪೊನ್ನೊಡಲಾಗಿ ಪ್ರಮಥಪದವಿಯುನ್ನೈಯ್ದುದು
ನಕ್ಕನೈನಾರೆಂಬ ಮಹಪುರುಷ ನರಿಗಳಂ
ಲೆಕ್ಕವಿಲ್ಲದೆ ತರಿಸಿ ಪಾದೋದಕವ ತಳಿಯೆ
ಅಕ್ಕರದಿ ವಾಯುವೇಗವನುಳ್ಳ ವಾಜಿಗಳು ನಿಜವಾದವೆಲೆ ಭೂಪತಿ ೬

ಉದಕದಾನದ ಫಲಂ ಘನವೆಂದು ಪಂಡಿತರ
ವದನದಿಂ ಕೇಳುತ್ತ ನರಸಿಂಹ ಬಲ್ಲಾಳ
ನದರಿಂದ ವರಪುಣ್ಯಮಂ ಪಡೆಯಬೇಕೆಂದು ಮನದೊಳಗೆ ನಿಶ್ಚೈಸುತ
ವಿದಿತ ಪದ್ಮಾಕರವ ಕಟ್ಟಿಸೆಂದೆನುತಾಗ
ಪದುಳದಿಂ ಮಂತ್ರಿಪತಿ ಪದ್ಮರಸರಂ ಕರೆದು
ಒದವಿರ್ದ ಪೊನ್ಗಳಂ ಲೆಕ್ಕವಿಲ್ಲದೆ ಕೊಡಲು ಕೈಕೊಂಡು ಮುದದಿಂದಲಿ ೭

ಮದನಾರಿರೂಪರ್ಗೆ ಮನವೊಲಿದು ತದ್ಧನವ
ಮುದದಿಂದೆ ಕೊಟ್ಟು ಪರಿಣಾಮಿಸುತ್ತಿರಲಿತ್ತ
ಕುಧವನೊಂದಿದ ಮಂತ್ರಿ ಪದ್ಮರಸರಂ ಕರೆದು ಕೇಳಲಾಕ್ಷಣದಲ್ಲಿಯೆ
ಸದಮಲದ ಭಸಿತ ಕಟ್ಟೆಯ ಕಟ್ಟಿ ಜಂಗಮದ
ಪದವಾರಿಯಂ ಬಿಡದೆ ಪೂರೈಸಿ ನೆರೆಮೆರೆದ
ವಿದಿತ ಪದ್ಮಾಕರಂ ಜಗದೊಳಗೆ ರಂಜಿಪುದು ಭೂಪಾಲ ಕೇಳೆಂದನು ೮

ಬಡವಾದೆ ಬೇಡುವವರಿಲ್ಲೆಂದು ಬಸವರಸ
ನುಡಿದ ಗೀತಾವಳಿಯ ಕಲಿತೋರ್ವ ಜಂಗಮಂ
ಮಡಿವಳಯ್ಯನ ಮಠದಿ ಓದುತಿರೆ ನೆರೆ ಕೇಳಿ ಕರ್ಣಂಗಳಂ ಕೈಗಳಿಂ
ಕಡುತವಕದಿಂ ಮುಚ್ಚಿ ಕೋಪದುದ್ರೇಕದಿಂ
ಬಡವರಂ ಮಾಡಿ ಮೃಡ ಭಕ್ತರಂ ತಾನೊಯ್ಸಿ
ನುಡಿದಸಮುಹಂಕಾರಕೀಡಾದವನ ವಚನ ಪಾಡಬೇಡೆಂದೆನುತಲಿ ೯

ಮಠದಿಂದ ಹೊರಹಾಕಲವಮಾನದಿಂದಾಗ
ವಿಟಜಂಗಮಂ ಬಂದು ಬಸವರಸನಂ ಕಂಡು
ಹಟವೇನು ನಿಮ್ಮ ಗೀತಾವಳಿಯ ನೋದಿದರೆ ಮಡಿವಾಳ ಮಾಚಯ್ಯನು
ಹಟಕಾಸಿಸುತ್ತೆನ್ನ ಭಂಜಿಸುತ ನೂಕಿದನು
ಘಟಿಕರಾಡಿದ ನುಡಿಯ ಪರಿಸಿದಂತಾಯ್ತೆನುತ
ದಿಟದಿಂದ ಪೇಳುತಿಹ ದೇವನಂ ಸಂತೈಸುತಾ ಬಸವ ದಂಡೇಶ್ವರಂ ೧೦

ಮನದೊಳಗೆ ಕಳವಳಿಸಿ ಮುದವಳಿವುತಾಕ್ಷಣದೊ
ಳನುಪಮ ಮಹಾಮಹಿಮ ಮಡಿವಳಯ್ಯನ ಪಾದ
ವನಜಮಂ ಕಂಡು ಬದುಕುವೆನೆಂದು ಭಕ್ತಿಯಿಂದಡಿಗಡಿಗೆ ನಮಿಸುತ್ತಲಿ
ಮನಸಿಜಾಂತಕಶರಣರೊಡನೆಯ್ದುತಿರಲಾಗ
ಚಿನುಮಯಾತ್ಮಕ ಚೆನ್ನಬಸವೇಶ ಪಿಂತೆ ಬರೆ
ತನುವನೀಡಾಡುತ್ತ ಬಸವದಂಡಾಧೀಶನತ್ತ ಬರುತಿರಲಿತ್ತಲು ೧೧

ಸಕಲ ಪ್ರಮಥಾವಳಿಯ ಮೈಲಿಗೆಯ ವಸನಗಳ
ನಿಕರವಂ ಪೊತ್ತು ಹಳ್ಳಕೆ ಬಂದು ಮಡುವಿನೊಳು
ಸುಕರದಿಂ ಮಾಚಿವಿಭು ತೊಳೆಯುತಿರೆ ಬಸವೇಶನಾಕ್ಷಣದೊಳಾ ತಾಣದಾ
ನಿಕಟಕ್ಕೆ ಬಂದು ಸಾಷ್ಟಾಂಗದಿಂ ಪೊಡವುಟ್ಟು
ಅಖಿಲಾಪರಾಧಿನಾಂ ಪ್ರತಿಪಾಲಿಸೆಂದೆನುತ
ವಿಕಳದಿಂ ಕೊಂಡಾಡುತಿರೆ ಚೆನ್ನಬಸವೇಶ ದೂರದೊಳು ನಿಂತಿರ್ದನು ೧೨

ಮಾಚಿವಿಭು ನೋಡುತಲೆ ಬಸವ ಭಾಗ್ಯಾಧಿಪತಿ
ಯಾಚಕರಿಗೆರಗುವರೆ ಧನಿಕ ನೀನೆಂದೆನುತ
ರೋಚಿಕದ ಭಾವದಿಂದಾ ಮಡುವಿನಂಬುವಂ ನಿಜಪಾದ ಪದ್ಮಂಗಳಿಂ
ಸೇಚನೆಯುಗೈದು ಬೊಳ್ಪಿಮ್ಮಿದರೆ ಪಳ್ಳೆಲ್ಲ
ಊಚುಳ್ಳ ನವರತ್ನಮಯವಾಗೆ ಚರಕಿತ್ತು
ನಾಚಿಸಿದನಾ ಮಹಿಮದಣ್ಣಾಯಕನ ಭೂಪ ಕೇಳಂಘ್ರಿಜಲಮಹಿಮೆಯಂ ೧೩

ಅಸಮ ಕಾಶ್ಮೀರದೇಶವನೆಲ್ಲ ಜಂಗಮದ
ವಿಸರಕ್ಕೆ ಭಕ್ತಿಯಿಂದಲಿ ಕೊಟ್ಟು ಮಾರವಿಭು
ಬಸವರಸನಂಘ್ರಿದರ್ಶನವಾಂತು ಕಲ್ಯಾಣನಗರದಲಿ ಸಂತಸದೊಳು
ಎಸೆವ ಮೋಳಿಗೆ ಕಾಯಕದಿ ಬಂದ ದ್ರವ್ಯದಿಂ
ದಸಮಾಕ್ಷನವತಾರ ಜಂಗಮಾವಳಿಯ ಪದ
ಬಿಸರುಹಂಗಳ ಪೂಜೆಗೈಯುತಂಬಲಿಯಿಂದ ತೃಪ್ತಿವಡಿಸುತ್ತಿರ್ದನು ೧೪

ಒಂದು ದಿನ ಮೋಳಿಗೆಯ ಮಾರಯ್ಯನಂಬಲಿಯ
ಚೆಂದದಿಂ ಸವಿದಮರರಾಯಂಗೆ ದುರ್ಲಭಮಿ
ದೆಂದೆನುತ ಶಿವಜಂಗಮಾವಳಿಯು ಮನವೊಲಿದು ಕೊಂಡಾಡುತಾಕ್ಷಣದಲಿ
ಬಂದಸಮ ಭಕ್ತವರ ಬಸವದಣ್ಣಾಯಕರ
ಮುಂದೆ ಪೇಳುತ್ತಿರಲು ಕೇಳ್ದು ಮಿಡುಕುತ್ತ ಮುದ
ದಿಂದ ಕಡುಬಡತನದೊಳಾದೊಡಂ ನಿಜ ನೇಮ ಬಿಡರೆಂದು ಮೃಡಭಕ್ತರು ೧೫

ಇಂತೆಂದು ಮನದೊಳಾಲೋಚನಂಗೈಯುತ್ತ
ಸಂತಸದಿ ಸಾಸಿರದ ಪೊನ್ಗಳಂ ತನ್ನ ಕೈ
ಯಾಂತಸವು ಬಡವರೆಂದೆನುತಾಗ ಪ್ರಚ್ಛನ್ನರೂಪದಲಿ ಬಸವೇಶನು
ಕಂತುಹರಭಕ್ತ ಮೋಳಿಗೆ ಮಾರದೇವನ ನಿ
ಶಾಂತಮಂ ಪೊಕ್ಕು ಲಿಂಗಾರ್ಚನೆಯ ನೆರೆ ತೀರ್ಚಿ
ಮುಂಚಿರುವ ಮಜ್ಜನದ ಶಾಲೆಯೊಳಗಾ ಪೊನ್ಗಳಂ ಬಿಡದೆ ಬೈಚಿಸುತಲಿ ೧೬

ಆತನರ್ಧಾಂಗಿಯಂ ಕರೆಯುತೆಲೆ ತಾಯೆ ನೀ
ನೋತು ಸತ್ಕಾಯಕದಿ ಸವೆದಂಬಲಿಯನು ಸಂ
ಪ್ರೀತಿಯೆಂದೆಡೆಮಾಳ್ಪುದೆಂದೆನಲು ಮುದವೆತ್ತು ಭಯಭಕ್ತಿಯಿಂ ಪ್ರಮಥರ
ನಾಥನಿಂಗಿತವನರಿಯದೆ ಗಡಣಿಸಲು ಬಸವ
ನಾತುರದಿ ಸವಿಸವಿದು ಶಿವಶಿವ ಮಹಾದೇವ
ಜಾತನಾಗಿರ್ದಂದು ಮೊದಲಾಗಿ ನಾನರಿಯೆನೀಯಂಬಕಳಸವಿಯನು ೧೭

ಎಂದು ಲಿಂಗಾರ್ಪಣದಿ ತಣಿವುತೆಲೆ ತಾಯೆ ಶರ
ಣೆಂದು ಬಸವೇಶ ಪೋಗಲ್ಕತ್ತ ಮಾರವಿಭು
ಬಂದು ಮಂದಿರದೊಳಗೆ ಲಿಂಗಾರ್ಚನೆಯ ಮಾಡಿ ಬಳಿಕ ಮಜ್ಜನಶಾಲೆಯ
ಹೊಂದಿ ಬುಡದೊಳಗಿರ್ಪ ಪೊನ್ನ ಜಾಳಿಗೆಗಳಂ
ಮುಂದೆಸೆಯೊಳಿರೆ ನೋಡಿ ಪತ್ನಿಯಂ ಕೇಳೆ ಭಯ
ದಿಂದ ನಾನರಿಯೆ ಬಳಿಕೋರ್ವ ಶರಣಂ ಬಂದು ಸಲಿಸಿ ಪೋದೀಕ್ಷಣಮೆನೆ ೧೮

ಭಲರೆ ಭಾಪುರೆ ಬಸವ ಭಾಗ್ಯಾಧಿಪತಿ ಬಡವ
ರೊಲವರಿದು ಕೊಡುವಂಥ ತ್ಯಾಗಿಗಳು ನಿನ್ನವೋ
ಲಿಳೆಯೊಳಗದಾರುಂಟು ಬರಿದೆ ನಾ ಬಳಲುವದು ನೋಡುತ್ತ ಮಾನಸದೊಳು
ತಳೆದು ತಂದಿಟ್ಟು ಪೋದನೆ ಪೊನ್ನ ಜಾಳಿಗೆಯ
ಗಳನೆಂದು ಭಾವಿಸುತ ಎಡಗಾಲಿನಿಂ ದೂಡಿ
ಮಲಹರಾತ್ಮಕ ಜಂಗಮಾವಳಿಯ ತಣಿಸುತ್ತ ತಚ್ಚರಣ ಶ್ರೀವಾರಿಯಂ ೧೯

ಲಕ್ಷದಿಂ ಮೇಲೆ ತೊಂಬತ್ತಾರು ಸಾವಿರದ
ಲೆಕ್ಕದಿಂದಿರ್ದ ಕಾಷ್ಠದ ಮೇಲೆ ತಳೆವುತ್ತ
ಚೊಕ್ಕ ಪೊಂಗೋಲ್ಗಳಂ ಮಾಡಿತ್ತು ಚರಕುಲಕೆ ಭಕ್ತಿಯಿಂ ನಮಿಸುತ್ತಲಿ
ಅಕ್ಕರದಿ ಬಸವ ತಂದಿಟ್ಟ ಪೊಂಜಾಳಿಗೆಯ
ಲೆಕ್ಕಿಸದೆ ಶರಣರ್ಗೆ ಕೊಟ್ಟು ಕಳುಹಲ್ಕವರು
ಚಕ್ಕನೇ ಬಂದು ದಣ್ಣಾಯಕರ ಮುಂದುಸುರೆ ಕೇಳಿ ವಿಸ್ಮಯನಾಗುತ ೨೦

ಮರುಗುತ್ತ ಭಾವದೊಳು ಮೋಳಿಗೆಯ ಮಾರಯ್ಯ
ನಿರವನರಿಯದ ಪಾಪಿ ನಾನೆಂದು ಬಂದಡಿಗೆ
ಎರಗಿ ಭಯಭಕ್ತಿಯಿಂ ಕೊಂಡಾಡುತಿರೆ ನೋಡುತಲೆ ಬಸವದಣ್ಣಾಯಕಾ
ಹರಭಕ್ತರೆಂತಿರ್ದೊಡಂ ಬಡವರೆಂದೆನುತ
ಮರೆದೊಮ್ಮೆ ಮಾನಸದಿ ಸ್ಮರಿಸದಿರು ನೀನೆನುತ
ಕರುಣದಿಂ ಪರಿಪಾಲಿಸುತ್ತಿರದೆ ಬೀಳ್ಕೊಟ್ಟನಾ ಅಯ್ಯನೆಲೆ ಭೂವರಾ ೨೧

ಹಿರಿಯ ಭಕ್ತೋತ್ತಮಂ ಮಾದಾರ ಧೂಳಯ್ಯ
ಚರಣಗಳ ಪ್ರಕ್ಷಾಲನಂ ಗೈವ ಕೊಂಡಮಿರೆ
ಪೊರವಳಯದಲ್ಲೋರ್ವ ತೊನ್ನ ಪತ್ತಿದ ಪಾರ್ವ ಮುಂದುಗಾಣದೆ ಬೀಳಲು
ಕರಿತೊನ್ನುಮದು ಪೋಗಲಾ ವಾರ್ತೆಯನು ಕೇಳಿ
ಭರದಿಂದೆ ಸಪ್ತಶತ ವಿಪ್ರೋತ್ತಮರು ಬಂದು
ಹರುಷದಿಂ ಮಿಂದು ಶುದ್ಧಾಂಗರಾದರು ಭೂಪ ಕೇಳಂಘ್ರಿಜಲಮಹಿಮೆಯಂ ೨೨

ಬಸವರಾಜಂಗೆಂದು ಭಕ್ತಿಯಿಂ ನಿರ್ಮಿಸಿದ
ಮಿಸುಪ ಪದರಕ್ಷೆಗಳ ಕಂಡತುಳ ಮತ್ಸರದಿ
ಬಿಸರದಿಂ ತಾ ಮೆಟ್ಟವೇಳೆ೧ನಲು೧ ಕೊಡದೊಡಂ ಬಿಡದೆ ಮಧುವರಸಯ್ಯನು
ನಿಸದದಿಂ ಮೆಟ್ಟಲ್ಕೆ ದೇಹತೊನ್ನುಮದಾಗಿ
ಬಸಿವುತಿರೆ ಕ್ರಿಮಿಗಳಿಂ ಕೊಳೆತೊಂದು ದಿನ ದಾಸಿ
ಬಿಸವ ತರಲೆಂದುಸುರಿ ತಾ ಬರಲ್ಕಾಗಲ್ಲಿ ಮುಂಬಿನೊಳು ಕಂಗೊಳಿಸುವ ೨೩

ಹಳ್ಳಯ್ಯನಡಿದೊಳೆದ ವನದಿಂದ ತುಂಬಿರ್ದ
ಕೊಳ್ಳದಲಿ ಪೋಗುತ್ತ ಕೊಡಪೊತ್ತು ಚೇಟಿಕಾ
ಸಲ್ಲೀಲೆಯಿಂ ತರಲು ತಜ್ಜಲದಿ ಮಜ್ಜನವ ಗೈಯಲಾಕ್ಷಣದಲ್ಲಿಯೇ
ಸಲ್ಲಲಿತ ಕಲಧೌತ ಲತೆಯಂತೆ ಪೊಳೆವುತಿರ
ಲೆಲ್ಲರುಂ ನೋಡಿ ತಳೆವುತ್ತವರ ತನುಜಂಗೆ
ಪುಲ್ಲೆಗಂಗಳ ಕುವರಿಯನು ಕೊಟ್ಟು ಶಿವಭಕ್ತನಾದನೆಲೆ ಭೂಪಾಲನೇ ೨೪

ಸನ್ಯಾಸಿ ಮಂಚಣ್ಣ ಪದರಸವೆ ಸಿದ್ಧಜಲ
ವಿನ್ನಿದಕೆ ಸಂದೇಹವಿಲ್ಲೆನುತ ನುಡಿಯಲ್ಕೆ
ಭಿನ್ನಮತಿ ಪರವಾದಿಗಳು ನೆರೆದು ದೃಷ್ಟಾಂತಮಂ ತೋರ್ಪುದೆಂದೆನುತಿರೆ
ನನ್ನಿಯಿಂ ಜಂಗಮದ ಚರಣಾಂಬುವನು ತಳೆದು
ಮುನ್ನಿರುವ ಕಾಷ್ಠದಂಡಗಳೆಲ್ಲ ಜಗಮರಿಯೆ
ಚಿನ್ನಗೋಲ್ಗಳ ಮಾಡಿ ಚರಕಿತ್ತ ಕೇಳದರ ಘನತಿಯನು ಭೂಕಾಂತನೇ ೨೫

ವಲ್ಲಭಂ ಮುಕ್ತಿಪಥ ಹೊಂದಿದರೆ ಮುಂದೆನಗೆ
ಸಲ್ಲಲಿತ ಚರಣಾಂಬು ದೊರೆಯದೆಂದೆನುತ ನಿಜ
ದಲ್ಲಿ ಪೊಂಗಳಸಗಳು ತುಂಬಿಕೊಂಡಿರಲೊಂದು ದಿನ ಕೇರಿ ಉರಿಪತ್ತುತ
ಎಲ್ಲಕಡೆ ಸುಡುತ ನಿಜಮಂದಿರವ ದಹಿಸುತಿರೆ
ನಿಲ್ಲದಲಿ ನೋಡಿ ಘನಪಾದಾಂಬುವನು ತಳಿಯೆ
ಪಲ್ಲವಿಸಿದುರಿ ನೊಂದಿ ಮುನ್ನಿನಂತಾ ವೀಥಿ ಕಂಗೊಳಿಸಿತೆಲೆ ಭೂವರಾ ೨೬

---

೧ ಂದು (ಕ. ಚ.)

ಇಂತಸಮ ಮಹಿಮೆಯಂ ಬೀರುತ್ತ ಜನಮರಿಯೆ
ಸಂತಸದಿ ಚರಣಾಂಬುಸೇವನದೊಳಿರಲೊಮ್ಮೆ
ಮುಂತೆ ತುಂಬಿರ್ದ ಪಾದೋದಕಂ ಕಲಶದೊಳ್ ಶೂನ್ಯವಾಗಿರೆ ನೋಡುತ
ಅಂತರಿಸದಲಿ ಪ್ರಾಣಮಂ ಕಳೆಯಲುಜ್ಜುಗಿಸೆ
ಕಂತುಹರ ಮೆಚ್ಚಿ ಕೈಲಾಸಕ್ಕೆ ಕರೆದೊಯ್ದು
ಸಂತತಂ ರುದ್ರಪದವಿಯೊಳಿಟ್ಟನೆಲೆ ರಾಜ ಕೇಳಂಘ್ರಿಜಲಮಹಿಮೆಯಂ ೨೭

ಮೃಡಭಕ್ತಕುಲತಿಲಕ ಕಣ್ಣಪ್ಪ ಗಾಣಮಂ
ಮಡುವಿನೊಳಗಿಕ್ಕಿ ಮತ್ಸ್ಯಾದಿ ಜಲಜೀವಿಗಳ
ಗಡಣಮಂ ತಂದು ವಿಕ್ರಯಿಸುತ್ತ ತದ್ಧನದಿ ಜಂಗಮಾರ್ಚನೆಗೈವುತ
ದೃಢನೇಮದಿಂದಿರಲು ತಿಳಿದು ಪ್ರಮಥಾವಳಿಯು
ಜಡಜೀವಿಗಳ ಕೊಂದು ಮಾಳ್ಪವನ ವರಭಕ್ತಿ
ಸುಡು ಎಂದು ತಮ್ಮೊಳಗೆ ತಾವು ಭಾವಿಸುತಿರಲು ಬಳಿಕೊಂದು ವಾಸರದಲಿ ೨೮

ಕಣ್ಣಪ್ಪ ಬಸವಾದಿ ಪ್ರಮಥರಿಗೆ ನಮಿಸುತ್ತ
ಬಿನ್ನಪಂಗೈದು ನಿಜ ಮಂದಿರಕೆ ಕರೆತಂದು
ಮನ್ನಿಸುತ ಭಕ್ತಿಯಿಂ ಚರಣಾಂಬುಜಂಗಳಂ ಪ್ರಕ್ಷಾಲನಂಗೈಯ್ಯುತಾ
ನನ್ನಿಯಿಂ ಲಿಂಗಪೂಜಾರ್ಪಣಗಳಿಂ ತಣಿಸಿ
ಮುನ್ನವರ ಪದಜಲಂ ನಿಂತಿರ್ದ ಮಡುವಿನಲಿ
ಭಿನ್ನವಿಲ್ಲದೆ ಮತ್ಸ್ಯಬಂಧನದ ಕೊಂಡಿಯೊಳಶೇಷದಗುಳಂ ಶಿಲ್ಕಿಸಿ ೨೯

ಬಸವಾದಿ ಪ್ರಮಥಾಳಿ ನೋಳ್ಪಂತೆ ತಜ್ಜಲದಿ
ಮಿಸುಪಗುಣವನ್ನಿಕ್ಕಿ ತೆಗೆವುತಿರಲೊರ್ಮೆ ಹರಿ
ಬಿಸಜಾಕ್ಷನೊರ್ಮೆ ಸುರಪತಿ ಮುಖ್ಯ ದಿಕ್ಪಾಲಕುಲಕೊರ್ಮೆ ಮೈದೋರುತ
[ಎಸೆವ ಪ್ರಸಾದಮಂ ಸಂತಸದಿ ಸೇವಿಸಲು]
ಅಸಮ ನಿರ್ಜರರು ತತ್ ಶೇಷಮಂ ಸ್ವೀಕರಿಸ
ಲಸವಸದಿ ಬರಲು ತದನಂತರಂ ಗಿರಿಜಾತೆ ಸಹಿತ ಶಂಕರ ಬಂದನು ೩೦

ನೋಡುತ್ತ ಬಸವೇಶ ಮುಖ್ಯ ಪ್ರಮಥಾಳಿ ಕೊಂ
ಡಾಡುತ್ತ ತಮತಮಗೆ ಮನದ ಸಂದೇಹವಿೀ
ಡಾಡುತ್ತ ಪರಮೇಶನಡಿಗಳ್ಗೆ ಭಕ್ತಿಯಿಂದೆರಗುತ್ತ ಸಂತಸದೊಳು
ಗಾಡಿಯಿಂ ಕನ್ನಪ್ಪನುನ್ನತಿಗೆ ಮೆಚ್ಚಿ ಮುಂ
ಡಾಡುತ್ತ ಗೌರೀಶ ಕೈಲಾಸಪುರಕೊಯ್ದ
ರೂಢಿಯೊಳು ಸಿದ್ಧಾಂತಮೆಲೆ ಭೂಪಕೇಳೆನುತ ಮಹಲಿಂಗ ಮುನಿ ಪೇಳ್ವನು ೩೧

ಇಂತಸಮ ಪಾದೋದಕದಿ ಮುಕ್ತಿ ಮಾರ್ಗವಂ
ಸಂತಸದಿ ಹೊಂದಿದರನೇಕರುಂಟಿನ್ನು ಭೂ
ಕಾಂತ ಲಾಲಿಸು ಭಸ್ಮಮಹಿಮೆಯಂ ಮುನ್ನ ಜಮದಗ್ನಿ ಕಶ್ಯಪಗಸ್ತ್ಯರು
ಕಂತುಪಿತ ಕಮಲಭವ ಸುರನಾಥ ಮುಖ್ಯಸುರ
ಸಂತತಿಯು ಭಯಭಕ್ತಿಯಿಂ ಭಸ್ಮವನು ತಳೆದು
ಸಂತತಂ ದೀರ್ಘಾಯುಮಂ ಪಡೆದು ಪಾವನಾತ್ಮಜರಾದರೆಲೆ ಭೂವರಾ ೩೨

ಚಂದನಂ ಕುಂಕುಮಂ ಕಸ್ತೂರಿ ಮೊದಲಾದ
ಗಂಧಾನುಲೇಪನದ ಸತ್ಫಲಗಳಲ್ಪೆನುತ
ನಿಂದಿಸುತ್ತಿರೆ ಪೇಳ್ವವರ ಕ್ರಿಯಾಸಾರೋಕ್ತಿ ಭಸಿತಧಾರಣ ಮಹಿಮೆಯ
ಸಂದ ಸಾವಿರಕೋಟಿಯೊಳಗೆಂದು ಸಾರಾಂಶ
ಹೊಂದಲರಿಯುವುಯೆಂದು ಮನುಮುನಿಗಳೆಲ್ಲರುಂ
ಚಂದದಿಂದಲಿ ತಳೆದು ಪೂತಾತ್ಮರಾದರೆಲೆ ಮಾಲೋಜಿ ಭೂಕಾಂತನೇ ೩೩

ಹರನೊಮ್ಮೆ ಕೈಲಾಸಮಂಟಪದಿ ಮೂರ್ತಿಗೊಂ
ಡಿರಲು ಮುರವೈರಿ ಮುಂದೆಸೆಯಲ್ಲಿ ಭಕ್ತಿಯಿಂ
ಕರಕಂಜಗಳ ಮುಗಿದು ನಿಂದು ಕೊಂಡಾಡುತಿರೆ ನೋಡುತ್ತ ಕಾರುಣ್ಯದಿಂ
ಪರಮೇಶ ತನ್ನ ಹೃತ್ಕಮಲ ಮಧ್ಯದೊಳಿರ್ಪ
ವರ ಭಸಿತಮಂ ತನ್ನ ಬೆಳ್ಳುಗುರಿನಿಂ ತಳೆದು
ಪರಮ ಗಾಯತ್ರಿಪಂಚಾಕ್ಷರಗಳಂ ಜಪಿಸಿ ಹರಿ[೧]ಯ ಶಿರದೊಳು[೧] ತಳಿಯಲು ೩೪

೧ ಯುಕ್ತಮಾಂಗದಲಿ ನೆರೆ (ಕ. ಚ.)

ಬಾಲಾರ್ಕಕೋಟಿಗಳ ಕಾಂತಿಯಂ ಕೀಳ್ಪಡಿಪ
ಲೋಲ ಚಿಜ್ಜ್ಯೋತಿಯಂ ನಾ ಕಂಡೆನೆನಲಾಗ
ಫಾಲಾಕ್ಷ ತದ್ಭಸಿತಮಂ ಭಕ್ಷಿಸೆನಲು ಮನವೊಲಿದು ಭಯಭಕ್ತಿಯಿಂದ
ನೀಲಾಂಗ ಸೇವಿಸಲ್ಕಾಯಮದು ಕಾಂಚನ ವಿ
ಶಾಲವಲ್ಲರಿಯಂತೆ ಥಳಥಳಿಸುತಿರೆ ಕಂಡು
ಬಾಲೇಂದುಧರ ನಾನು ಧನ್ಯನಾದೆನುಯೆಂದು ಕೀರ್ತಿಸಿದನಾ ಸ್ಥಾನದೊಳ್ ೩೫

ವರ ಗೌತುಮನ ಲಗ್ನಮಂಟಪದಿ ನೆರೆದಿರ್ದ
ಸುರಸಂಕುಲಂ ಅಹಿಲೆಯಾರೂಪಮಂ ಕಂಡು
ಸ್ಮರತಾಪದಿಂ ಭ್ರಾಂತಗೊಂಡಿರಲು ತಿಳಿವುತ್ತ ಮುನಿ ಮುನಿವುತಾಕ್ಷಣದಲಿ
ಪರಮ ಸುಜ್ಞಾನಶೂನ್ಯವು ನಿಮಗೆ ಸಂತತಂ
ಸ್ಥಿರವಾಗಲೆಂದೆನುತ ಶಾಪಿಸಲ್ಕದರಂತೆ
ಮರುಳಾಗಿ ತಮತಮಗೆ ಭ್ರಮೆಯಿಂದ ದೂರ್ವಾಸನಾಶ್ರಮಕೆ ನಡೆತಂದರು ೩೬

ಬಂದು ಸಾಷ್ಟಾಂಗ ಪ್ರಣಮಿತರಾಗಿ ದೈನ್ಯದಿಂ
ಮುಂದುವರಿಯದ ಮೂರ್ಖರೆಲೆ ದೇವ ಗೌತುಮನ
ಸುಂದರಾಂಗಿಯ ಗಾಡಿಯಂ ನೋಡಿ ಮೋಹಿಸಲು ಶಾಪ ಸಮನಿಸಿತಾತನಿಂ
ಇಂದು ಸುಜ್ಞಾನವಿಲ್ಲದೆ ನಿತ್ಯ ನೇಮಗಳು
ಬೆಂದು ಪೋದವು ಬಳಿಕ ಭವದೀಯ ಪದಪದ್ಮ
ದ್ವಂದ್ವಗಳಿಗೆರಗಬೇಕೆಂದೆನುತ ಬರವಾಯ್ತು ಲಾಲಿಪುದು ಕಾರುಣ್ಯದಿಂ ೩೭

ಎನುತ ಬಿನ್ನೈಪ ನುಡಿಗೇಳುತ್ತ ದೂರ್ವಾಸ
ಮುನಿಪ ಕರುಣಾವಲೋಕನದಿಂದೆ ವಿಶ್ವಾಸ
ವನು ಕೊಟ್ಟು ನಿಜಪಾತ್ರೆಯೊಳಗಿರ್ಪ ಭಸಿತಮಂ ಹಸ್ತದಿಂದಲಿ ಪಿಡಿವುತ
ವಿನುತ ಗಾಯತ್ರಿ ಶತರುದ್ರೀಯ ಪಂಚಾಕ್ಷ
ರನು ಒಸೆದು ಸ್ಮರಿಸುತ್ತ ಗೀರ್ವಾಣತತಿಯ ಮುಖ
ವನಜದೊಳು ತಳಿಯಲಜ್ಞಾನಮದು ಬಯಲಾಗಿ ಸುಜ್ಞಾನ ಪ್ರಜ್ವಲಿಸಿತು ೩೮

ಸಕಲ ಗೀರ್ವಾಣರಾಕ್ಷಣದಲ್ಲಿ ತಮತಮಗೆ
ಅಕಲಂಕಜ್ಯೋತಿಯಂ ಕಂಡೆವೆಂದೆನುತ ಮುನಿ
ನಿಕರವಲ್ಲಭನಂಘ್ರಿಗಳಿಗೆರಗಿ ಭಕ್ತಿಯಿಂ ಬೀಳ್ಕೊಂಡು ಭರದಿಂದಲಿ
ಚಕಿತಮಣಿಗಣಖಚಿತ ಪುಷ್ಪಕಂಗಳನಡರಿ
ಸುಖದಿಂದ ಕೈಲಾಸಪುರದತ್ತ ತೆರಳಿದರು
ಪ್ರಕಟ ಶ್ರೀ ಭಸಿತದುನ್ನತಿಯ ನೀ ಕೇಳೆಂದು ಮಹಲಿಂಗ ಮುನಿ ಪೇಳ್ದನು ೪೯

ಗುರು ವಸಿಷ್ಠಾನ್ವಯದಿ ಸಂಭೂತನೆನಿಸಿರ್ದ
ಕರಣ ದಾಯಾದ್ಯರಟ್ಟುಳಿಯಿಂದಲಹುಬಲಾ
ನರಸಿಂಹನಾಶ್ರಮದಿ ಮುನಿಶಾಪದಿಂ ಮಕ್ಷಿಕನುಮಾಗಿರಲು ಕೇಳುತ
ಕರುಬದಿಂದಾ ವೈರಿಗಳು ಬಂದು ಹತಿಸಲ್ಕೆ
ಮರುಗುತ್ತಲವನ ಸತಿ ಮಕ್ಷಿರೂಪದ ವರನ
ವರ ದಧೀಚಿಯ ಬಳಿಗೆ ತರಲು ಪ್ರಾಣಮನಿತ್ತ ಶ್ರೀ ಭಸಿತದಿಂ ಭೂವರಾ ೫೦

ಯತಿ ಕುಲೋತ್ತಮ ವ್ಯಾಘ್ರಪಾದಸಂಭವನೆನಿಪ
ಮತಿವಂತನುಪಮನ್ಯು ಪಂಚಾಬ್ದದೊಳು ತನ್ನ
ಹಿತದಿಂದೆ ಪಾಲಿಸಿದ ಮಾತೆಯಿಂ ಮಂತ್ರೋಪದೇಶಗಳ ನೆರೆ ಪಡೆಯುತ
ಕ್ಷಿತಿಯೊಳಸಮಾಕ್ಷನಂ ಭಜಿಸುತ್ತ ಪಾಲುಮಂ
ರತಿಯಿಂದೆ ನಾ ಪಡೆವೆನೆಂದೆನುತ ಹಿಮಶೈಲ
ಕತಿ ವೇಗದಿಂ ಬಂದು ಶಿವನಿಲಯಮಂ ರಚಿಸಿ ಲಿಂಗಸ್ಥಾಪನಗೈಯುತ ೫೧

ಚಿತ್ತಜಾಂತಕನಮಲಮೂರ್ತಿಯಂ ನೆಲೆಗೊಳಿಸಿ
ಚಿತ್ತದೊಳ್ ತನ್ನಿರವ ತಾನರಿದು ಕರಣಗಳ
ವೃತ್ತಿಯಂ ತಡೆದು ಭಸಿತಾನುಲೇಪನದಿಂದೆ ಹೃತ್ಕಂಜಕಿಂಜಲ್ಕದಾ
ಸತ್ಯ ಚಿತ್ತಾನಂದ ಚಿನ್ಮಯನ ಧ್ಯಾನದೊಳ
ಗತ್ತ ಸುಖದಿಂದಿರಲು ಭಾವಿಸುತೆ ಭಯದಿಂದೆ
ಮೃತ್ಯುಹರನತ್ತ ಭೂತಪಿಶಾಚಿಗಳನಟ್ಟಿ ಬಂದೊದರುತಿರಲಾಕ್ಷಣಂ ೫೨

ಬೆದರದಲಿ ಮನದೊಳಗೆ ಬಾಲನುಪಮನ್ಯು ಮುನಿ
ಹೃದಯದೊಳು ಮದನಾರಿಪದಧ್ಯಾನಮಂ ಬಲಿದು
ಸದಮಲಮಹಾಪರಮ ಪಂಚಾಕ್ಷರೀ ಮಂತ್ರವನು ಜಪಿಸೆ ಕೇಳುತ್ತಲಿ
ವಿದಿತ ಭೂತ ಪಿಶಾಚಿ ಶಾಕಿನಿಯು ಡಾಕಿನಿಯು
ಒದಗಿರ್ದ ಬೇತಾಳ ಯಕ್ಷರಕ್ಷಾದಿಗಳು
ಮುದದಿಂದ ಮುಕ್ತಿಪದನೆಯ್ದಿದವು ಬಳಿಕ ಸಂತಸವನೆಸಗುತ್ತಿರ್ದನು ೪೩

ಉಪಮನ್ಯು ಮನವೊಲಿದು ಮಾಡುತಿಹ ಘನತರದ
ತಪದುಗ್ರತೆಯನಾವ ಕಬ್ಬಿಗರು ಕುವಲಯದೊ
ಳುಪಮಿಸುವರೆಲೆ ಭೂಪ ಲಾಲಿಪುದು ಭಕ್ತಿಯಿಂ ತದ್ಗಿರಿಯ ತಪ್ಪಲದೊಳು
ಚಪಲತನದಂಗವೃತ್ತಿಯನಳಿದು ನಿಶ್ಚಲದಿ
ಗುಪಿತ ಚಿಜ್ಜ್ಯೋತಿಯೊಳು ಬೆರೆದಿರಲು ಜ್ವಾಲೆಯದು
ವಿಪರೀತವಾಗಿ ದಿಗ್ಜಾಲದೊಳ್ ಪರಿಕಲಿಸಿಕೇನೆಂಬೆನಚ್ಚರಿಯನು ೪೪

ಕುಲಗಿರಿಗಳುಂ ಕಾದು ಚಿಳಿಲೆಂದು ಪಾರುವೊಲ್
ಜಲಧಿಗಳು ತಾಳ್ದು ತಳಮಳಿಸುತ್ತ ಬೀಳುವೊಲು
ಕಳವಳಿಸುತಷ್ಟದಿಗ್ದಂತಿಗಳು ಬೆನ್ನುರಿದು ಬೀಳ್ವವೊಲ್ ಭೂಲಲನೆಯ
ತಲೆಯೊಳಗೆ ತಾಳ್ದ ನವ ಫಣಿರತ್ನಗಳ್ಸಿಡಿದು
ಕೆಲಬಲದೊಳೊಗೆವವೋಲತ್ತತ್ತ ಜ್ವಾಲೆ ತಾ
ನಿಳೆಯೊಳಗೆ ಪರ್ಬಿತೆನಲುಳಿದ ಸಚರಾಚರದ ಭಂಗಮನದೇಂ ಬಣ್ಣಿಪೆಂ ೪೫

ಹರಿಬ್ರಹ್ಮಸುರರೆಲ್ಲ ಕೂಡಿದರ್ ಬಾಡಿದರ್
ವರ ಸೂರ್ಯ ಚಂದ್ರಮರ್ ಕುಂದಿದರ್ ಕಂದಿದರ್
ಶರಜನ್ಮ ನಂದಿ ದಾರುಕ ಮುಖ್ಯರಚ್ಚರಿಯನಾಳಿದರ್ ಕೇಳಿದರ್ ತನ್ಮುನಿಪ
ವಿರುಪ ತಾರಾದಿ೧ಗಳ್ಪೆದಿರುತಂ ಕೆದರುತಂ [ನಿಂಗಿತವನು
ಧರೆಗುದುರುತಿರೆ ಹರನು ಬೆಚ್ಚುತಂ ಮೆಚ್ಚುತಂ
ಸರಸಿಜಾಂಡಮುದುಳಿಯದೆನುತಾಗ ಮರುಗುತಂ ಮನದೊಳಗೆ ಚಿಂತಿಸಿದರು ೪೬

೧ ೪ (ಚ)

ಯತಿಚಂದ್ರ ನೈಷ್ಠೆಯಿಂ ಮಾಳ್ಪ ತಪಕಾಂ ಮಚ್ಚು
ತತಿಶಯದಿ ತನ್ಮನಸಿನಿಚ್ಛೆಯಂ ಸಲಿಸದಿರೆ
ಹತಮಾದಪುದು ಸರಸಿಜಾಂಡ ತಜ್ಜ್ವಾಲೆಯಿಂದೆನುತಾಗ ಹೃತ್ಕಂಜದೊಳ್
ಶಿತಕಂಠ ಕಳವಳಿಸಿ ಶೀಘ್ರದಿಂ ಗಿರಿಜೆಯೊಳ್
ಹಿತದಿಂದೆ ಹೇಳುತ್ತ ಪ್ರಮಥಗಣನಾಯಕರ
ತತಿಯು ನಿಬ್ಬೆರಗಾಗಲುಪಮನ್ಯುವಿನ ಧೈರ್ಯ ನೋಳ್ಪೆನೆಂದೆನುತಾಕ್ಷಣಂ ೪೭

ಕೃತಕದಿಂ ಸುರಪರೂಪವ ತಾಳಿ ಗಿರಿಜೆ ತಾ
ನತಿಶಯದಿ ಶಚಿಯಾಗೆ ಸತ್ಪ್ರಮಥ ನಾಯಕರ
ತತಿಯು ಸುರಕುಲಮಾಗೆ ವೃಷಭೇಶನೈರಾವತನುಮಾಗುತಿರಲಿತ್ತಲು
ಹಿತದಿಂದೆ ಕೈಲಾಸಮಂ ಬಿಟ್ಟು ಹಿಮಶೈಲ
ಕತಿ ತೂರ್ಣದಿಂ ಬಂದು ತದ್ಬಾಲಕನ ತಪವು
ಕ್ಷಿತಿಯೊಳತಿಶಯಮೆಂದು ಕಪಟಾತ್ಮ ಶಿವನೋಡಿ ಕೌತುಕದಿ ತಲೆದೂಗುತ ೪೮

ಕರಣಾದಿಗಳ ಭ್ರಾಂತಿಯಂ ಮೀರುತುಪಮನ್ಯು
ತರಣಿ ಶತಕೋಟಿ ಸಂಕಾಶಮಂ ಕೀಳ್ಪಡಿಪ
ಪರಬ್ರಹ್ಮಮೂರ್ತಿಯ ಮಹಾಬೆಳಗಿನಿಂಗಿತವನುನ್ಮಣಿಯೊಳೀಸುತ್ತಲಿ
ಪರಮ ಬ್ರಹ್ಮಾನಂದದಿಂ ತ್ರಿವಿಧ ಭ್ರಾಂತಿಗಳ
ಮರೆದು ತನ್ನೊಳಗೆ ತಾ ನಿಜದಲ್ಲಿ ನೆಲಸಿರಲು
ಸುರಪಾತ್ಮನಹ ಶಿವನು ನೋಡಿ ನಸುನಗುತ ಮಾತಾಡಿಸಿದನಾ ಬಾಲನಂ ೪೯

ಮಾಣು ಮಾಣೀ ತಪವನೆಲೆಮುನಿಪಜಾಂಡವದು
ಕಾಣದು ಕಣಾ ನಿನ್ನ ಜ್ವಾಲೆಯೊಳ್ ಸ್ಥೈವರೆದು
ಊಣೆಯಿಲ್ಲದೆ ದಗ್ಧಮಾದಪುದು ನಿಮಿಷದೊಳಗಾವನಂ ಭಾವಿಸುವೊಡೆ
ಜಾಣತನಮಿಲ್ಲಮೃತಮಂ ಕೊಡುವೆ ಪರಮಗೀ
ರ್ವಾಣವರನೆನ್ನುಳಿದು ಬಳಲಬೇಡೆಂದೆನಲು
ಕೇಣದಿಂ ನೋಡಿ ಸಿಂಹನ ಬಯಸಿ ನರಿ ಬಂದುದೆನುತಾಗ ಗರ್ಜಿಸಿದನು ೫೦

ತರಳ ನೀನೆಂದು ಮೈದೋರಿದರೆ ನಿಷ್ಠುರದ
ಬಿರುನುಡಿಯನಾಡಿದೆಯಲಾ ಮರುಳೆ ನನ್ನಲ್ಲಿ
ಸುರಧೇನು ಸುರಕುಜಂ ಸುರಮಣಿಯು ಪೀಯೂಷಮುಂಟು ಬೇಡಿದರೀವೆನು
ಗರಳಮಂ ಸೇವಿಸಿದ ಹರನಡಿಯ ಸ್ಮರಿಸಿದರೆ
ವರಸುಧೆಯ ತಾನೆತ್ತ ಪಾಲಿಸುವನೀ ಜಗದಿ
ಬರಿದೆ ಬಳಲಲಿಬೇಡವೆನೆ ವ್ಯಾಘ್ರಪಾದಸುತ ಕೇಳಿ ಕೋಪದಿ ನುಡಿದನು ೫೧

ಎಲೆ ಪುರಂದರ ಮೂರ್ಖ ಪೂರ್ವದೊಳಗಾವನ ಸು
ಚಲನಮಂ ಪೂಜಿಸುತ್ತಸ್ವಭೋಗಗಳ ಸಂ
ಕುಲಮಂನುರೆ ಪಡೆದು ಬಾಳ್ದಪೆ ನೀನು ಸ್ವರ್ಗಾಧಿಪತಿಯಾಗುತಾಕ್ಷಣದೊಳು
ಜಲಜಾಕ್ಷ ಬ್ರಹ್ಮ ಮೊದಲಾದಸಮ ಸುಮನಾಳಿ
ಒಲಿದಾವನಂ ಭಜಿಸಿ ದೇವತ್ವವನು ಹಡೆದು
ಬಳಿಕಾವನಾಜ್ಞೆಯಿಂ ಜೀವಿಪರು ನಾನಾತನಂ ಭಜಿಪೆ ಪೋಗೆಂದನು ೫೨

ಎಂದ ನುಡಿಗೇಳಿ ಗಹಗಹಿಸುತ್ತ ಕಪಟಾತ್ಮ
ನಂದು ಮತ್ತವನ ಕೆಣಕುವೆನೆಂದು ಲೀಲೆಯಿಂ
ಕಂದ ನೀ ಬಯಸಿದಿಷ್ಟಾರ್ಥಗಳ ನಾ ಕೊಡುವೆ ಬೇಡುಪೇಕ್ಷಿಸಬೇಡವು
ಇಂದು ಪಾಪಿಯ ಕಣ್ಗೆ ಪರುಷ ಕಲ್ಲಾಯ್ತೆಂಬ
ಸಂದ ಗಾದೆಯ ನುಡಿಯ ತೆರನಾಯ್ತು ನಿನ್ನಪರಿ
ಯೆಂದೆನಲು ಕೇಳಿ ಕೋಪಾರೂಢದಿಂ ಕೃತಕ ಸುರನಾಥಗಿಂತೆಂದನು ೫೩

ಹಸಿ ತೃಷೆಗಳಾಗದಿಹ ವರಮೂಲಿಕೆಯ ನಿನಗೆ
ನಿಸದದಿಂದಲಿ ಕೊಡುವೆ ನೀರಾನ್ನಗಳನೆನಗೆ
ಒಸೆದು ನೀಡೆಂದೆಂಬ ಬಂದುಕನ ಪರಿಯಾಯ್ತು ನಿನ್ನಿರವು ಪುಲಸಗ್ಗಿಗಾ
ಅಸಮಾಕ್ಷನಲ್ಲದುಳಿದಸುರಾರಿಗಿಸುರಾರಿ
ಬಿಸಜಭವ ಗಿಸಜಭವ ಇಂದ್ರ ಗಿಂದ್ರಾದಿಸುರ
ವಿಸರ ಗಿಸರವನೆಣಿಕೆಗೊಳೆನೊಮ್ಮೆ ಮರಿದಾದೊಡಂ ಪೋಗು ಶಾಪಾತ್ಮನೇ ೫೪

ಎಂಬ ನುಡಿಗೇಳಿ ತನ್ನೊಳು ತಾನೆ ಮೆಚ್ಚುತ್ತ
ಶಂಬಧರರೂಪನಾಕ್ಷಣ ಸ್ನೇಹಕೋಪದಿಂ
ಮುಂಬರಿವುತೆಲೆ ಬಾಲ ಸುಡುಗಾಡದೊಳಗೆ ಮನೆ ಮಾಡುತ್ತ ತಿರಿದುಂಬುವ
ಅಂಬಿಕಾಪತಿಯು ಭ್ರಮೆಗೊಂಡಿಹುದು ನಿನಗೆಂದು
ರಂಬಿಸುತ್ತಾತ್ಮದೂಷಣೆಗೆಯ್ಯೆ ನೋಡುತ್ತ
ಲಂಬಿಸುವ ಕೋಪದಿಂದೆಲೆ ಪಾಪಿ ಸಗ್ಗಿಗನೆ ಶಿವನಿಂದೆಯಂ ಮಾಡಿದಾ ೫೫

ಫಲವನನುಭವಿಸೆಂದು ಶ್ರೀ ಭಸಿತಮಂ ಹಸ್ತ
ಜಲದೊಳ್ ಪಿಡಿದು ಘೋರಾಸ್ತ್ರಮಂ ಸ್ಮರಿಸುತ್ತ
[1]ಖಲನೆ ಕೆಡೆ ಕೆಡೆ ಬೂದಿಯಾಗೆನುತ ಚೆಲ್ಲುತಿರೆ ಕೇಳಿದಾತ್ಮದ್ರೋಹವು
ಅಳಿಗೆಂದು ಪಾಶುಪತದಿಂ ತನ್ನ ಮೇಲೆ ತಾ
ತಳೆದುಕೊಳುತಿರೆ ನೋಡುತುಪಮನ್ಯು ಬೂದಿಯಾ
ಗುಳಿಯನೆಂದೆನುತಸಮ ಭೀತಿಯಿಂದುಪಹರಿಸುತೆಸೆದಸ್ತ್ರಮಂ ತನ್ನೊಳು ೫೬

ಕರುಣದಿಂ ಪಿಡಿದು ಬಗೆಯುವುತೆಲೆ ಬಾಲ ಮುನಿ
ವರನೆ ಉಪಮನ್ಯು ಪುರಹೂತನುಂ ನಾನೆಕ-
ಣ್ದೆರೆದು ನೋಡಾ ನಿನ್ನ ಮನದ ಧೈರ್ಯವ ನೋಡಲೋಸುಗದಿ ಬಂದಿರ್ದೆನು
ಮರೆಯೆನ್ನ ಶತಸಾವಿರಪರಾಧಗಳನಿಂದು
ಪರಿಕಿಸದಿರಾ ಮಗನೆ ಎಂದೆನುತ ಭುಲ್ಲವಿಸಿ
ತರಣಿ ಶತ[2]ಕೋಟಿಗಳ ಕಾಂತಿಯಿಂ ಪ್ರಜ್ವಲಿಪ ನಿಜರೂಪಮಂ ತೋರ್ದನು ೫೭

ಕಾಂಚನಲತಾಳಿ ಸಮೆದಂಚಿತ ಜಟಾಪಟಲ
ಪಂಚಾನನಂ ಮಿಸುಪ ಫಾಲಾಕ್ಷ ಬಾಲೇಂದು
ಮಿಂಚುವ ಮಹಾದೈತ್ಯ ರುಂಡಮಾಲಾಶ್ರಿತಂ ವಿಷಕಂಠವರ ಶೈಲಜಾ
ಪಂಚಶರಪಿತನಕ್ಷಿಪದಪದ್ಮ ವೃಷಭಧ್ವ
ಜಾಂಚಿತ ಗಜಾಜಿನಾಂಬರ ದೇವನೆಡೆವಿಡದೆ
ಪಂಚವಿಷಯವಿದೂರನುಪಮನ್ಯುವಿಗೆ ತನ್ನ ಮುನ್ನಿನಾಕೃತಿದೋರಲು ೫೮

---

೧ ಬ (ಕ. ಚ.)  ೨ ಶಿ (ಚ.)

ಕಂಡು ಮೈಮರೆಯೆ ಪುಳಕಾವರಿಸೆ ಭೀತಿಮುಂ
ಕೊಂಡು ಗದ್ಗದಮುಣ್ಮೆ ಸ್ವೇದಕಣ ಸ್ರವಿಸುತಿರ
ದಿಂಡುಗೆಡವುತ್ತವಗುಣಶ್ರುವಿಂ ತನ್ನೊಳಗೆ ತಾ ಮರುಗಿ ಕರಗುತ್ತಲಿ
ಖಂಡಚಂದ್ರಕಿರೀಟ ನಿನ್ನಿಲವನರಿಯದಲೆ
ಅಂಡಲೆದು ಬೈದೆನಕಟೆನ್ನವೊಲ್ ಪಾಪಿ ಭೂ
ಮಂಡಲದೊಳಿಲ್ಲೆಂದು ಬಳಲಿ ಬಾಯಾರುವನ ಮೊಗ ನೋಡಿ ಗಂಗಾಧರಾ ೫೯

ಎಲೆ ಮಗನೆ ಉಪಮನ್ಯು ನಿನ್ನ ಬೈಗುಳ ನನಗೆ
ಕಲಿತ ವೇದೋಕ್ತಿಗಳ್ ಮರಳಿ ಇನ್ನೊಮ್ಮೆ ಮನ
ವೊಲಿದು ಬೈದರೆ ಸ್ವರ್ಗ ಮರ್ತ್ಯ ಪಾತಾಳದೊಳು ಧನ್ಯನಾಗುವೆನೀಕ್ಷಣಂ
ಬಳಲಿ ಬಾಯಾರದಿರು ಮನದಿಷ್ಟಮಂ ಬಿಡದೆ
ಛಲದಿಂದೆ ಪೇಳು ಪಾಲಿಪೆನೆಂಬ ನುಡಿಗೇಳಿ
ಚೆಲುವ ಪಾಲನ್ನೀಯ ಬೇಕೆನುತ ಬಿನ್ನವಿಸೆ ನಸುನಗುತ ಗಿರಿಜಾಧವಂ ೬೦

ತರಳನೀನಿರ್ದಲ್ಲಿ ಕ್ಷೀರದಧಿಸರ್ಪಿಗಳ
ಶರಧಿಗಳ್ ನೆಲಸಿರಲಿ ಪಾಯಸದ ಪೋಳಿಗೆಯ
ಗಿರಿಗಳಿರುತಿರಲಿ ಸಕ್ಕರೆಯ ಸಂಡಿಗೆಯ ವರ ಹಪ್ಪಳುಪ್ಪಿನಕಾಯಿಯ
ಸರಸ ಬೆಟ್ಟಗಳು ಗಟ್ಯ್ಕಗಿರಲಿ ಸಂತತಂ
ವರ ಬಾಂಧವರ ಕೂಡಿ ಭೋಜನಂಗೈದು ಸುಖ
ದಿರುಯೆಂದು ಪರಸುತ್ತ ಪರಮ ಸಂತೋಷದಿಂ ಪರಮೇಶನಿಂತೆಂದನು ೬೧

ಬೇಡು ಬೇಡಿನ್ನೊಂದನೆನೆ ನಿನ್ನ ಪದಭಕ್ತಿ
ರೂಢಿಯೊಳಗೆನ್ನಸುವುಮಿರ್ಪನ್ನಬರ ಬಿಡದೆ
ಕೂಡಿರಲಿ ಎನಲೀಶ ನಿನ್ನೊಳುಂಟಾ ವರಂ ಇನ್ನೊಂದನೇ ಬಯಪುದು
ಗಾಡಿಯಿಂದೈದು ಬರಿಸದ ಹರೆಯು ಜಗದೊಳಗೆ
ಪಾಡಳಿಯದಂತಿರಲಿ ಕೈಲಾಸ ದ್ವಾರದೊಳ್
ನೋಡಿದರೆ ದೌವಾರಿಕರ್ ತಡೆಯದಿರಲೆನಗೆ ವರವಿದುವೆ ನಿಜವೆಂದನು ೬೨

ಎನ್ನ ಮೋಹದ ಪುತ್ರರೆಂದೆನಿಪ ಗುಹಗಣರಿ
ಗಿನ್ನು ತಡೆಯಾದೊಡಂ ನಿನಗೆ ತಡೆಯುಹುದೆ ಬಾ
ಚಿನ್ನನೇ ಎಂದೆನುತ ಗಿರಿಜಾತೆ ಮೈದಡವಿ ಬಿಗಿಯಪ್ಪಿ ಚುಂಬಿಸುತಲಿ
ನನ್ನಿಯಿಂದಿಹುದಿಲ್ಲಿ ಹರಿಮುಖಾಮರರೆಲ್ಲ
ನಿನ್ನ ಸೇವೆಯಗೈದು ಶಿಷ್ಯರಹರವರಿಂಗೆ
ಮನ್ನಿಸುತ ಶಿವಧರ್ಮಮಂ ಬೋಧಿಸೆಂದೆನುತ ವರವಿತ್ತು ಸಂತೋಷದಿಂ ೬೩

ನಂದಿ ರೇಣುಕ ದಾರುಕಾದಿ ಗಣಸಹಿತ ಶಿವ
ನಂದು ಕೈಲಾಸಕ್ಕೆ ಪೋದನೆಲೆ ಭೂಪಾಲ
ಮುಂದು ಕೇಳಿನ್ನೊಂದು ಸತ್ಕಥೆಯ ಭಕ್ತಿಯಿಂ ಮುನ್ನೋರ್ವ ಭೂದಿವಿಜನು
ಕಂದರ್ಪನಾಹವದಿ ಮನಸೋತು ಪರಸತಿಯು
ಹೊಂದಿರುತ ಬಹುಕಾಲವಿಡಿದು ಬಾಳುತಿರಲ್ಕೆ
ಒಂದು ದಿನ ಚಂಡಾಲ ವನಿತೆಯನು ನೋಡುತ್ತ ನೆರೆದನಾಕೆಯ ಮೋಹದಿಂ ೬೪

ಕುಲಭ್ರಷ್ಟನಿವನೆಂದು ಸರ್ವ ವಿಪ್ರೋತ್ತಮರು
ತಿಳಿದು ಪುರಮಂ ಬಿಡಿಸಿ ಹೊರಹಾಕಲಾ ಶ್ವಪಚ
ಲಲನೆಯೊಳು ಬಹುಕಾಲ ಸ್ಮರಸುಖದಿ ಬಾಳುತಿರೆ ಘನತೊನ್ನುವಾವರಿಸುತ
ಪುಳ ಕೀವು ಸುರಿವುತ್ತ ದೇಹಮದು ಕೊಳೆವುತಿರೆ
ಪೊಲಗೇರಿಯಂ ಬಿಟ್ಟು ಸುಡುಗಾಡದೊಳ್ ಬಂದು
ಕಳವಳಿಸಿ ಬಿದ್ದು ಹರಣವಗಳೆವುತಿರಲಲ್ಲಿ ಬೂದಿಯೊಳು ಮಲಗಿರ್ಪವಾ ೬೫

ಕುಕ್ಕುರನು ಕಂಡು ಒಡಲಾಸೆಯಿಂ ಬಂದವನ
ಬಿಕ್ಕಮಂ ತಿನಲೆಂದು ಸರ್ವಾಂಗಗಳನೆಲ್ಲ
ಲೆಕ್ಕಿಸುತ್ತಸಮ ಪಾಪಾಳಿರೂಪಮದಾದ ಭೂಸುರಂ ಗಹಿಸುತ್ತಲಿ
ನೆಕ್ಕಿನಂಜಿದರೆನಗೆ ನರಕ ಘಟಿಸುವದೆಂದು
ಮಿಕ್ಕವನ ಬಾಯೊಳಗೆ ಮೂತ್ರಮಂ ಬಿಡಲಸುವು
ಚಕ್ಕನೇ ಪೋಗಲಾಕ್ಷಣ ಕೊಲ್ಲಲೈತಂದ ಶಮನಕಿಂಕರರಾತನ ೬೬

ಸರ್ವಾಂಗದೊಳಗಿರ್ಪ ವರ ಚಿದಾಭಸ್ಮವನು
ಓರ್ವ ಕೌತುಕದಿಂದೆ ನೋಡಿ ನಡುನಡುಗುತಿರೆ
ಶರ್ವದೂತರು ಬಂದು ಮಣಿಖಚಿತ ಪುಷ್ಪಕದಿ ಕುಳ್ಳಿರಿಸಿ ಸಂಭ್ರಮದಲಿ
ಉರ್ವಿ ಕೊಂಡಾಡುತ್ತ ಕೈಲಾಸಪುರಕೊಯ್ದು
ನಿರ್ವಂಚಕದಿ ಪ್ರಮಥ ಪದವಿಯೊಳಗಿಂಬಿಟ್ಟ
ರುರ್ವೀಶ ಭಸಿತ ಮಹಿಮೆಯದಿಂತು ಕೇಳೆಂದು ಮಹಲಿಂಗಮುನಿ ಪೇಳ್ದನು ೬೭

ಮಡಿದಿರ್ದ ಪಿತನ ಶವಮಂ ಪೌರಜನರಿಲ್ಲ
ಸುಡುಗಾಡದೊಳ್ಕೂಡಿ ಸುಡುತಿರಲು ವಹಿಲಯ್ಯ
ನೆಡೆವಿಡದೆ ನೋಡುತ್ತ ವೈರಾಗ್ಯದಿಂದೆನ್ನ ಜಡತನುವ ಸೌರಾಷ್ಟ್ರದ
ಮೃಡಸೋಮನಾಥನಡಿದಾವರೆಗೆ ಒಪ್ಪಿಸುತೆ
ದೃಢದಿಂದೆ ಮುಕ್ತಿಪದ ಪಡೆವೆನೆಂದೆನುತಾಗ
ನಡೆಗೊಂಡು ಬಂದು ತನ್ನಯ ತೂಕ ಗುಗ್ಗುಳದಿ ಭಕ್ತಿಯಿಂ ಭಜಿಸುತ್ತಲಿ ೬೮

ತಲ್ಲಿಂಗದಸಮ ನಿರ್ಮಾಲ್ಯ ಪತ್ರಿಗಳ ತಾ
ಮೆಲ್ಲುತಿರೆ ಗೌಳತಪಸಿಗಳಾಗ ನೋಡುತ್ತ
ಖುಲ್ಲತನದಿಂ ದಹಿಸಲಾ ಭಸ್ಮವಂ ಸೇವಿಸುತ್ತೊಂದು ದಿನ ಭಕ್ತಿಯಿಂ
ಪಲ್ಲವಲತಾಂಜ ಜಲಕುಂಭಂಗಳಿಂದಿರಿಸಿ
ಸಲ್ಲಲಿತ ಕಾವಡಿಯ ಪೊತ್ತು ಸೌರಾಷ್ಟ್ರಪತಿ
ಮೆಲ್ಲಡಿಯ ಧ್ಯಾನದಿಂ ಬರುತಿರಲು ಪಾದದೊಳ್ ಬೆಸಿಯೊಂದು ನಾಟಲವನು ೬೯

ಕುಂಟುತ್ತ ಒಕ್ಕಾಲಿನಿಂ ನಡೆದು ಬರುತಿರಲು
ಬಂಟನಿವನೆಂದು ನಿಜಮನದಲ್ಲಿ ಮೆಚ್ಚಿ ಸಿತ
ಕಂಠ ಸೌರಾಷ್ಟ್ರಪತಿ ಸೋಮನಾಥಂ ಬಂದು ಶಬರಾಂಗದಿಂ ಕೇಳ್ದನು
ಒಂಟಿಗಾಲುಮದೇಕೆ ಬಸಿಯು ತಾನಿರ್ಪುದೆನೆ
ಆಂಟದಲಿ ನಾ ತೆಗೆವೆನೆಂದೆನುತ ಕೀಳಲ್ಕೆ
ಮೀಂಟಿ ತದ್ಗಾಯದೊಳ್ ಶ್ರೀಭಸಿತ ಸ್ರವಿಸುತಿರೆ ಬಯಲಾದನಾ ಲುಬ್ಧಕಂ ೭೦

ಶಿವ ಮಹಾದೇವ ಸೌರಾಷ್ಟ್ರಪತಿ ಸೋಮನಾ
ಥವನು ಶಬರಾಕೃತಿಯಲೈತಂದು ಬಸಿಗೀಳ್ದು
ತವಕದಿಂ ಬಯಲಾದನೆಂದೆನುತ ಬಂದು ತಲ್ಲಿಂಗವನು ಭಜಿಸುತ್ತಲಿ
ಭವಹರಗೆ ಗುಗ್ಗುಳದ ನೇಮ ತಪ್ಪುವದೆಂದು
ವಿವಿಧಾನುರಾಗದಿಂದಾ ಭಸ್ಮಕಾಯವನು
ನವಗಂಧಮುಣ್ಮುತಿರೆ ಧೂಪಾಗ್ನಿಗೊಪ್ಪಿಸುತ ಕೈಲಾಸವಂ ಸಾರ್ದನು ೭೧

ಇಂದ್ರಾದಿ ಸುರಪದವ ಧಿಕ್ಕರಿಸಿ ವ್ಯಾಸಮುನಿ
ಚಂದ್ರಮನು ದಾರುಕಂ ನೈಮಿಷಾರಣ್ಯದೊಳು
ಚಂದ್ರಧರನಂ ಕುರ್ತು ತಪವನಾಚರಿಸುತಿರೆ. ರಂಭೆ ತಾ ಬಂದಾಕ್ಷಣಾ
ಸಾಂದ್ರ ಸ್ಮರನಾಗಮದ ಕಲೆಗಳಿಂದವನ ಘನ
ಇಂದ್ರಿಗಳನಾರಯ್ಯೆ ನಿಷ್ಕಾಮನಾಗಿರಲು
ಚಂದ್ರಮುಖಿ ತನ್ನೊಡಲುಮಂ ಬಗೆದು ತೋರಲ್ಕೆ ಪಾಲ್ಸುರಿದು ಪರಿವುತ್ತಿರೆ ೭೨

ತನ್ನ ಚಿತ್ಕಾಯದಿಂಗಿತವ ನೋಡೆಂದು ಯತಿ
ರನ್ನ ಶುಕಮುನಿಯು ಚೆಳ್ಳುಗುರಿನಿಂ ಬಗೆಯಲ್ಕೆ
ನನ್ನಿಯಿಂ ಶ್ರೀ ಭಸಿತ ಸ್ರವಿಸುತಿರೆ ಕಂಡು ಕೌತುಕವಾಂತು ರಂಭಾಂಗನೆ
ಮನ್ನಿಸುತ್ತಡಿಗೆರಗಿ ಮರಳಿ ಶಕ್ರನ ಪುರಕೆ
ಬಿನ್ನಣವನುಳಿದು ಬಂದರುಹಿದಳ್ ಭೂಪಾಲ
ಇನ್ನು ವರ ಭಸ್ಮನಿಷ್ಠರ ಮಹಿಮೆ ಕೇಳೆಂದು ಮಹಲಿಂಗ ಗುರು ಪೇಳ್ದನು ೭೩

ಕಾಮಭ್ರಾಂತವಿದೂರೆ ಕರ್ಮಕುಲಸಂಹಾರೆ
ಸೋಮಮುಖಿ ಅಕ್ಕಮಹದೇವಿಯಮ್ಮನ ನವ್ಯ
ಕೋಮಲಾಂಗದ ಗಾಡಿಯಂ ನೋಡಿ ಭ್ರಮೆಗೊಂಡು ಕೌಶಿಕಧರಾಕಾಂತನು
ಕಾಮಿಸಲು ಕಾಮಾಂಧನಿವನೆಂದು ತಿಳಿದು ತತ್
ಕಾಮಿನಿಯು ತನ್ನ ಕಿರುವೆರಳಿನಿಂ ಗುಹ್ಯದೊಳ್
ಪ್ರೇಮದಿಂ ಶ್ರೀ ಭಸಿತಮಂ ತೋರ್ದಳೆಲ್ಲರಿಗೆ ಭೂಪಾಲ ಕೇಳೆಂದನು ೭೪

ನರಕಪಾಲವ ತೃಪ್ತಿಗೈಯಲೋಸುಗದಿಂದೆ
ಹರನಖಿಳ ಲೋಕದೊಳ್ ಭಿಕ್ಷಾಟನಂಗೆಯ್ಯೆ
ಪರಿಪೂರ್ಣವಾಗದಿರೆ ದ್ವಾರಕಾಕ್ಷೇತ್ರಕ್ಕೆ ಬಂದು ಗೋಪಾಂಗನೆಯರಾ
ವರ ಭಕ್ತಿಯಂ ಬಿಡದೆ ಕೈಕೊಂಡು ಬಳಿಕ ಶ್ರೀ
ಹರಿಯ ರಾಜಾಲಯಕೆ ಬರಲು ಘನ ಭಕ್ತಿಯಿಂ
ದಿರದೆ ಸಕಲ ಪದಾರ್ಥಗಳ ನೀಡೆ ತುಂಬದಿರೆ ಕಂಡಾಗ ಕೌತುಕದೊಳು ೭೫

ತಲೆನೋಡಿ ತಿವಿದು ಸೃಗ್ಭಿಕ್ಷಮಂ ನೀಡುತಿರೆ
ಬಳಿಕ ಕಳವಳಿಸುತ್ತ ನಿಶ್ಚೇತನದಿ ಬಳಲು
ತಿಳೆಯೊಳಗೆ ಮೂರ್ಛೆಯಿಂ ಥರಥರಿಸಿ ಬೀಳಲ್ಕೆ ಜಲಜಾತಭವತಾತನು
ಅಳಿದ ಸಂಘಾಯುಕ್ಕೆ ಶಿವನಂದು ಬಸ್ಮವುಂ
ತಳಿಯೆ ಮುನ್ನಿನ ತೆರದಿ ಥಳಥಳಿಸುತಿರಲೆದ್ದು
ಒಲವಿನಿಂ ಕೊಂಡಾಡಿ ಜೀವಿಸಿದನೆಲೆ ಭೂಪ ಕೇಳಃ ಭಸ್ಮದ ಮಹಿಮೆಯಂ ೭೬

ವಸುಧೀಶ ಬಿಜ್ಜಳಂ ಕಲ್ಯಾಣ ನಗರದೊಳ
ಗಸಮ ಚತುರಂಗ ಬಲಸಹಿತ ಬರುತಿರಲು ಮುಂ
ದೆಸೆಯಲ್ಲಿ ಹೊಲಗೆರೆಯ ಬೂದಿಯಿಂ ಕಂಗೊಳಿಪ ಮಧುಪೂರ್ಣಕುಂಭಂಗಳ
ವಿಸರಮಂ ಕಂಡು ಪರಿಹಾಸ್ಯದಿಂದೆಲೆ ಬಸವ
ಅಸಮ ಭಕ್ತೋತ್ತಮರು ನೊಸಲಲ್ಲಿ ರಂಜಿಸುವ
ಭಸಿತಮಿಲ್ಲಿರ್ಪುದನುಚಿತಮೆಂನಲು ನಸುನಕ್ಕು ದಣ್ಣಾಯಕಿಂತೆಂದನು ೭೭

ಮಧುಪೂರ್ಣ ಕುಂಭಗಳು ನಿಜವೆಲೆ ಮಹೀಪಾಲ
ಮಧುವಲ್ಲ ಭಾವಿಪಡೆ ನೋಡೆನಲ್ ಬಿಜ್ಜಳಂ
ಮುದದಿಂದೆ ಸುರುವಿಸಲು ಸುಧೆಯಾಗಿ ಭೂತಳದಿ ಪರಿವುತಿರೆ ಕಂಡಾಕ್ಷಣಂ
ಒದವಿರ್ದ ಜನರು ಕೊಂಡಾಡಿದರು ಭಕ್ತಿಯಿಂ
ಸದಮಲದ ಶ್ರೀ ಭಸ್ಮಮಹಿಮೆಯಂ ಪೇಳುವಡೆ
ಮದನಾರಿಗರಿದೆಂದು ಮಾಲೋಜಿರಾಜನಿಗೆ ಮಹಲಿಂಗಮುನಿ ಪೇಳ್ದನು ೭೮

ಇಂತೆಂದು ಪಾದಾಂಬುಭಸಿತಮಹಿಮೆಗಳ ಭೂ
ಕಾಂತ ನಿರವಿಸೆ ಕೇಳ್ದು ಮನವೊಲಿದು ತನ್ಮನೀ
ಕಾಂತಂಗೆ ನಮಿಸುತೆಲೆ ದೇವ ತ್ರ್ಯಜಗದೊಳಗೆ ಕೃತಕೃತ್ಯ ನಾನಾದೆನು
ಸಂತತಂ ತಕ್ಷಣಂ ಜಲಭಸ್ಮಗಳ ಬಿಡದೆ
ಸಂತಸದಿ ಸೇವನಂಗೈದು ಬಾಳಸ್ಥಳದೊ
ಳಾಂತುಪೂತಾತ್ಮನಹೆ ಪರಿಪಾಲಿಸೆಂದೆನುತ ಬಿನ್ನವಿಸಲಾಕ್ಷಣದೊಳು ೭೯

ಎಲೆ ಭೂಪ ಬಹುಜನ್ಮಕೋಟಿಗಳೊಳರ್ಚಿಸಿದ
ಸುಲಭ ಪುಣ್ಯೋತ್ಕರ್ಷದೇಳಿಗೆಯಲಾ ನಿನಗೆ
ಫಲವಾಯ್ತು ಚರಣಜಲಭಸ್ಮಗಳ ಮೇಲೆಂದು ತತ್ವಾನುಧಾರಣಗಳ
ನಿಲುಕಡೆಯನರುಹುತ್ತ ಶೈವಾಗಮೋಕ್ತಿಯಿಂ
ದಳಿಕಾದಿ ಸ್ಥಾನಗಳ ತೋರುತ್ತ ಭಕ್ತಿಯಂ
ತಳೆದು ಕೃತಕೃತ್ಯನಾಗೆಲೆ ಮಗನೆ ಮಾಲೋಜಿ ಎಂದೆನುತ ಮಹಪುರುಷನು ೮೦

ಪರಮ ಭಸ್ಮ ಪದಾಂಬುಗಳನಿತ್ತು ಕರುಣದಿಂ
ಪರಸಲ್ಕೆ ಕೈಕೊಂಡು ಭಕ್ತಿಯಿಂದೆರಗಿ ನಿಜ
ಕರಕಂಜಗಳ ಮುಗಿವುತೆಲೆ ದೇವದೇವೇಶ ನಿರುತ ಘೋರ್ಪಡೆಯರಸರಾ
ವರಕುಲಕೆ ಗುರುವು ನೀವಲ್ಲದಲೆ ಬೇರಿಲ್ಲ
ಪರಿಕಿಪಡೆ ಭೂತಳದೊಳೆಂದು ಬೀಳ್ಕೊಂಡು ತ
ನ್ನರಮನೆಗೆ ಪೋಗಿ ಸುಖದಿಂದಿರ್ದನಿತ್ತ ಜಗದಾರಾಧ್ಯ ಮಹಲಿಂಗನು ೮೧

ಪರಮ ಸಂಗನಬಸವ ಮೊದಲಾದ ಭಕ್ತರಂ
ಪರಸುತ್ತ ಬೀಳ್ಕೊಡಲು ನೆರೆ ನಮಿಸಿ ಭಕ್ತಿಯಿಂ
ಕರುಣಾಳುವೆಂದು ತನ್ಮಹಿಮನುರೆ ಬಣ್ಣಿಸುತ ಸಾರ್ದರಾಶ್ರಮಕತ್ತಲು
ಶರಣಾಳಿ ಸಹಿತ ತಚ್ಛಾತ್ರದೊಳು ಮಹಲಿಂಗ
ಪರಮಾನುಭವದಿಂದೆ ಸುಖಮಿರ್ದನೆಂದು ಹರ
ಗಿರಿಜಾತೆಯೊಳು ಪೇಳ್ದ ನಂದ್ಯಾದಿ ಪ್ರಮಥರಾಲಿಸುವಂತೆ ಕೈಲಾಸದಿ ೮೨

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೮೩

ಅಂತು ಸಂಧಿ ೧೪ ಕ್ಕಂ ಪದ ೬೦೪ ಕ್ಕಂ
ಮಂಗಳಂ
ಶ್ರೀ

ಶ್ರೀ

# ಹದಿನೈದನೆಯ ಸಂಧಿ

**ಸೂಚನೆ :** ಸಕರೋಜಿರಾಜನಿಗೆ ಶ್ರೀಹರಿಯು ರೂಪವನುಂ
ಸಕಲಜನವರಿವಂತೆ ತೋರಿ ಕಾರುಣ್ಯದಿಂ
ಅಕಲಂಕ ಗುರುಲಿಂಗ ಜಂಗಮದ ಮಹಿಮೆಯುಂ ಪೇಳ್ದನಾ ಮಹಲಿಂಗನು

ಹಾಟಕಾಚಲಧಾಮ ಹರ್ಯಕ್ಷಪದಪೂಜ್ಯ
ಘೋಟಕ ಸುಧಾಸೂತಿ ಸಕಲಸಂಭೃತ ಜಟಾ
ಜೂಟ ಜಗದಾಧೀಶ ಪರಮೇಶ ಜಲಜಾಸನಾದ್ಯಮರ ಸುರಸೇವಿತಾ
ಕಾಟೀನಪದರಿ ಕರ್ಮಾಳಿಹರ ಮುಕ್ತೀವ
ಧೂಟಿವರ ದಂಡಧರ ಗರ್ವಸಂಹರ ಸೂಕಿ
ರೀಟಿವರದಾತ ವರಗುರು ಚೆನ್ನವೀರೇಶ ಪಾಲಿಪುದು ಮೂಜಗವನು ೧

ದಕ್ಷತನುಜಾತೆ ಲಾಲಿಸು ಭಕ್ತಿಪೂರ್ವಕದೊ
ಳಕ್ಷಯ ಮಹಾಲಿಂಗ ಜಂಗಮದ ಲೀಲೆಯುಂ
ಸಕ್ಷಮದಿ ಸಕಲಗಣತಿಂಥಿಣಿಸಮೇತದಿಂ ಸದ್ಭಕ್ತಸಂತತಿಯನು
ರಕ್ಷಿಸುತ ಮೋದಪುರ ಥಾತ್ರಾಂತರಾಳದೊಳ್
ಸುಕ್ಷಣದಿ ಮುನ್ನಿನಂತೊಂದು ದಿನ ಓಲಗದಿ
ಪಕ್ಷದಿಂ ಪರಮಾರ್ಥ ಗೀತೆಗಳ ಕೇಳುತ್ತ ಮೂರ್ತಿಗೊಂಡಿಹ ಸಮಯದಿ ೨

ಮಾಲೋಜಿಧರಣೀಶಸಹಜಾತ ಶೌರ್ಯಗುಣ
ಮಾಲ ಸಕರೋಜಿ ರಾಜಂ ಮಂತ್ರಿಮಾನಿಯರ
ಜಾಲಸಹಿತರಮನೆಯ ಬಿಟ್ಟು ಮಹಲಿಂಗಪದ ಸಂದರ್ಶನಾಪೇಕ್ಷೆಯಿಂ
ಲೀಲೆಯಿಂ ಬರುತೊಂದು ಕಲ್ಪನೆಯ ತನ್ನಂತ
ರಾಳದೊಳ್ ನೆನೆದನೇನೆಂದು ಬಣ್ಣಿಸುವೆನಾ
ಬಾಲಚಂದ್ರಕಿರೀಟ ಚಿದ್ರೂಪನೇ ಬಲ್ಲನಲ್ಲದಿಳಿದರ್ಗರಿಯದು ೩

ಭಾವಜನ ಪಿತನಂಘ್ರಿಯಂ ಭಜಿಪ ಭಕ್ತರ್ಗೆ
ಭಾವಿಪಡೆ ಶಿವಜಂಗಮೋತ್ತಮದ ಪಾದರಾ
ಜೀವಗಳ ಪೂಜೆಯನುಚಿತವೆಂದು ತನ್ನೊಳಗೆ ತಾ ಧೂರ್ತ ಕಲ್ಪನೆಯನು
ಭಾವಿಸುತ ಬರುತಿರಲು ಸರ್ವಾತ್ಮಗತನೆನಿಪ
ಪಾವನಾಮಲರೂಪನರಿವುತಿರೆ ಜ್ಞಾನದಿಂ
ದಾ ವಿಕಲ ಮಾನಸನು ಬಳಿಕ ಛಾತ್ರಾಂತರವನೊಳಪೊಕ್ಕು ನೋಡುತಿರಲು ೪

ಕಂಡನದನೇನೆಂಬೆ ತತ್ಸಭಾವಲಯದೊಳ್
ಖಂಡಚಿನ್ಮಯನಿರವನತುಳ ತುಳಸೀಮಾಲೆ
ಮಂಡನಾಶ್ರಿತಕಂಠ ಕೌಸ್ತುಭೋರಸ್ಥ ಪೀತಾಂಬರದ ಘನಜಘನದ
ಪುಂಡರೀಕಾಕ್ಷಣದ ಮೃಗನಾಭಿಜದ ತಿಲಕ
ಮಂಡಿತ ತ್ರಿಪುಂಡ್ರದಿಂ ಮಿರುಪ ಭಾಳಸ್ಥಳದ
ಪಾಂಡವಸ್ಥಾಪನಾಚಾರ್ಯನ ಸುಮೂರ್ತಿಯಂ ಸಕರೋಜಿ ಮಹರಾಜನು ೫

ಶಂಖಚಕ್ರಂಗದಾಕರಚತುಷ್ಟಯದ ಶುಭ
ದಂಕ ಕೈರವ ಕುಸುಮ ಕೋಮಲಾಂಗದ ಕಲಿತ
ಪಂಕಜಸುನಾಭ ಫಣಿತಲ್ಪ ಲಕ್ಷ್ಮೀಸಮಾಶ್ರಿತ ಹೃದಯನೀರೇಜದ
ಶಂಕರಪ್ರಿಯಭಕ್ತ ಸಕಲ ಯದುಕುಲನಾಥ
ಕಿಂಕರಾಮರಭೂಜನಮಲಮೂರ್ತಿಯ ಕಂಡು
ಶಂಕಿಸುತ ಸಕರೋಜಿ ಮಹರಾಜ ಸಮ್ಮುಖದಿ ನಿಂದು ಬೆರಗಾಗಿರ್ದನು ೬

ಬೆರಗಾಗಿ ಮನದೊಳಗೆ ಬೆದರುತ್ತ ನೋಡುತಿರೆ
ನೆರೆದ ಮಾನ್ಯರು ಮಂತ್ರಿಪರು ಮುಖ್ಯ ಪರಿಜರನು
ಅರಿದೆಂದು ತಮತಮಗೆ ಭಯ ಭಕ್ತಿಯಿಂದೆರಗಿ ಕೊಂಡಾಡುತಿರಲಾಕ್ಷಣಂ
ಧರಣೀಶಸಹಜಾತ ನಡುನಡುಗುತಿದಿರಲ್ಲಿ
ಕರಕಂಜಗಳ ಮುಗಿದು ಸಂತಾಪ ಸಂತಸವ
ನುರೆ ತಳೆದು ತನ್ನೊಳಗೆ ತಾನೆ ಚಿಂತಿಸುತಿರ್ದನಗಜಾತೆ ಕೇಳೆಂದನು ೭

ಆವನಡಿದಾವರೆಯ ದರ್ಶನದಪೇಕ್ಷೆಯಿಂ
ಭಾವಜನ ಪಿತನಮಲ ಮೂರ್ತಿಯಂ ಕಂಡೆನೆಂ
ಬಾ ವಿಮಲ ಸಂತೋಷಮದು ಬಳಿಕ ಪೂರ್ವದೊಳಗೀ ಮಹಿಮ ಮಹಲಿಂಗನಾ
ಸೇವಿಪುದು ಹರಿಭಕ್ತರಿಗೆ ಉಚಿತವಲ್ಲೆಂದು
ಭಾವದೊಳು ದುಷ್ಟಕಲ್ಪನೆಯ ಮಾಡಿದೆನೆಂಬ
ತೀವಿದುದ್ರೇಕ ಸಂತಾಪಮದು ಭಾರೈಸಿ ಸಮ್ಮುಖದೊಳಿಂತೆಂದನು ೮

ಅಚ್ಯುತೇಂದ್ರಾದಿಗಳ ನಿಮಿಷದೊಳ್ ನಿರ್ಮಿಸುವು
ದಚ್ಚರಿಯೆ ನಿಮಗೆ ಜಗದಾರಾಧ್ಯ ಮಹಲಿಂಗ
ಹುಚ್ಚನಾನೆಂದಧಮತನದಿ ಕುಹಕವ ನೆನೆದ ಮುಂಗಾಣದತಿಮೂರ್ಖನು
ತುಚ್ಛನಪರಾಧವಂ ಪರಿಕಿಸದೆ ಕರುಣದಿಂ
ನಿಶ್ಚಲಮಹಾಮಹಿಮ ಪರಿಪಾಲಿಸೆಂದೆನುತ
ಮತ್ಸರವನುಳಿದು ಮೈಯಿಕ್ಕಿ ಬಣ್ಣಿಸುತಿರ್ದನೇನೆಂಬೆನಗಜಾತೆಯೇ ೯

ದುಷ್ಟರಪರಾಧಮೆಷ್ಟಿರ್ದೊಡಂ ಪರಿಕಿಸದೆ
ಶಿಷ್ಟರೀ ಜಗದೊಳಗೆ ಪಾಲಿಸುವದೇ ಧರ್ಮ
ಭ್ರಷ್ಟನೆನ್ನಯ ಗುಣವನದರಂತೆ ನಿಟ್ಟಿಸದೆ ಸೈರಿಸುತೆ ಕಾರುಣ್ಯದಿಂ
ಅಷ್ಟಮದನಷ್ಟ ಮಹಪುರುಷ ರಕ್ಷಿಪುದೆಂದು
ನೈಷ್ಠೆಯಿಂದೆಡೆವಿಡದೆ ನೋಡುತ್ತ ಸಮ್ಮುಖನಿ
ಕೃಷ್ಟಮಾನಸನಾಗಿ ನಿಂದು ಕೀರ್ತಿಸುತಿರ್ದ ಸಕರೋಜಿ ಮಹರಾಜನು ೧೦

ಸಕಲ ವೇದಾಗಮ ಪುರಾಣ ವರಶಾಸ್ತ್ರಗಳ
ನಿಕರಕ್ಕೆ ನಿಲುಕದ ಮಹಾಪರಮ ಜಂಗಮದ
ಅಕಲಂಕ ಘನತೆಯನು ತಿಳಿಯದ ಮದಾಂಧಕನ ರಕ್ಷಿಪುದು ಕಾರುಣ್ಯದಿಂ
ಮಕರಾಂಕ ಮದನಾಶ ಮಹಲಿಂಗ ಮೌನೀಶ
ವಿಕಟವೇಷವನುಳಿದು ನಿಜಪೂರ್ವರೂಪಮಂ
ಸುಖದಿಂದ ತೋರ್ಪುದೆನಗೆಂದೆನುತ ತತ್ಸಭಾನಿಕಟದೊಳು ನಿಂತಿರ್ದನು ೧೧

ಲೋಕದೊಳು ಘೋರ್ಪಡೆಯರನ್ವಯದಿ ನಾನೋರ್ವ
ಕಾಕುಮಾನಸ ನಿಮಗೆ ಬಾಹಿರನಲಾ ದೇವ
ಏಕೆ ಸಮನಿಸಿತನ್ಯ ಕಲ್ಪನೆಯು ಮುನ್ನಾವ ಜನ್ಮಾಂತರದ ಕರ್ಮವು
ಆಕರಿಸಿತೆಂದೆರಗಿ ಬಿನ್ನೈಸುತಿರೆ ಬಳಿಕ
ನಾಕಗಣಸೇವ್ಯನಾಕ್ಷಣದಲ್ಲಿ ಕರುಣಾವ
ಲೋಕನದಿ ನೋಡುತ್ತ ಮಹಲಿಂಗ ಮುನಿನಾಥ ನಿಜರೂಪಮಂ ತೋರ್ದನು ೧೨

ಕೆಂಜೆಡೆಯು ಕರ್ಣಕುಂಡಲ ಭಸಿತ ಲೇಪನದ
ಮಂಜುಲ ತ್ರಿಪುಂಡ್ರವರ ರುದ್ರಾಕ್ಷಿಮಾಲೆಗಳ
ರಂಜಿತಾಮಳ ವೇತ್ರ ಜಪಮಾಲೆ ಕಚ್ಚುಟದ ಕಟಿಸೂತ್ರ ಲಾಕುಳಗಳ
ಪಿಂಜರಿಯ ಪಾವುಗೆಯ ಶಿವಲಾಂಛನದ ಪರಮ
ಪುಂಜದಿಂ ಥಳಥಳಿಪ ಪೂರ್ವವೇಷವ ಮದನ
ಭಂಜನ ಮಹಾಲಿಂಗ ತೋರ್ದನಾ ಸಭೆಯಲ್ಲಿ ಸಕರೋಜಿ ಮಹರಾಜಗೆ ೧೩

ಸದ್ರೂಪವನು ಕಂಡು ಪರಮ ಸಂತೋಷದ ಸ
ಮುದ್ರದೊಳು ಮುಳುಗುತ್ತ ಭಯಭಕ್ತಿಯಿಂ ಬಳಿಕ
ಭದ್ರಮಯ ಮಹಲಿಂಗನಂಘ್ರಿಗಳಿಗೆರಗುತ್ತ ಕರಕಂಜಗಳ ಮುಗಿವುತ
ಚಿದ್ರಮಣ ನಿಮ್ಮಿರವನರಿಯದ ಮಹಾಪಾಪಿ
ಕ್ಷುದ್ರನಪರಾಧಮಂ ಸೈರಿಪುದು ಭಕ್ತದಾ
ರಿದ್ರ್ಯವಿದ್ರಾವಣನೆ ತ್ರಾಹಿತ್ರಾಹ್ಯೆಂದು ಬಣ್ಣಿಸುತಿರ್ದನಾ ರಾಜನು ೧೪

ಸರ್ವಜ್ಞ ಸರ್ವಗತ ಸರ್ವಾತ್ಮ ಸರ್ವೇಶ
ಸರ್ವಜಗದಾರಾಧ್ಯ ಸಚರಾಚರಪ್ರಾಣಿ
ಸರ್ವದೇವಾಧೀಶ ಸರ್ವಜಂಗಮನಾಥ ಸರ್ವಚೇತನಮೂರ್ತಿಯೇ
ಸರ್ವಗುಣಗಣಮಾಲ ಸತ್ಕೀರ್ತಿನುತಶೀಲ
ಸರ್ವಚಿದ್ರೂಪ ಮಹಲಿಂಗ ಭೂತಳದಲ್ಲಿ
ಸರ್ವರಂತರ್ಯಾಮಿ ನೀವಲ್ಲದುಂಟೆಂಬರ್ಗೆ ಪಂಚಪಾಪಾತ್ಮರು ೧೫

ಎಲೆ ದೇವ ಮುನಿನಾಥ ಘೋರ್ಪಡೆಯರನ್ವಯಕೆ
ಕುಲದೈವ ನೀವಲ್ಲದಾರಿಲ್ಲ ಭಾವಿಪಡೆ
ಬಳಿಕೆನ್ನ ತಪ್ಪಮಂ ತರಹರಿಪುದೆಂದೆನಲು ನಸುನಗುತ ಕಾರುಣ್ಯದಿಂ
ಒಲಿದು ಮೈದಡವುತೆಲೆ ರಾಜ ನಿನ್ನಯ ಮನದ
ಛಲವ ನೆರೆನೋಡಲೋಸುಗದಿಂದೆ ಜಂಗಮವು
ಜಲಜಾಕ್ಷರೂಪಮಂ ತಳೆದಿರ್ದುದೆಂದಭಯಮನ್ನಿತ್ತು ಬಳಿಕೆಂದನು ೧೬

ಹರಿಬ್ರಹ್ಮರುದ್ರಾದಿಗಳು ಶಿವನ ಕೃಪೆಯಿಂದ
ಸರಸಿಜಾಂಡವ ನಿರ್ಮಿಪರು ಸೇವಕತ್ವದಲಿ
ಸ್ಥಿರಲಿಂಗಮಧ್ಯದೊಳ್ ತಜ್ಜಗಂ ಜೀವಿಪುದು ತಲ್ಲಿಂಗಕಂರೆ ಚೇತನಂ
ಚರವಲ್ಲದಿಲ್ಲೆಂಬ ಸಕಲ ನಿಗಮಾಗಮದ
ವರವಚನಮುಂಟಾದ ಕಾರಣದಿ ಭಕ್ತನಿಗೆ
ಪರಿಕಿಪಡೆ ಲಿಂಗಜಂಗಮ ದೈವವೇ ಜಗದಿ ಬೇರಿಲ್ಲ ಕೇಳೆಂದನು ೧೭

ಎಂದೆನಲು ಮಹರಾಜ ಭಕ್ತಿಯಿಂ ತನ್ನ ಕರ
ದ್ವಂದ್ವಗಳ ಮುಗಿವುತೆಲೆ ದೇವ ದೇವಾಧೀಶ
ಇಂದು ಘನ ಲಿಂಗಜಂಗಮದ ಮಹಿಮಾತಿಶಯ ಪೇಳ್ದು ಪಾಲಿಪುದೆಂದೆನೆ
ಮಂದಹಸಿತಾನನದಿ ಮಹಪುರುಷನಾಕ್ಷಣದಿ
ಚೆಂದದಿಂ ಪೇಳಲುಜ್ಜುಗಿಸಿದಂ ಭಕ್ತಜನ
ಬಂಧು ಮಹಲಿಂಗ ಮುನಿಪೋತ್ತಮಂ ಗಿರಿಜಾತೆ ಕೇಳೆಂದು ಶಿವ ಪೇಳ್ದನು ೧೮

ಹರಿಯಜೇಂದ್ರಾದಿ ಸುರಮುಖ್ಯ ದಿಕ್ಪತಿಗಳುಂ
ತರಣಿ ಮೊದಲಾದಸಮ ಗ್ರಹಗಳುಂ ದೈತ್ಯರುಂ
ಪರಮ ಮನುಮುನಿಗಳೆಲ್ಲರು ಲಿಂಗವಂ ಭಜಿಸಿ ದೇವತ್ವವನು ಪಡೆದರು
ಧರೆಯೊಳಗೆ ಸೈಕತದ ಮೃಣ್ಮಯದ ಲಿಂಗಗಳ
ನುರುಲೀಲೆಯಿಂ ಪೂಜಿಸಿದ ಬಾಲಕರು ಬಳಿಕ
ಹರನಸಮ ಪದವಿಯಂ ಪಡೆದರೆಲೆ ಸಕರೋಜಿ ಕೇಳು ಲಿಂಗದ ಘನತೆಯಂ ೧೯

ಪುಂಡರೀಕಾಕ್ಷ ದಶಭವದಲ್ಲಿ ನಿರ್ಮಿಸಿದ
ಚಂಡದುರಿತಾಳಿಯಂ ಕಡಿಯಲೋಸುಗದಿ ಭೂ
ಮಂಡಲದಿ ಪುಣ್ಯಕ್ಷೇತ್ರೌಘದೊಳ್ ಘನಭಕ್ತಿಪೂರ್ವಕದಿ ಲಿಂಗಂಗಳ
ತಂಡಮಂ ಸ್ಥಾಪನಂಗೈದು ಭಜಿಸುತ್ತಸಮ
ಖಂಡೇಂದುಧರನ ಕೃಪೆಯಾಂತನಿದು ವ್ಯಾಸಮುನಿ
ಪಂಡಿತೋತ್ತಮರ ಶ್ರೀ ಲೈಂಗ್ಯಾಪುರಾಣದೊಳು ಸಿದ್ಧಾಂತವೆಲೆ ರಾಜನೆ ೨೦

ಕಾಶಿಯಲಿ ಬಾಲಾರ್ಕಲಿಂಗಮಂ ಭಕ್ತಿಯಿಂ
ಕೇಶವ ನಿರೂಪದಿಂ ಸ್ಥಾಪನಂಗೈದು ವಿ
ಶ್ವಾಸದಿಂ ಭಜಿಸುತ್ತ ನಿಗಮಾಗಮೋಕ್ತಿಯಿಂದೆಡೆವಿಡದೆ ವಾಸರಥವಂ
ಆಸುರದಿ ನಿಜತನುವಿನ ಶ್ವೇತರೋಗಮ ವಿ
ನಾಶಮಂ ಮಾಡುತ್ತ ಜಗಮೆಲ್ಲ ತಿಳಿವಂತೆ
ಭಾಸುರಾಂಗನುಮಾದ ಸಕರೋಜಿ ಕೇಳಿನ್ನು ಪರಮ ಲಿಂಗದ ಘನತೆಯಂ ೨೧

ಆಂಜನೆಯ ಸುತನೆನಿಪ ಹನುಮಂತ ಮಾರಮದ
ಭಂಜನನ ಸಭೆಯಲ್ಲಿ ಬಂದಸಮ ಭಕ್ತಿಯಿಂ
ಮಂಜುಲ ಸುಸಪ್ತಸ್ವರಗಳೆನೆತ್ತಿ ಪಾಡುತಿರೆ ಲಾಲಿಸುತ ಸಂತೋಷದಿಂ
ನಂಜುಗೊರಳನು ಮೆಚ್ಚುತಿನ್ನೊಂದು ಪಾಡೆನಲು
ಕುಂಜರಾಸುರಹರನೆ ಲಿಂಗಪೂಜೆಗೆ ನನಗೆ
ಸಂಜೆಯಾಗುವದು ಪೋಪೆನು ನಿರೂಪವನೀಯಬೇಕೆಂದು ಬಿನ್ನೈಸಲು ೨೨

ಲಿಂಗಮುಯನಾದಾತ ತಾನಿರಲು ನೀನು ವರ
ಸಂಗೀತಪೂಜೆಯಿಂದಿಲ್ಲಿಯೇ ತಣಿಸಿದರೆ
ಹಿಂಗದಲೆಯಿರ್ದು ಕೈಕೊಳ್ವನೆಲೆ ರೇಶಪತಿ ಎಂದೆನುತೆ ಪೇಳುತಿರಲು
ಅಂಗಜಾಂತಕನೆ ನಿಗಮಾಗಮೋಕ್ತಿಗಳ ನಿಕ
ರಂಗಳಿಂದರಿದು ಭಜಿಸುವ ನಿತ್ಯನೇಮವೆನ
ಗಂಗವಾಗಿರ್ಪುದೆನೆ ನಸುನಗುತ ಬೀಳ್ಕೊಡಲು ಬಂದನಾ ಹನುಮಂತನು ೨೩

ಬಂದ ನೈಜಾಲಯದಿ ತ್ವರಿತದಿಂದೆಡೆವಿಡದೆ
ಮಿಂದು ಫಲಪತ್ರಿಪುಷ್ಪಗಳಿಂದ ಸಂತಸದಿ
ಚಂದದಿಂದುಪಕರಣಗಳ ನೆರವಿನಿಂದಸಮ ಸಿದ್ಧಾಸನದ ಪೆರ್ಮೆಯಿಂ
ಸಂದಶ್ರೀಭಸಿತರುದ್ರಾಕ್ಷಿಗಳನಂಗದೊಳ್
ಕುಂದದಲಿ ತಳೆದು ಕಪಿವರನಾಗ ಕರಡಿಗೆಯ
ಹೊಂದಿರ್ದ ಲಿಂಗಮಂ ಭಜಿಪೆನೆಂದೀಕ್ಷಿಸಲು ಶೂನ್ಯಮಾಗಿರಲಾಕ್ಷಣಂ ೨೪

ಭಯಭರಿತ ಹೃದಯದಿಂ ನಡನಡುಗಿ ಹನುಮಂತ
ನಿಯತ ಶಿವಲಿಂಗಮೇಂ ಕಾರಣಂ ಬಯಲಾಯ್ತೊ
ವಿಯದಾಪಗಾಧರನೆ ಬಲ್ಲೆನುತ ಮರುಗುತ್ತ ವೀರಭದ್ರನ ಸ್ಮರಣೆಯಂ
ರಯದಿಂದೆ ಮಾಡಲ್ಕೆ ಪ್ರತ್ಯಕ್ಷಮಾಗುತ್ತ
ವ್ಯಯಶರಭ ನಿನ್ನಿಷ್ಟಮೇನೆನುತ ಬೆಸಗೊಳಲು
ನಯದಿಂದೆ ಪೂಜಿಪೆನ್ನಿಷ್ಟಲಿಂಗವು ಬಯಲುಮಾಗಿಹುದು ದಕ್ಷಾರಿಯೇ ೨೫

ಅದುಕಾರಣದಿ ನಿನ್ನ ಪದಕರುಹಿ ಪ್ರಾಣವ
ನ್ನಿದೆ ಬಿಡುವೆನೆಂದೆನಲು ಮದನಹರ ವೀರೇಶ
ಮುದದಿಂದ ನಿನ್ನಿಷ್ಟಲಿಂಗಮಂ ಪಾಲಿಪೆನು ಭೀತಿ ಬೇಡೆಂದೆನುತಲಿ
ಪದುಳದಿಂದಭಯಮುಮನಿತ್ತಾಗ ಫಾಲಾಕ್ಷ
ದೊದವಿರ್ದ ಶಿಖಿಗರುಹಿ ಬೀಳ್ಕೊಡಲು ಭುಗಿಲೆಂದು
ಬೆದರಿಸುತ ನಿಮಿಷದೊಳ್ ಪದ್ಮಜಾಂಡಮನೆಲ್ಲನುರುಹುತ್ತ ಶಿವಲೋಕಮಂ ೨೬

ಆವರಿಸಿ ಪ್ರಳಯಾಗ್ನಿಯೆಂಬಂತೆ ಮುಂಬರಿದು
ತೀವಿ ಧಗಧಗಿಸುತ್ತ ಬರುತಿರಲು ಪೆರ್ಮೆಯಿಂ
ಭಾವಜಾಂತಕಮೂರ್ತಿ ತನ್ನೊಳಗೆ ತಾ ತಿಳಿದು ಶ್ರೀವೀರಭದ್ರೇಶನಾ
ಭಾವಿಸಲು ಬಂದಡಿಗೆ ಪೊಡಮಟ್ಟು ನಿಂದಿರಲಿ
ದಾವರೀತಿಗೆ ಸಕಲ ಲೋಕವನು ದಹಿಸೆಂದು
ಪಾವಕಮನಿತ್ತು ಕಳುಹಿದೆಯೆಂದು ನಸುನಗುತ ಶಂಕರಂ ಬೆಸಗೊಳ್ಳಲು ೨೭

ದೇವೇಶ ಕೀಶಕುಲನಾಥನುಂ ಭಕ್ತಿಯಿಂ
ದಾವಗಂ ಭಜಿಪಿಷ್ಟಲಿಂಗಮದು ಬಯಲಾಗೆ
ಸಾಯುಜ್ಜುಗಿಸೆನ್ನ ಸ್ತೋತ್ರವಂ ಮಾಡಲ್ಕೆ ನಂಬಿಗೆಯನಿತ್ತಾಕ್ಷಣಂ
ಪಾವನಾಮಳಲಿಂಗಮಂ ಬೆದಕಿ ತಹುದೆಂದು
ಪಾವಕಾಕ್ಷಿಗೆ ಬೆಸನವಿತ್ತು ಕಳುಹಿದನೆನಲು
ಮಾವರನು ಮೆಚ್ಚುತಲೆ ವೀರಭದ್ರೇಶ್ವರನೆ ಹನುಮನೋರ್ವನ ಪೊರೆವೊಡೆ ೨೮

ಈರೇಳು ಲೋಕದ ಜಿತಾಘಮಂ ಕೊಲಿಸುವದು
ಕಾರುಣ್ಯಹೃದಯರಿಗೆ ನೀತಿಯೇ ಎಂದೆನಲು
ಮಾರಾರಿ ಚಿತ್ತೈಸು ಮೃಡಭಕ್ತನಂಗದೊಳಗಿಡಿದಿರ್ಪ ರೋಮಂಗಳು
ಆರಯ್ಯೆ ಲಿಂಗಮಯವಾ ಲಿಂಗದೊಳಗೆಲ್ಲ
ಪೂರೈಪ ಪದ್ಮಜಾಂಡಗಣಿತಂ ರಂಜಿಪವು
ವಾರೈಸಿ ಒಂದೊಂದಜಾಂಡದೊಳಗೀರೇಳು ಲೋಕಂಗಳಿರುತಿರ್ಪವು ೨೯

ಆದರಿಂದ ನಿಜಭಕ್ತನೇ ಶ್ರೇಷ್ಠನೆಂದೆನಲು
ಮದನಾರಿ ಮೆಚ್ಚುತ್ತ ವೀರಭದ್ರನ ನುಡಿಗೆ
ಪದುಳದಿಂ ಪ್ಲವಗನಾಥನ ನೆನೆಯೆ ಬಂದಡಿಗೆ ಪೊಡಮಡಲು ಕಾರುಣ್ಯದಿಂ
ಮುದವೆತ್ತು ಮೈದಡವುತಲೆ ಮಗನೆ ನಾನಿನ್ನ
ಹೃದಯದ ಸುನಿಷ್ಠೆಯಂ ಪರಿಕಿಸುವ ಕಾರಣದಿ
ವಿದಿತಿಷ್ಟಲಿಂಗಮಂ ಬಯಲ ಮಾಡಿದೆನೆನುತ ಸಂತೈಸುತಾ ಹನುಮನ ೩೦

ಪರಮ ನೈಷ್ಠೆಗೆ ಮೆಚ್ಚಿ ಭಾಪುರೇ ಕಪಿನಾಥ
ವರ ಲಿಂಗಪ್ರಾಣಿ ನೀನಹುದೆಂಬ ನೀತಿಯುದು
ನಿರುತದಿಂ ತೋರಿತ್ತು ತ್ರೈಲೋಕದೊಳಗೆಂದು ಪರಿಕೀರ್ತನಂಗೈವುತ
ಪರಮೇಶ ತಲ್ಲಿಂಗವನು ಕೊಟ್ಟನಾಕ್ಷಣದಿ
ಹರುಷದಿಂ ಕೇಳೆಂದು ಸಕರೋಜಿ ರಾಜನಿಗೆ
ಶರಣಾಳಿ ಮಧ್ಯದೊಳ್ ಮಹಲಿಂಗ ಗುರುಪೇಳ್ದ ನಿರಘ ಲಿಂಗದ ಮಹಿಮೆಯಂ ೩೧

ಇನ್ನೊಂದು ಸತ್ಕಥೆಯನಾಲಿಸುವುದೆಲೆ ರಾಜ
ಮುನ್ನೋರ್ವ ವೈದಿಕಂ ದ್ರೋಣನೆಂಬಂ ರಣದಿ
ತನ್ನಸುವ ಶಸ್ತ್ರಮುಖದಿಂ ಕಳೆಯೆ ತತ್ತನುಜ ಶಸ್ತ್ರಸನ್ಯಾಸತ್ವದಿಂ
ಭಿನ್ನಮಾನಸನಾಗಿ ಪೋಗುತಿರೆ ಮಾರ್ಗದೊಳು
ಬಿನ್ನಣದ ಬಾದರಾಯಣನ ಕಂಡಡಿಗೆರಗೆ
ಮನ್ನಿಸುತ್ತೆಲ್ಲಿಂಗೆ ಗಮನದುದ್ಯುಕ್ತವೆಂದೆನುತಲಶ್ವತ್ಥಾಮನಂ ೩೨

ಬೆಸಗೊಳಲು ಎಲೆ ದೇವ ಮುನಿನಾಥ ಯುದ್ಧದೊಳ್
ಗಸಮ ಬಲಸಹಿತ ಕೃಷ್ಣಾರ್ಜುನರ ದಹಿಸೆಂದು
ಒಸೆದು ವೀಳ್ಯವನಿತ್ತು ನೆರೆ ನಂಬಿ ಬೀಳ್ಕೊಟ್ಟ ಕುರುರಾಜ ದುರ್ಯೋಧನಂ
ವಿಷಮ ಭಾವದೊಳೊಂದು ಮಿಸುಪ ಬಾಣವ ತೊಡಲು
ಸಸಿನೆ ಪಾಂಡವರೆಲ್ಲ ಕಂಡು ಮರುಗುತ್ತಕಟ
ವಸುಧೆಯೊಳಗಿಂದು ನರನಾರಾಯಣರ್ಸತ್ತರೆಂದೆನುತ ಮೊರೆಯಿಡುತಿರೆ ೩೩

ನೆಟ್ಟನಾ ಬಾಣವದು ಕೃಷ್ಣಾರ್ಜುನರನಾಗ
ಬಿಟ್ಟಖಿಳ ಸೇನೆಯಂ ದಹಿಸುತ್ತ ಬರುತಿರಲು
ಕಟ್ಟಣಕದಿಂದಾನು ಜರೆದು ಮರಸುತ್ತದನು ಶಸ್ತ್ರಸನ್ಯಾಸತ್ವದಿಂ
ನಟ್ಟಡವಿಯನು ಸಾರ್ದು ಬಾಳ್ವೆನೆಂದೆನುತಿಂದು
ಬಟ್ಟೆಯೊಳು ವೈರಾಗ್ಯದಿಂ ಬರಲು ನಿಮ್ಮಡಿಯ
ನಿಟ್ಟಿಸಿದೆನೆಂದೆನಲು ಪರಮ ವೇದವ್ಯಾಸ ಮುನಿನಾಥನಿಂತೆಂದನು ೩೪

ಎಲೆ ದ್ರೋಣತನುಜಾತ ಬರಿದೆ ಬಳಲಲಿ ಬೇಡ
ಚೆಲುವ ಕೃಷ್ಣಾರ್ಜುನರು ಅಲ್ಪರಲ್ಲಿಳೆಯೊಳಗೆ
ತಿಳಿಯೆ ನಿನ್ನಸಮ ಬಾಣಾಗ್ನಿಗಳಿವವರಲ್ಲ ಮನದ ಚಿಂತೆಯ ಬಿಡು ಬಿಡು
ಬಳಿಕ ಕೇಳಿನ್ನವರ ಘನತೆಯನು ಪೂರ್ವದಲಿ
ಒಲಿದು ನಾರಾಯಣಂ ಮೈನಾಕ ಭೂಧರದಿ
ಮಲಹರನ ಕುರಿತು ತಪವಂ ಮಾಳ್ದನರುವತ್ತು ಸಹಸ್ರಾಬ್ದ ಪರಿಯಂತರಂ ೩೫

ಮರುತಾಶನದೊಳೂರ್ಧ್ವ ಭುಜದಿಂದೆ ಚರಣಾಗ್ರ
ಧರೆಗೂರಿ ಘೋರತನುಶೋಷಣೆಯನಾಚರಿಸು
ತಿರಲು ತತ್ತಪದಿಂದೆ ನರನೆಂಬ ಮುನಿಯುದಿಸಲವರೀರ್ವರುರು ನಿಷ್ಠೆಗೆ
ಪರಮೇಶ ಮೆಚ್ಚುತ್ತ ಮನದಿಷ್ಟ ಬೇಡೆನಲು
ಹರನೆ ನಿಜಪದಭಕ್ತಿ ನೀಮನೀಡೆನಗೆನಲು
ಹರುಷದಿಂ ಮೆಚ್ಚಿ ಮಝುಬಾಪೆಂದು ಬಣ್ಣಿಸುತ ಗಿರಿಜೇಶನಿಂತೆಂದನು ೩೬

ಎನಗಾಪ್ತರುಂ ಭಕ್ತರುಂ ಬಾಂಧವರು ನೀವೆ
ಇನಿತು ಸಂದೇಹಮಿಲ್ಲಂ ಜಗದಿ ಮಾನವರು
ಎನಿತಿರ್ದೊಡಂ ನಿಮಗೆ ಸಮನಲ್ಲ ಭಾವಿಪಡೆ ಮತ್ತಸಮ ರಣರಂಗದಿ
ವಿನುತ ಶಸ್ತ್ರಾಸ್ತ್ರಂಗಳಿಂ ಕಾಷ್ಟದಿಂ ಜಲದಿ
ಮಿನುಪಾಗ್ನಿಯಿಂ ಹಸ್ತ ಚರಣಂಗಳಿಂದಿರದೆ
ಘನವಾಗಿ ಘಾತಿಸುವರಿಲ್ಲ ತ್ರಿಭುವನದೆಂದು ವರವಿತ್ತನಾ ಶಂಕರಂ ೩೭

ಸಂಗರದಿ ಮಾರಾಂತರೆನ್ನುವಂ ಜೈಸುವತಿ
ತುಂಗ ಭುಜಶೌರ್ಯ ನಿಮ್ಮೀರ್ವರ್ಗೆ ಜಗಮರಿಯೆ
ಸಂಘಟಿಸಲಂತಲ್ಲದಲಿ ಬಯಸಿದಿಷ್ಟಗಳು ಸಿದ್ಧಿಸಲಿ ಸಂತಸದೊಳು
ಮಂಗಲವು ನಿಮಗಾಗಲೆಂದು ಪರಸುತ್ತ ಭವ
ಭಂಗ ಮೂಜಗದೊಡೆಯನಾಗ ಗಮಿಸಿದನತ್ತ
ಭಂಗಿಸುವದೇನಸಮ ಶಿವಪೂಜಕರ ನಿನ್ನ ಪಾವಕಾಂಬಕ ದ್ರೋಣಜಾ ೩೮

ದೇವನವ ಶಿವಭಜಕ ತಾನಲ್ಲವೆಂದೆನಲು
ಭಾವಿಪಡೆ ನಿನ್ನ ವರ ಪುಣ್ಯಕ್ಕೆ ಸಮನಿಡಲು
ಭೂವಲಯದೊಳಗೆಯಣುಪರ್ವತಾಂತರ ಬರಿದೆ ಚಿಂತಿಸದಿರಾ ಮನದೊಳು
ಭಾವಜಾಂತಕನ ಪದ ಭಕ್ತಿಯೊಳ್ ಯೋಗದೊಳ್
ಆವರಿಪ ತಪದಲ್ಲಿ ಜನ್ಮದೊಳ್ ಧ್ಯಾನದೊಳ್
ದೇವಮಾನವರೊಳವರಿಂಗೆ ಸಮನಿಲ್ಲೆನುತ ಬಾದರಾಯಣ ಪೇಳಲು ೩೯

ಅವರು ಗಿರಿಜಾಧವನ ಲಿಂಗದಲಿ ಭಜಿಸಿಹರು
ವಿವರಿಸಲು ನೀನು ಶಂಕರನ ಪ್ರತಿಮಾರ್ಚನೆಯ
ವಿವಿಧಾನುರಾಗದಿಂ ಬಹುಕಾಲ ನಿರ್ಮಿಸಿದ ಸತ್ಫಲವು ಭಾವಿಸುವಡೆ
ಅವರಿಂಗೆ ನಿಮಿಷದೊಳ್ ಸಿದ್ಧಿಸುವದರಿದಲ್ಲ
ಕುವಲಯದೊಳಾಕೃಷ್ಣ ಪಾರ್ಥರನು ಜಯಿಸುವಡೆ
ಪವಣಲ್ಲ ನಿನಗೆಂದು ಪರಮ ವೇದವ್ಯಾಸ ಮುನಿನಾಥ ಬೋಧಿಸುತಲಿ ೪೦

ಲಿಂಗಪೂಜಕರಸಮ ಘನತೆಯಿಂತೆಂದು ಮುನಿ
ಪುಂಗವಂ ಬಾದರಾಯಣ ಪೇಳ್ದು ತ್ರ್ಯಂಬಕನ
ತುಂಗ ಶಸ್ತ್ರಾಸ್ತ್ರಯುತನೆಂದೆನಿಸಿ ಕರುಣದಿಂ ಸಂತೈಸುತಾಕ್ಷಣದೊಳು
ಹಿಂಗದೆ ಸುಯೋಧನನ ಬಳಿಗೆ ಕಳುಹಿದನಿಂತು
ಲಿಂಗಾರ್ಚನೆಯೆ ಪರಮ ಘನವೆಂದು ದೇವ ಮಹ
ಲಿಂಗ ಮುನಿಪ್ರೋಕ್ತಮಂ ಪೇಳ್ದನಾ ಸಕರೋಜಿ ರಾಜನಿಗೆ ಸಂತಸದೊಳು ೪೧

ಸೌಂದರಗಣಾಧೀಶ ರತಿಲಂಪಟದಿ ಮಿರುಪ
ಸುಂದರಿಯ ಬಲ್ಮೊಲೆಯ ಕಂಡಸಮ ಭಕ್ತಿಯಿಂ
ಕಂದರ್ಪಹರನೆಂದು ಮನದೊಳಗೆ ಭಾವಿಸುತ ಭಕ್ತಿಯಿಂ ಭಜಿಸುತ್ತಿರೆ
ಅಂದು ಗಿರಿಜಾಧವಂ ಮೆಚ್ಚಿ ಕಾರುಣ್ಯದಿಂ
ನಂದಿಯುಂಡಿಗೆಯ ಪಡಿ ಪೊನ್ನುಗಳನಿತ್ತಾಗ
ಮುಂದೆವಾಳದಿ ಹಡಪಮಂ ಪೊತ್ತ ಜಗಮರಿಯೆ ಸಕರೋಜಿ ಕೇಳೆಂದನು ೪೨

ಚಂಡೇಶ್ವರಂ ಮಳಲಲಿಂಗವಂ ನಿರ್ಮಿಸುತ
ಚಂಡಶಶಿಧರನೆಂದು ನಂಬುತ್ತ ಮನದಲ್ಲಿ
ಕೊಂಡಾಡುತಿರೆ ದಿವ್ಯಕ್ಷೀರಾಭಿಷೇಕದಿಂ ತಜ್ಜನಕನತಿಕೋಪದಿಂ
ಬಂಡುಮಾಡಿದಿ ಎಂದು ಬಂದೊದೆಯಲವನ ಪದ
ಚಂಡಪರಶುವಿನಿಂದ ಪೊಡೆಯಲಾಕ್ಷಣದಲ್ಲಿ
ಚಂಡಿಕಾವರ ಮೆಚ್ಚಿ ಪ್ರಮಥಪದವಿಯನಿತ್ತ ಕೇಳು ಲಿಂಗದ ಘನತೆಯಂ ೪೩

ಗೊಲ್ಲಾಳ ಕುರಿಹಿಕ್ಕಿಯಂ ಬಿಡದೆ ಭಕ್ತಿಯಿಂ
ಎಲ್ಲವರು ತಿಳಿವಂತೆ ಚಿತ್ತದೊಳು ನಂಬಿ ನೆರೆ
ಸಲ್ಲೀಲೆಯಿಂದ ಶಿವಲಿಂಗಮೆಂದೆನುತಿರದೆ ಕ್ಷೀರಾಭಿಷೇಕಂಗಳಿಂ
ಬಲ್ಲಂತೆ ಪೂಜಿಸುತ್ತಿರಲಿತ್ತ ತಜ್ಜನಕ
ನಲ್ಲಿಂದ ಬಂದು ನೋಡುತ್ತೊದೆಯಲವನಡಿಯ
ನಿಲ್ಲದೆಯೆ ಖಂಡಿಸಲು ಕಾಮಾರಿ ಮೆಚ್ಚುತ್ತ ಕೈಲಾಸಪುರಕೊಯ್ದನು ೪೪

ಮತ್ತೊಂದು ಸತ್ಕಥೆಯ ಲಾಲಿಸೆಲೆ ಸಕರೋಜಿ
ಉತ್ತಮೋತ್ತಮಭಕ್ತ ಮಲ್ಲಸೆಟ್ಟಿಗೆ ಬಿಡದೆ
ಚಿತ್ತಜಾರಿಯ ಪೂಜೆಯಿಲ್ಲದುಣ್ಣದ ನೇಮವಾಗಿರಲು ಒಂದಿನದೊಳು
ಬಿತ್ತರದ ಕಣ್ಬೇನೆ ಬರಲು ಬೀಗರು ಕೂಡಿ
ಇತ್ತ ನೋಡೈ ಲಿಂಗವಿದೆಯೆಂದು ಹಾಸ್ಯದಿಂ
ಕತ್ತಲದ ಮನೆಯಲ್ಲಿ ಕಬ್ಬಿಣದ ಬಳ್ಳುವಂ ಕೈಗೆ ತೋರಲ್ ತುಂಬುತ ೭೫

ಅಂಗಜಾಂತಕ ಮೂರ್ತಿಯೆಂದು ಭಜಿಸುತ್ತವನು
ಹಿಂಗದಲಿ ಭೋಜನಂ ಗೆಯ್ಯೆ ತದನಂತರದಿ
ಭಂಗಗೇಡಿಗಳೆಲ್ಲ ಪರಿಹಾಸ್ಯಮಂ ಮಾಡೆ ಮಲ್ಲಿಸೆಟ್ಟಿಯು ತಿಳಿವುತ
ಲಿಂಗಮಂ ಮಾಡಿ ನೆರೆ ಮೆರೆಯೆ ಜಗಮರಿಯೆ ಸುರ
ಗಂಗೋತ್ತಮಾಂಗನಂ ಮೆರೆದು ಗಣಪದವಿಯನು
ಸಂಗಿಸಿದನಾ ಮಲ್ಲಸೆಟ್ಟಿ ಲಾಲಿಸು ರಾಜ ಪರಮ ಲಿಂಗದ ಮಹಿಮೆಯಂ ೪೬

ನಟ್ಟಡವಿಯೊಳು ಬೇಂಟೆ ದೊರೆಯದಿರೆ ಲುಬ್ಧಕಂ
ಸಟ್ಟ ಸರರಾತ್ರಿಯಲಿ ಶಾಂಡಿಲ್ಯವಿಟಪಿಯನು
ಕಟ್ಟಡವಿಯೊಳಗೇರಿ ಕಣ್ಗೆ ಮರೆಯಾದಸಮ ಪತ್ರಿಗಳನುತ್ತರಿಸುತ್ತ
ದಿಟ್ಟಿಯಂ ಮುಚ್ಚದೆಚ್ಚರದಿಂದೆ ನೆಲಸಿರಲು
ಕಟ್ಟಳಿದು ಖಸ್ತಿಜಲ ಸ್ರವಿಸುತಿರಲಾ ಸ್ಥಳದಿ
ಬಟ್ಟಬಯಲಾದ ಲಿಂಗದ ಪೂಜೆ ತಾನಾಗೆ ಶಿವನಸಮ ಕೃಪೆಯಾಂತನು ೪೭

ಮುನ್ನೋರ್ವ ಧೀವರಂ ನೃಪನೊಡನೆ ತಾಂ ಬೇಂಟೆ
ಯನ್ನಾಡುತಾರಣ್ಯಮಧ್ಯದೊಳ್ ನಗಜಾಲ
ವನ್ನು ಬೆದಕುತ್ತ ಭರದಿಂದ ಬರೆ ಮುಂದೊಂದು ಘನತರದ ಶ್ರೀತಾಣದೊಳ್
ಚೆನ್ನ ಶಿವಲಿಂಗಮದು ಪಾಳುದೇಗುಲದ ವರ
ಭಿನ್ನಪೀಠದೊಳಿರಲು ಕಂಡು ಕೈಯೊಳಗಾಂತು
ನನ್ನಿಯಿಂದರಸನಂ ಬೆಸಗೊಳಲು ಪೆಣಸುಟ್ಟ ಭೂದಿಯಂ ಪೂಜಿಪುದೆನೆ ೪೮

ವ್ಯಾಧಪತಿ ಮುಗ್ಧತನದಿಂ ಬಿಡದೆ ಭಕ್ತಿಯಿಂ
ಭೂಧರನ ಪರಿಹಾಸ್ಯದುತ್ತರವ ನೆರೆನಂಬಿ
ಜಾಧವನ ಪರಿಪೂಜಿಸುತ್ತಿರಲದೊಂದುದಿನ ಚಿತೆಭಸ್ಮ ಬಯಲಾಗಿರೆ
ಕಾದಲೆಗೆ ಪೇಳಲವಳೆನ್ನುರುಹಿ ನಿಜನೇಮ
ಸಾದರದಿ ನಡೆಸೆಂದು ಪಕ್ಕಣದಿ ಪೊಗಲವಳು
ಭೇದವಿಲ್ಲದೆ ಕಿಚ್ಚನಿಕ್ಕಿ ದಹನಂಗೈದು ತದ್ಭಸಿತದಿಂ ಧೀವರ ೪೯

ಮುನ್ನಿನಂತಾ ಲಿಂಗಮಂ ಭಜಿಸಿ ನೈವೇದ್ಯ
ವನ್ನು ತಾ ಸವಿದುಳಿದು ಭಸ್ಮಪ್ರಸಾದವನು
ತನ್ನ ಸತಿಗೆಂದು ಮನದೊಳಗೆ ಕರೆಯಲ್ಕೆ ದನಿದೋರುತಾ ಕಾಮಿನಿಯಳು
ಅನ್ನೆಗಂ ಬಂದವಳು ಸ್ವೀಕರಿಸಿ ಮಂದಿರಂ
ಬಿನ್ನಣದಿ ಮೆರೆವುತಿರೆ ಪನ್ನಗಾಧರ ಮೆಚ್ಚಿ
ಮನ್ನಿಸುತಲಾ ಬೇಡಕಾದಲರ ಕೈಲಾಸಪುರಕೊಯ್ದನೆಲೆ ರಾಜನೇ ೫೦

ಕಾಳಹಸ್ತೀಶನಂ ಭಜಿಸುತ್ತ ಪಣ್ಣಾಸ್ತಿ
ವ್ಯಾಳಕರಿಗುಣಗರ್ಭ ಜಾಲಗಳು ಜಗಮರಿಯೆ
ಕಾಳಿಕಾವರನಸಮ ಕೃಪೆಯೊಂತು ಕೈಲಾಸಮಂ ಸಾರ್ದರೇನೆಂಬೆನು
ಕಾಳಿ ಕಂಟೀಕ್ಷೇತ್ರ ಮಧ್ಯದೊಳು ಭಜಿಸಿ ತಾಂ
ಪಾಳಿಯಿಂ ಗೌರಿಯಾದಳು ಬಳಿಕ ಭಕ್ತಿಯಿಂ
ಕೇಳು ನೀಂ ಪರಮ ಲಿಂಗದ ಮಹಿಮೆಯೆಂದೆನುತ ಮಹಲಿಂಗಮುನಿ ಪೇಳ್ದನು ೫೯

ಉರಗದೇವತೆಯ ಸಂಗೀತಕ್ಕೆ ಮನಮೆಚ್ಚಿ
ಹರುಷದಿಂ ಲಿಂಗಮದು ಬಾಗಿರಲು ಶ್ರೀಚೋಳ
ಧರಣೀಶ ರುಜುಗೆಯ್ವನೆಂದಾಗಮಜ್ಞರಂ ಬರಮಾಡಿ ಬೆಸಗೊಳ್ಳಲು
ಹರಭಕ್ತನಿಂದಿದರ ಡೊಂಕ ತಿದ್ದುವೆನೆನಲು
ಕರೆಸುತ್ತ ಕೊಂಗುಲಿಯ ಕರಿಯ ನೈನಾರರಿಗೆ
ಭರದಿಂದ ವಿಜ್ಞಾಪನಂಗೈಯ್ಯೆ ಕೇಳಿ ಬಳಿಕಿಂತೆಂದನಾ ಮಹಿಮನು ೬೦

ಲಿಂಗಾರ್ಚನೆಗೆ ಪರಮ ಗುಗ್ಗುಳದ ನೇಮವೆನ
ಗಂಗವಾಗಿಹುದು ತತ್ಕಾರಣದಿ ಶ್ರೀಕೋಟಿ
ಪೊಂಗಳಂ ಕೊಟ್ಟುದುಂಟಾದಡೆಯು ಭೂತಳದೊಳೀ ಲಿಂಗದ ಸುಡೊಂಕಮಂ
ಹಿಂಗದಲಿ ತಿದ್ದಿ ನೆಟ್ಟಗೆ ಮಾಳ್ಪೆನೆಂದೆನುತ
ಪೊಂಗಿ ಪೊನ್ಗಳ ಕೊಂಡು ತಚ್ಛಿವಾಲಯಪೊಕ್ಕು
ತುಂಗಪಾಶದಿ ಗಂಡಗತ್ತರಿಯ ಸಂಹರಿಸಿ ಕೊಂಗುಲಿಯ ನೈನಾರನು ೬೧

ತಲ್ಲಿಂಗದೆಡೆಗೆ ಪಾಶವನಿಕ್ಕಿ ಕತ್ತರಿಯ
ಕೊಳ್ಳಿಂಗೆ ಹಿಂದೆಸೆಗೆ ಸಂದಿಸುತ ನಡೆಯಲ್ಕೆ
ಸಲ್ಲಲಿತ ಲಿಂಗಮದು ಮುನ್ನಿನೊಲ್ ರುಜುವಾಗಿ ಡೊಂಕಡಗಿ ಕಂಗೊಳಿಸಲು
ಎಲ್ಲ ಚೋಳಾದಿಗಳು ನೋಡಿ ಬಣ್ಣಿಸುತಿರಲು
ಫುಲ್ಲಶರಹರ ಮೆಚ್ಚಿ ತದ್ಭಕ್ತಶ್ರೇಷ್ಠನಂ
ನಿಲ್ಲದಲಿ ಕೈಲಾಸಪುರಕೊಯ್ದನೆಲೆ ರಾಜ ಕೇಳು ಲಿಂಗದ ಮಹಿಮೆಯಂ ೬೨

ಕೊಡಗೂಸು ಚೆನ್ನಕ್ಕ ತಾನೈಕ್ಯಪದವಿಯಂ
ಬಿಡದೆ ಮಲುಹಣನು ಮನದಿಷ್ಟಾರ್ಥಮಂ ಬಳಿಕ
ಒಡನೆ ಶ್ರೀ ಚೋಳಕ್ಕನೈನಾರ ಭಕ್ತತಾ ನಿತ್ಯನಿರುಪಮಸೌಖ್ಯಮಂ
ಎಡೆವಿಡದೆ ವಿಟಶ್ವೇತ ವರ ಪ್ರಮಥಪದವಿಯನು
ದೃಢಚಿತ್ತ ಮುನಿಮೃಕಂಡುಜನು ಪೂರ್ಣಾಯುವಂ
ಪೊಡವಿಯೊಳು ಶಿವಲಿಂಗಮಂ ಭಜಿಸಿ ಪಡೆದರೆಲೆ ಸಕರೋಜಿ ಕೇಳೆಂದನು ೫೫

ವಾಯಸಂ ಮಜ್ಜನಮನಾಚರಿಸಿ ಪಕ್ಕಗಳ
ನಾಯತದಿ ಜಾಡಿಸಲ್ಪರವಾರಿಶೀಕರ ನಿ
ಕಾಯ ಸಿಡಿದಲ್ಲಿ ಲಿಂಗದ ಮಜ್ಜನಾಗಲ್ಕೆ ಪುಣ್ಯಮಾರ್ಗವನೈದಿತು
ಮಾಯಮದಮರ್ದನ ಸುಲಿಂಗಗಳ ತ್ರೀಕೋಟಿ
ಸ್ವಾಯತದಿ ಸ್ಥಾಪನಂಗೈದು ಭೂತಳದಿ ರಘು
ರಾಯ ವಿಜಯಗಳನೆಲೆವನೆಯಾದ ಜಗವರಿಯೆ ಸಕರೋಜಿ ಕೇಳೆಂದನು ೫೬

ಕೊಟ್ಟಾರ ಬಾಚಯ್ಯ ಸರ್ವಜನ ತಿಳಿವಂತೆ
ಕೊಟ್ಟಿಗೆಯೊಳಗೆ ನೃಪಗೆ ಗಿರಿಜೇಶನಂ ತೋರ್ದ
ದಿಟ್ಟ ಶ್ರೀ ಬಸವದಂಡಾಧೀಶ ಕೂಷ್ಮಾಂಡಫಲದಲ್ಲಿ ಘನಲಿಂಗಮಂ
ಕಟ್ಟಣಕದಿಂ ಕೇಳ್ವ ಬಿಜ್ಜಳನ ಸಭೆಯಲ್ಲಿ
ನೆಟ್ಟನೆಯೆ ತೋರ್ದನೀ ಜಗಮರಿಯೆ ನೀನು ಮನ
ಮುಟ್ಟಿ ಕೇಳೆಂದನುತ ಮಹಲಿಂಗ ಮುನಿಪೇಳ್ದ ಮಾಲೋಜಿ ಸಹಜಾತಗೆ ೫೭

ದ್ರೋಣ ಭೀಷ್ಮಾದಿಗಳ ನಿಜ ಬಂಧುವರ್ಗಮಂ
ಕೇಣದಿಂ ಕೊಂದಸಮ ಸಾವು ಬೆನ್ನಟ್ಟುತಿರೆ
ಪ್ರಾಣದೊಳು ಮರುಗುತ್ತ ಧರ್ಮರಾಜಂ ಬಿಡದೆ ಮುನಿವರರ ಬೆಸಗೊಳ್ಳಲು
ಜಾಣ ಕೇಳ್ ಶ್ರೀಗಿರಿಯ ವರಪ್ರದಕ್ಷಿಣದ ಫಲ
ಊಣೆಯಿಲ್ಲದೆ ಕೊಂಡು ಸಪ್ತನದಿ ಸಮ್ಮದದ
ತಾಣದೊಳ್ ಲಿಂಗಗಳ ಸ್ಥಾಪನಂ ಮಾಡಿದರೆ ತದ್ರೋಹ ನೆರೆ ಪೋದುದು ೫೮

ಎಂದೆನುತ ಮುನಿಪೋತ್ತಮರು ಪೇಳೆ ಕೇಳ್ದು ಮುದ
ದಿಂದೆ ಧರ್ಮಜ ತನ್ನ ಸಹಜಾತರೊಡನಲ್ಲಿ
ನಿಂದು ನಿಜನಾಮಲಿಂಗಂಗಳಂ ಘನಭಕ್ತಿಪೂರ್ವಕದಿ ನೆಲೆಗೊಳಿಸುತ
ಚೆಂದದಿಂ ಭಜಿಸಿ ತದ್ದ್ರೋಹವನು ನೀಗಲಾ
ಡಂದು ಭೂತಳದಲ್ಲಿ ಸರ್ವಜನಮರಿವಂತೆ
ಸಂದುದು ನಿವೃತ್ತಿಸಂಗಮವೆಂಬ ನಾಮವಿದು ಸಿದ್ಧಾಂತವೆಲೆ ರಾಜನೇ ೫೯

ಶುದ್ಧಶೈವದೊಳಿಂತು ಪರಮ ಲಿಂಗಂಗಳಂ
ಶ್ರದ್ಧೆಯಿಂದಲಿ ಭಜಿಸಿ ತಮ್ಮ ಮಾನಸದ ಸಂ
ಸಿದ್ಧಿಗಳ ಪಡೆದರಿಂತೀ ಜಗದಿ ಬಳಿಕಿನ್ನು ವೀರಶೈವರು ಸಂತತಂ
ಬದ್ಧಭವಮರಣಹರಗುರುಕರುಣದಿಂ ಪಡೆದು
ಸಿದ್ಧವಹ ಪ್ರಾಣಲಿಂಗವ ಭಜಿಸಿ ಮುಕ್ತಿಯೊಳ
ಗಿದ್ದವರ ಸತ್ಕಥೆಯ ಕೇಳೆಂದು ಮಹಲಿಂಗ ಗುರು ಪೇಳಲುಜ್ಜುಗಿಸಿದಂ ೬೦

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿ ಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಿಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೬೧

ಅಂತು ಸಂಧಿ ೧೫ ಕ್ಕಂ ಪದ ೬೬೫ ಕ್ಕಂ
ಮಂಗಳಂ

ಶ್ರೀ

# ಹದಿನಾರನೆಯ ಸಂಧಿ

**ಸೂಚನೆ :** ಗುರುವಿನಿಂದಿಷ್ಟಲಿಂಗವ ಪಡೆದು ಪೂಜಿಸಿದ
ಶರಣರಿತಿಹಾಸಮಂ ಮಹಲಿಂಗ ಮುನಿವರ್ಯ
ಧರಣಿಪತಿಸಹಜಾತ ಸಕರೋಜಿರಾಜನಿಗೆ ಸೂಚಿಸಿದ ಕಾರುಣ್ಯದಿಂ

ಚಂಡಿಕಾಧರಬಿಂಬಫಲಸಾರ ರಾಜಸುಖ
ಪಂಡಿತಾಮರಭೂಜ ಪಾಂವೇಧನಾಗ್ನಿಗಿರಿ
ಮಂಡಿತಮಹಾಮೇರು ಕೋದಂಡಜಾಲಿಕೃತ ಕುಂಡಲಿಸಕೃತ ದಾನವಾ
ಮಂಡಲಮಹಾಮಹಿಮ ಮದನಪಿತನಕ್ಷಿಪದ
ಪುಂಡರೀಕಾಸನಾದ್ಯಮರ ಸಂಸೇವ್ಯಘನ
ಚಂಡೇಶ ವರದಾತ ಶ್ರೀಚೆನ್ನವೀರೇಶ ರಕ್ಷಿಪುದು ತ್ರೈಜಗವನು ೧

ಲಾಲಿಸೆಲೆ ಭೂಪಾಲಸಹಜಾತ ಭಕ್ತಿಯಿಂ
ಕಾಲಕಂಧರನಸಮಸದ್ಭಕ್ತರಾವಗಂ
ಲೀಲೆಯಿಂದಿಷ್ಟಲಿಂಗವ ಬಿಡದೆ ಪೂಜಿಸುತ ಸನ್ಮಾರ್ಗವನು ಹೊಂದಿದರ್
ಪೇಳಲರಿದವರ ಘನತೆಯನೆಂದು ಸರ್ವಮುನಿ
ಜಾಲವರ ಸೂಚಿಸುತ್ತಿರ್ದನೆಲೆ ಗಿರಿಜಾತೆ
ಕೇಳೆಂದು ನಂದ್ಯಾದಿ ಪ್ರಮಥರಾಲಿಸುವಂತೆ ಪರಮೇಶ ತಾನುಸುರ್ದನು ೨

ಶರಣ ಧೂಪದ ಮಾಚಿದೇವಯ್ಯಗಳ ಬಳಿಕ
ನಿರುಪಮ ಮಹಾಮಹಿಮ ಘಟ್ಟಿವಾಳಯ್ಯಗಳು
ಹರಭಕ್ತ ಮಾರಿಗೊಂಡನು ನಿರಘ ಸತ್ಯಣ್ಣಗಳು ಮುಖ್ಯ ಪ್ರಮಥಾಳಿಯು
ವರಲಿಂಗಪೂಜೆಗಳ ಮಾಡಿ ಉರಿಕರ್ಪುರದ
ಪರಿಯಂತೆ ತಲ್ಲಿಂಗದೊಳು ಬೆರೆದರೆಲೆ ರಾಜ
ಹರುಷದಿಂ ಕೇಳು ಲಿಂಗದ ಮಹಿಮೆಯೆಂದೆನುತ ಗುರುವರಂ ಪೇಳ್ದನಾಗ ೩

ಗಣಕಿಯರ ಸೀಮಂತ ರತ್ನ ಕಮಲಾಯಿ ಘನ
ಪ್ರಣುತ ಸತ್ಕೀರ್ತಿವಾರ್ತೆಯನಾಗ ಲಾಲಿಸುತ
ತ್ರಿಣಯ ವಿಟರೂಪದಿಂ ಬಂದವಳ ಮಂದಿರದಿ ಮುದದಿಂದೆ ವಾಸಿಸುತಲಿ
ಮಣಿಮಂಚದೆಡೆಗಿರ್ಪ ಲಿಂಗವನು ಸದ್ಭಕ್ತಿ
ಪ್ರಣಯದಿಂದೊಯ್ಯೆ ಬಳಿವಿಡಿದು ತತ್ಕಮಲಾಯಿ
ಗಣಕಿಯಳ ಹೃದಯಸ್ಥ ಪ್ರಾಣಮದು ಪೋಗಲಾ ವಾರ್ತೆಯನು ಕೇಳುತ್ತಲಿ ೪

ಬಸವಾದಿ ಪ್ರಮಥಗಣರೆಯ್ತಂದು ನೋಡುತ್ತ
ವಿಸ್ಮಯವ ನಾಂತು ಸತ್ಯಣ್ಣಗಳ ಕೇಳಲ್ಕೆ
ಅಸಮಾಕ್ಷ ಲಿಂಗವನು ಕದ್ದೊಯ್ಯಲಸುಪೋದುದೆಂದೆನಲು ಕೇಳುತ್ತಲಿ
ವಿಸುಪ ತ್ರಿಪುರಾಂತಕಾಲಯದಲ್ಲಿ ನೆಲಸಿರ್ಪ
ಕುಸುಮಶರಹರನ ಕರೆತಂದಸಮ ಲಿಂಗವನು
ವಿಸುಪಕಂಠದಿ ತಳೆಯೆ ಜೀವನಂ ಬರಲಾಗ ಗಣವರರು ಕೊಂಡಾಡಲು ೫

ಗಗನಾಪಗಾಧರಂಮೆಚ್ಚಿ ನಿಜರೂಪಮಂ
ನಗಜಾತೆ ಸಹಿತಂದು ತೋರುತ್ತ ಸಂತಸದಿ
ಅಗಣಿತ ಮಹಾಪ್ರಮಥಗಣರೆಯ್ದಿ ನೋಡುತಿರೆ ಮಣಿಖಚಿತ ಪುಷ್ಪಕದೊಳು
ಮೃಗನೇತ್ರೆ ಕಮಲಾಯಿ ಲಿಂಗನೈಷ್ಠೆಗೆ ಮೆಚ್ಚಿ
ಜಗವೆಲ್ಲ ತಿಳಿವಂತೆ ಕೈಲಾಸಗಿರಿಗೊಯ್ದು
ಸೊಗಸಿನಿಂ ರುದ್ರಕನ್ಯಾಪದವಿಯನು ಕೊಟ್ಟನೆಲೆ ರಾಜ ಕೇಳೆಂದನು ೬

ನರಜನ್ಮದೊಳಗಾವನಾದರುಂ ಸಂಭವಿಸಿ
ಸ್ಥಿರಲಿಂಗವನು ತಳೆಯದಿಹ ಮಾನವನು ಜಗದಿ
ನರಕಾಬ್ಧಿಯೊಳು ಬೀಳ್ವನೆಂದೆಂಬ ದಿವ್ಯಾಗಮೋಕ್ತಿಗಳ ಕೇಳುತ್ತಲಿ
ವರಸೂಳೆನಂಬೆಕ್ಕ ಚಿಂತಿಸುತ್ತಿರೆ ಮಿಂಡ
ಚರನಾಗಿ ದೇವಯ್ಯ ಬರೆ ಕಂಡು ಪಾದಕ್ಕೆ
ಎರಗುತ್ತ ಭಕ್ತಿಯಿಂದೆಲೆ ದೇವ ಲಿಂಗಮಂ ಪಾಲಿಸೆನಗೆಂದೆನಲ್ಕೆ ೭

ಕರದಲ್ಲಿ ಪಿಡಿದಿರ್ದ ಲಿಕುಚಮಂ ಕೊಡಲಾಗ
ಹರಲಿಂಗಮೆಂದೆನುತ ಭಕ್ತಿಯಿಂ ಭಾವಿಸುತ
ಶರಣೆಂದು ಕೈಕೊಂಡು ತನ್ನಂಗದೊಳ್ತಳೆದು ಶಿವಭಕ್ತ ನಾನಾದೆನು
ಧರಣೀಶ ಬಿಜ್ಜಳಂ ಮೊದಲಾದ ಭವಿಗಳ್ಗೆ
ಮರೆದಾದೊಡಂ ಎರಗದಿಹ ನೇಮದಿಂದಿರಲು
ತ್ವರಿತದಿಂದಾ ವಾರ್ತೆಯನು ಕೇಳಿ ಚಾಳೋಕ್ಯಕುಲತಿಲಕನಾಕ್ಷಣದೊಳು ೮

ಬಸವರಸನಾಸ್ಯಾಬ್ಜಮಂ ನೋಡಿ ಕೋಪಮದು
ಪಸರಿಸಲು ತತ್ಕಾಂತೆಯಂ ಕರೆಸಿ ಬಾರದಿರೆ
ಬಸವದಣ್ಣಾಯಕರು ಬರಹೇಳಲಾಕ್ಷಣಕೆ ಕೇಳುತ್ತ ಭಯಭಕ್ತಿಯಿಂ
ಅಸವಸದಿ ಬಂದು ತತ್ಪ್ರಮಥನಾಯಕನ ಪದ
ಬಿಸಜಗಳ್ಗೆರಗಿ ಎಡಬಲ ನಿಟ್ಟಿಸದೆ ನಿಲಲು
ವಸುಧೀಶ ಬಿಜ್ಜಳಂ ಪರಿಹಾಸ್ಯದಿಂದವಳ ಮೊಗನೋಡುತಿಂತೆಂದನು ೯

ಎಲೆ ಬಸವ ದಣ್ಣಾಯಕನೆ ಸೂಳೆ ನಿಂಬೆಕ್ಕ
ಒಲಿದು ಪೂಜಿಪುದಿದುವೆ ಘನಲಿಂಗಮೋ ಲಿಕುಚ
ಫಲಮೊ ಪೇಳೆಂದೆನಲು ನಸುನಗುತ ಮಂತ್ರಿಪತಿ ಬಿಜ್ಜಳನ ಮೊಗನೋಡುತ
ಇಳೆಯಾಣ್ಮ ಕೇಳ್ ಹರನ ಭಕ್ತರೆಂತಾದೊಡಂ
ಮಲಹರಾತ್ಮಕ ಲಿಂಗವಲ್ಲದನ್ಯವ ಕನಸಿ
ನೊಳಗಾದೊಡಂ ಭಜಿಸರೆಂದೆನಲು ಪ್ರತ್ಯಕ್ಷಮಂ ತೋರ್ಪುದೆನಗೆಂದೆನೆ ೧೦

ಅಂಬಿಕಾವರಭಕ್ತ ಬಸವೇಶನಾ ಪರಮ
ನಂಬೆಕ್ಕನಾಸ್ಯಾಬ್ಜಮಂ ನೋಡುತೆಲೆ ತಾಯೆ
ಕುಂಭಿನೀಶನ ಮನದ ಸಂಶಯವು ಪೋಪಂತೆ ಲಿಂಗಮಂ ತೋರೆಂದೆನೆ
ಬಿಂಬಿಸುವ ಕರಡಿಗೆಯನುಗಿದು ಕಾಣಿಸಲಾಗ
ಜಂಬೀರಫಲಮುಳಿದು ಶಂಭುಲಿಂಗಮದಾಗಿ
ಬಿಂಬಿಸಲು ಸರ್ವಜನ ಕಂಡು ನಿಬ್ಬೆರಗಾಗಿ ಮನ್ನಿಸಿದರಾ ಬಾಲೆಯಂ ೧೧

ಕಪ್ಪಡಿಯ ಸಂಗಮೇಶ್ವರನಲ್ಲಿ ಬಸವರಸ
ಒಪ್ಪದಿಂ ಬಯಲಾಗಬೇಕೆಂದು ಶ್ರೀ ಹಡಪ
ದಪ್ಪಣ್ಣಗಳ ಕರೆಯ ಕಳುಹಲ್ಕೆ ತತ್ಸಂಗಮೇಶನ್ನನಯ ಕರದಲಿ
ಇಪ್ಪನಲ್ಲಿಗೆ ಬಪ್ಪುದನುಚಿತವು ತೇಜದುರಿ
ಕಪ್ಪುರದ ತೆರದಿಂದೆ ತನ್ನಿಷ್ಟಲಿಂಗಮಂ
ದಪ್ಪಿ ಬಯಲಾದಳಾ ನೀಲಲೊಚನೆ ದೇವಿ ಸಿದ್ಧಾಂತವಿದು ಜಗದೊಳು ೧೨

ಇನ್ನು ತಲ್ಲಿಂಗಚೇತನವಾದ ಜಂಗಮದ
ಉನ್ನತದ ಮಹಿಮೆಯಂ ಲಾಲಿಸೆಲೆ ಸಕರೋಜಿ
ಮುನ್ನ ಶ್ರೀ ಪರಶಿವಂ ಲೋಕೋಪಕಾರಾರ್ಥ ಕಾರಣದಿ ನಿಜರೂಪಮಂ
ತನ್ನೊಳಗೆ ತಾ ಮಾಜಿಕೊಂಡಸಮ ಜಂಗಮದ
ಚಿನ್ನಮಂ ತಳೆದು ಕೈಲಾಸದಿಂ ಭೂತಳಕೆ
ನನ್ನಿಯಿಂ ಬಂದನೆಂದಿರದೆ ವೀರಾಗಮಂ ಸಾರುತಿಹುದಂತಲ್ಲದೆ ೧೩

ಸ್ಮರಿಸಿದರೆ ಕೋಟಿ ಜನ್ಮಾಂತರದ ದುರಿತಗಳ
ನೊರಸುವದು ಮನಮುಟ್ಟಿ ಭಜಿಸಿದೊಡೆ ಭಕ್ತಿಯಿಂ
ಪರಮ ಷೋಡಶದಾನಗಳ ಫಲವ ನೆರೆಕೊಡುವ ಚರಣದರ್ಶನ ಮಾತ್ರದಿ
ವರಮುಕ್ತಿಕಾಂತೆಯಂ ಕೈಗೂಡಿಸುವ ನಿತ್ಯ
ನಿರುಪಮದ ಜಂಗಮದ ಮಹಿಮೆಯಂ ಬಣ್ಣಿಪಡೆ
ಪರಮೇಶಗರಿದೆಂದು ಪರಮಜಗದಾರಾಧ್ಯ ಸೂಚಿಸಿದನಾನಂದದಿಂ ೧೪

ಸಕಲ ಶ್ರುತ್ಯಾಗಮಪುರಾಣಗಳು ಬಳಿವಿಡಿದು
ಅಕಲಂಕ ಶಿವನಾಗಮದ ಮಹಿಮೆ ಘನವೆಂದು
ಸುಕರದಿಂದುಲಿವುತಿಹವೆಂದೆನುತ ಪರಮೇಶ ಗಿರಿಜಾತೆಯೊಳು ಪೇಳಿದ
ಪ್ರಕಟ ತಜ್ಜಂಗಮವ ಭಜಿಸುತ್ತ ಬ್ರಹ್ಮಾಂಡ
ನಿಕರದೊಳ್ ಮುಕ್ತರಾದರ ಕಥೆಯ ಭಕ್ತಿಯಿಂ
ಸಕರೋಜಿ ಸದ್ಭಕ್ತ ಲಾಲಿಸೆಂದೆನುತಾಗ ಮಹಲಿಂಗ ಗುರು ಪೇಳ್ದನು ೧೫

ಇಳೆಯಾಂಡಗುಡಿಮಾರನೆಂದೆಂಬ ಸದ್ಭಕ್ತ
ಇಳೆಯೊಳಗೆ ಜಂಗಮಕೆ ಬೇಡಿದ ಪದಾರ್ಥಗಳ
ಒಲಿದು ಪಾಲಿಸುತಿರಲು ತದ್ವಾರ್ತೆಯನು ಕೇಳಿ ಪರಮೇಶನೊಂದಿನದೊಳು
ಬಳಿಕವನ ಭಕ್ತಿಯಂ ಪರಕಿಸುವೆನೆಂದೆನುತ
ಛಲದಿಂದೆ ಜಂಗಮಾಕೃತಿದಾಳ್ದು ಸುರಿವಪೆ
ರ್ಮಳೆಯೊಳಗೆ ನಡೆದು ನಡುಗುತ್ತ ತನ್ನಾಲಯಕೆ ಬರೆಕಂಡ ಸಂತಸದೊಳು ೧೬

ಎರಗುತ್ತ ಕರಕಂಜಗಳ ಮುಗಿದು ಎಲೆದೇವ
ಸುರಿವ ಹೆಮ್ಮಳೆಯಲ್ಲಿ ಬರವಾಯ್ತು ಬಳಲದಿರಿ
ಹರಹರ ಮಹಾದೇವ ಮುಪ್ಪಿನಾಯಕರೆಂದು ಉಪಚರಿಸುತಿರಲಾಕ್ಷಣಂ
ಪರಮೇಶನವರ ಭಕ್ತಿಯ ನೋಡಲೋಸುಗದಿ
ಪರಮ ಶಾಲ್ಯೋದನವ ನೀಡೆನಲು ನಿಜಸತಿಯ
ಕರೆದು ಪರಿಪಾಕಗೈಯೆಂದು ನಿರವಿಸಲಾಗ ಮಂದಿರದಿ ತಂಡುಲಗಳು ೧೭

ಚಿತ್ತಜಾರಿಯ ಕೃತಕದಿಂದಿಲ್ಲವಾಗಿರಲು
ಚಿತ್ತದೊಳು ಮರುಗಿ ನಿಜಕಾಂತಂಗೆ ಸೂಚಿಸಲು
ಮತ್ತೊಂದು ಕಲ್ಪನೆಯನಿಳೆಯಾಂಡ ಗುಡಿಮಾರಿ ಯೋಚಿಸಿದನೇನೆಂಬೆನು
ಪಿತ್ತಲೊಳು ಬಿತ್ತಿರ್ದ ಬತ್ತಗಳು ಮಳೆಗೆ ತೇ
ಲುತ್ತಿರಲು ಪೋಗಿ ತಾ ಕೊಂಡು ಬಂದಂಗನೆಗೆ
ಬಿತ್ತರದಿ ಕೊಡಲವಳು ಹುರಿದು ಥಳಿಸುತ್ತಕ್ಕಿಗಳ ಮಾಡುತಾಕ್ಷಣದೊಳು ೧೮

ಓಗರವ ಮಾಡಲೋಸುಗದಿಂದೆ ತತ್ಸತಿಯು
ಬೇಗದಲಿ ಬೆರಣಿಕಾಷ್ಠಂಗಳಿಗೆ ಪಿತ್ತಲಕೆ
ಪೋಗುತಿರಲರ್ಭಕಂ ಬಳಿವಿಡಿದು ಬರಲಟ್ಟಿ ಸಾವುಕಚ್ಚುತ್ತಸುವನು
ನೀಗಲದ ನೋಡಿ ಮನದೊಳ್ ಮರುಗದಾಕಾಂತೆ
ಈಗ ಶಿವಜಂಗಮಂ ಪಸಿದಿರ್ಪನೆಂದೆನುತ
ರಾಗದಿಂ ಕುರುಳ ಕಾಷ್ಠಂಗಳಂ ಕೊಂಡಸಮ ಸಂತೋಷದಿಂದೊಳಯಿಕೆ ೧೯

ನಡೆಗೊಂಡು ಬಂದಾತ್ಮಸಂಜಾತ ಪಿತ್ತಲದಿ
ಮಡಿದಿರ್ದ ವಾರ್ತೆಯಂ ಕಾಂತಂಗೆ ಸೂಚಿಸದೆ
ಕಡುತವಕದಿಂ ಪಾಕಮಂ ಗೈಯ್ದು ಮನವೊಲ್ದು ಕೃತಕಜಂಗಮರೂಪಗೆ
ಎಡೆಮಾಡಲೀಶ್ವರಂ ತನ್ನೊಳರಿದಿಳೆಯಾಂಡ
ಗುಡಿಮಾರ ನಿಜಸುತನ ಕರೆಯೆನಲು ಕಾದಲರ್
ಮೃಡರೂಪನೀನರ್ಪಿತಂ ಗೆಯ್ವುದಿಂದವನ ಚಿಂತೆಬಿಡು ಬೇಡೆಂದೆನೆ ೨೦

ಹಸುಮಕ್ಕಳಿಲ್ಲದೀ ಭೋಜನಂ ಭಾವಿಪಡೆ
ಹಸವಲ್ಲ ಕರೆಯೆನಲು ತತ್ಸತಿಯು ಸಂತಸದಿ
ನಸುನಗುತ ಕರೆಯೆ ದನಿದೋರುತ್ತ ಬರಲಸಮ ಕೃತಕರೂಪದ ಶಂಕರಂ
ಒಸೆದವರನೊಡಗೊಂಡು ಭೋಜನಂಗೈದು ನಿಜ
ಮಿಸುಪ ರೂಪವ ತೋರಿ ಕೈಲಾಸಗಿರಿಗೊಯ್ದ
ವಸುಧೆಯೊಳು ಸಿದ್ಧಾಂತಮಿದು ಕೇಳು ಸಕರೋಜ ಪರಮಜಂಗಮ
ಮಹಿಮೆಯಂ ೨೧

ಸಿರಿಯಾಳಚಂಗಳೆಯರಸಮ ಭಕ್ತಿಯನಿಂದು
ಪರಕಿಸುವೆನೆಂದೆನುತ ಪರಮೇಶ ತವಕದಿಂ
ವರಜಂಗಮಾಕೃತಿಯು ತಾಳ್ದು ಬರಲಾ ಪರಮ ದಂಪತಿಗಳಾಕ್ಷಣದೊಳು
ಎರಗುತ್ತ ಕರಕಂಜಗಳ ಮುಗಿದು ಭಕ್ತಿಯಿಂ
ಹರುಷದಿಂ ಬಿನ್ನೈಸಲೆನಗೆ ತರಳರ ಮಾಂಸ
ದುರು ನೇಮವಿರುತಿರಲು ನೀನದರ ತೆರದಿಂದೆ ತೃಪ್ತಿಬಡಿಸುವದೆಂದೆನೆ ೨೨

ಅಂತಾಯ್ತು ಎಲೆ ದೇವ ನಿಮ್ಮ ವ್ರತವಿದ್ದಂತೆ
ಸಂತಸದೊಳರ್ಪಿತವಮಾಳ್ಪೆದೆಂದೆನುತಾಗ
ಚಿಂತಿಸಿದ ಭಕ್ತಿಯಿಂ ನಿಜಸುತನ ಕೊರೆದಡಗ ಪಾಕಮುಂ ಗೈವುತ್ತಲಿ
ಅಂತರಿಸದಾಕ್ಷಣದಿ ದಂಪತಿಗಳೆಡೆಮಾಡೆ
ಕಂತುಹರ ತಾನಂದು ಸುತರಿಲ್ಲದವರ ನೀ
ಶಾಂತದೊಳು ಭೋಜನಂ ರಚಿಪುದಿಲ್ಲೆಂದೆನಲು ತತ್ತನುಜನಂ ಕರೆಯುತ ೨೩

ವರಜಂಗಮಾಕೃತಿಯ ತಳೆದ ಶಿವನೋಲೈಸಿ
ಧರೆಯೊಳಗೆ ಸರ್ವಜನ ತಿಳಿವಂತೆ ಚಂಗುಳಿಯು
ಸಿರಿಯಾಳರುಂ ತಮ್ಮ ಕೇರಿ ನೆರೆಸುತ್ತಸನು ಕೈಲಾಸಮುಂ ಸಾರ್ದರು
ಒರೆವೆನಿನ್ನೊಂದು ಸತ್ಕಥೆಯ ಸಕರೋಜ ನೀ
ಹರುಷದಿಂ ಲಾಲಿಸೆಂದೆನುತಾಗ ಮಹಲಿಂಗ
ಗುರುವರಂ ಪೇಳ್ದನದನೇನೆಂದು ಬಣ್ಣಿಸುವೆನಚ್ಚರಿಯ ಭೂತಳದೊಳು ೨೪

ನಂಬಿಯಕ್ಕನ ಮನವ ಪರಕಿಸುವ ಕಾರಣದೊ
ಳಂಬಿಕಾಪತಿ ಜಂಗಮಾಕೃತಿಯ ತಾಳ್ದು ಬರೆ
ನಂಬಿ ಭಯಭಕ್ತಿಯಿಂ ಬಿನ್ನೈಸಿ ಪರಮಾನ್ನ ಪಾಯಸಗಳಂ ಮಾಡುತ
ಶಂಬರವ ತರಲೆಯ್ದಲಿತ್ತ ಪಶುಗಳ ಕಾಯ್ದು
ಪಂಬಲಿಸುತರ್ಭಕಂ ಬರೆ ಮಾತೆಯಿಲ್ಲದಿರೆ
ಮುಂಬರಿದು ಪಸಿವಿನಾತುರದಿಂದೆ ತತ್ಪರಮ ಮೀಸಲ ಪದಾರ್ಥಂಗಳಂ ೨೫

ಕೊಂಡು ಕೈಯೊಳಗಾಂತು ಖಾತಿಸುತ್ತಿರಲಿತ್ತ
ಪುಂಡರೀಕಾಕ್ಷಿಣಿಯು ಕುಂಭಮುಂ ಪೊತ್ತುಬರೆ
ಕಂಡು ಕಡುಕೋಪದಿಂದೆಲೆ ಪಾಪಿ ಕುವರ ಶಿವಜಂಗಮಕೆ ಅಣಿಮಾಡಿದ
ಮಂಡಿತ ಪದಾರ್ಥಗಳ ಮೀಸಲವನಳಿದೆನುತ
ದಂಡದಿಂ ಪೊಡೆಯೆ ತಲೆವೊಡೆದು ಮಡಿದಿಳೆಯೊಳಗೆ
ದಿಂಡುಗೆಡಹಲು ಬಳಿಕ ಕಾಲ್ಪಿಡಿದು ಎಳೆದವನ ಪಿತ್ತಲದ ಚಿಪ್ಪಾಡಿಯೊಳ್ ೨೬

ಮುಚ್ಚುತಿರೆ ನೋಡುತ್ತ ಜಂಗಮಾಕೃತಿಯಾಂತ
ಕಿಚ್ಚುಗಣ್ಣನು ಮನದಿ ಮೆಚ್ಚಿ ನಗುತಿರಲಿತ್ತ
ಅಚ್ಚಳಿಯದಿಹ ಭಕ್ತಿಯಿಂ ಬಿಡದೆ ನಂಬೆಕ್ಕ ಮರಳಿ ಪರಮಾನ್ನಂಗಳಂ
ಚಚ್ಚರನೆ ಮಾಡುತ್ತ ಜಂಗಮಕೆ ನೀಡಲ್ಕೆ
ಅಚ್ಚರಿಯದಳೆವುತೆಲೆ ತಾಯೆ ಕೇಳೆನ್ನಸಮ
ನಿಚ್ಚಲದ ವ್ರತಮುಂಟು ತನುಜಾತರಿಲ್ಲದರ ಮನೆಯಲ್ಲಿ ಭೋಜನವನು ೨೭

ಮಾಡದಿಹ ನೇಮವೆನಗಿಹುದರಿಂ ನಿಜಸುತನ
ಗಾಢದಿಂ ಕರೆ ಎನಲು ನಂಬೆಕ್ಕನಾಕ್ಷಣದಿ
ಗಾಡಿಕಾರನ ನಿಲವನರಿವುತ್ತ ಕೋಪದಿಂ ಪೆರ್ವನಿಕೆಯಂ ಪುಡುಕುತಾ
ರೂಢಿಯಿಂದೆತ್ತಿ ನೆರೆ ಪೊಯ್ದಪೆನೆನಲ್ಕಂಜಿ
ಗೂಢಪದಕಂಕಣಂ ನಿಜರೂಪಮಂ ತೋರೆ
ನೋಡುತಾ ಬಾಲೆ ಬಿಡು ಬಿಡುನಿನ್ನ ಬಹಿರೂಪಕಾಂ ಮೆಚ್ಚೆನೆಲೆ ದೇವನೇ ೨೮

ಮುನ್ನಿರ್ದ ರೂಪದಿಂ ನಾನು ನಿರ್ಮಿಸಿದ ಪರ
ಮಾನ್ನಮಂ ಸವಿದಮೇಲೀ ರೂಪವನು ತೋರು
ಮನ್ನಿಸುವೆನಂತಲ್ಲದಲಿ ಬರಿದೆ ಠಕ್ಕಿಸಿದರೇನಾಯ್ತು ಕಪಟಾತ್ಮನೇ
ಚಿನ್ನನಾಶೆಯದೇಕೆ ಚಂಗಳೆಯುವೊಲ್ ಜಗದಿ
ನಿನ್ನ ಹಂಗಿಗಳಾಗಿ ಕರೆವಳಲ್ಲೆಂದೆನಲು
ಪನ್ನಗಾಧರ ಮೆಚ್ಚುತೆಲೆ ತಾಯೆ ಬಿಡು ನಿನ್ನ ಮನದ ಪಂಥವನೆನುತಲಿ ೨೯

ಮಡಿದಿರ್ದ ತನುಜಂಗೆ ಪ್ರಾಣಮಂ ಪಾಲಿಸುತ
ದೃಢದಿಂದೆ ನಂಬಿಯಕ್ಕನ ಭಕ್ತಿಶೇಷವನು
ನ್ಯಡನುಂಡ ತತ್ಸುದತಿ ಪೇಳ್ದ ತೆರದಿಂದಿರದೆ ಸಪ್ತದಿನಪರಿಯಂತರ
ಬಿಡದೆ ತತ್ಪುರದ ಮಾನವರನೊಡಗೊಂಡು ಘನ
ಸಡಗರದಿ ಕೈಲಾಸಕೊಯ್ದುಬಳಿಕವಳಿಂಗೆ
ಒಡನೆ ಶ್ರೀರುದ್ರಕನ್ಯಾಪದವಿಯಂ ಕೊಟ್ಟು ಲಾಲಿಸಿದನೆಲೆ ರಾಜನೇ ೩೦

ಚೂತಫಲಮಂ ತಂದು ಪತಿ ಕೊಡಲು ಭಕ್ತಿಯಿಂ
ದೋತು ಮುಚ್ಚಿಡಲದನು ತಿಳಿದು ಗಿರಿಜಾರಮಣ
ನಾತುರದಿ ಜಂಗಮಾಕೃತಿ ತಾಳ್ದು ಬಂದದನು ಬೇಡಲಾಕ್ಷಣದಲ್ಲಿಯೆ
ಪ್ರೀತಿಯಿಂದಾ ಫಲವ ಕೊಟ್ಟು ನಮಿಸಿದ ಬಳಿಕ
ಓತು ನಿಜಕಾಂತ ಕೇಳಲ್ಕದನು ಕೊಟ್ಟತುಳ
ಖ್ಯಾತಿಯಿಂ ಶಿವನೊಲಿಸಿ ಕಾರಿಕಾಲವ್ವೆ ತಾಂ ಕೈಲಾಸಮಂ ಸಾರ್ದಳು ೩೧

ಜಿನ್ನಗುರುಗಳಿಗೆಂದು ಪತಿ ಮಾಡಿಸಿದ ಪರಮ
ಅನ್ನಮಂ ಭಕ್ತಿಪೂರ್ವಕದಿಂದೆ ಜಂಗಮಕೆ
ನನ್ನಿಯಿಂದುಣಿಸಲಾ ವಾರ್ತೆಯನು ಕೇಳುತ್ತ ತದ್ರಮಣ ಘನಕೋಪದಿ
ಘನ್ನಘಾತಕಿಯೆಂದು ಬಡಿವುತಿರಲಾ ಕೊಲಿಯು
ಬಿನ್ನಣದ ಜಿನ್ನಮುನಿಯಂಗದೊಳು ಬೀಳುತಿರ
ಲನ್ನೆಗಂ ಕಂಡು ಭಯದಿಂದೆ ನಿಜಪತ್ನಿಯೆಂದೆನಿಸುತಿಹ ವೈಜವ್ವೆಯಾ ೩೨

ಅನುಮತದಿ ಶಿವಭಕ್ತನಾಗಿ ಶಿವಜಂಗಮಕೆ
ಮನದಣಿಕೆಗಳನಿತ್ತು ಸಂತತಂ ಜಗಮರಿಯೆ
ಮನಸಿಜಾರಿಯನೊಲಿಸಿ ಮುಕ್ತಿಮಾರ್ಗವಸಾರ್ದನೆಲೆರಾಜ ಲಾಲಿಸುವದು
ವಿನಯಗುಣಗಣಶೀಲನೆಂದೆನಿಪ ಮತ್ರ್ತ್ಯೋರ್ವ
ಘನದಯಾನಿಧಿ ಶೂಲದಾ ಬೊಮ್ಮಿ ತಂದೆಗಳು
ವಿನುತರಾಗಿರ್ದರಿಳೆಯಲ್ಲಿ ಮೊರೆಹೊಕ್ಕರಂ ಕೊಡದ ನೇಮದ ಬಿಂಕದಿಂ ೩೩

ಅದನರಿದು ಶ್ರೀಗಿರಿಸುತಾಕಾಂತನೊಂದು ದಿನ
ಪದುಳದಿಂದವನ ಮನಸಿನ ಧೈರ್ಯವಂ ನೋಳ್ಪ
ಹದದಿಂದೆ ಜಂಗಮಾಕೃತಿ ತಾಳ್ದು ಬಂದಸಮ ಬಿಜ್ಜಳಧರಾಧೀಶನ
ವಿದಿತ ಭಂಡಾರವಂ ಕನ್ನಮಂ ಕೊರೆವುತಿರೆ
ಒದಗಿರ್ದ ಭೃತ್ಯಜನರೆಲ್ಲ ಕೊಂಡೊಯ್ಯುತಿರೆ
ಮದನಾರಿ ಶರಣ ತಾಂ ಬಡಿಸಿಕೊಳಲಾಕ್ಷಣದಿ ಬಂದವರು ನರನಾಥಗೆ ೩೪

ಪೇಳಲಾ ವೃತ್ತಾಂತಮಂ ಬಿಡದೆ ಭೃತ್ಯರಿಂ
ಕೇಳುತ್ತ ರೋಷದಿಂದಾ ಬೊಮ್ಮ ತಂದೆಗಳ
ಶೂಲಕ್ಕೆ ಹಾಕೆಂದು ನಿರವಿಸುತ ತವಕದಿಂದಾ ಕಳ್ಳ ತಾ ತಿಳಿವುತ
ಭಾಳಾಕ್ಷಪದಪದ್ಮ ಬಸವಾದಿ ಪ್ರಮಥಗಣ
ಜಾಲ ನೋಡುತ್ತಿರಲು ಶೂಲಮಾರೋಹಿಸುವ
ವೇಳೆಯೊಳು ತಚ್ಚೋರಜಂಗಮಾಕೃತಿಸಾಂಬ ಮೆಚ್ಚಿ ನಿಜಪದವಿತ್ತನು ೩೫

ಗೂಢಪದಕಂಕಣಂ ಚರವೇಷದಿಂದಿರದೆ
ರೂಢಿಗೀಶನ ಮಂದಿರವ ಪೊಕ್ಕು ಕಳ್ಳತನ
ಮಾಡಿ ಬಂದೊಡನೆ ಮೊರೆ ಹೊಗಲಾಗ ತಚ್ಚೋರತನಕೆ ತಾ ಗುರಿಯಾಗುತ
ಗಾಢದಿಂದಸಮ ಶೂಲವನೇರುತಾಕ್ಷಣದಿ
ನಾಡೆ ಶಂಕರನೊಲಿಸಿ ಗುಂಡಬ್ರಹ್ಮಯ್ಯಗಳು
ಗಾಡಿಯಿಂ ನಿಜಪದವ ಪಡೆದರಲೆ ಸಕರೋಜಿ ಕೇಳು ಜಂಗಮಮಹಿಮೆಯಂ ೩೬

ಜಂಗಮಂ ಭೂವರನ ಭಂಡಾರದೊಳಗಿರ್ಪ
ಪೊಂಗಳಂ ಕಳಲು ಕಿಂಕರರು ಬೆನ್ನಟ್ಟಿ ಬರೆ
ಹಿಂಗದಲೆ ಬಂದು ಚರ ಮೊರೆವೊಗಲ್ ತಚ್ಚರವನಸಮ ಭಕ್ತ್ಯಾನಂದದಿ
ಪೊಂಗಿ ಗರ್ಭೀಕರಿಸುತರಸನಾಳ್ಗಳ ಕಳುಹೆ
ಮಂಗಳ ಮಹಾಮಹಿಮ ಕೈಕೂಲಿ ಚಾಮಯ್ಯ
ತುಂಗಗಿರಿಜಾವರನ ನಿಜರೂಪವನು ಸಾರ್ದನಿದು ಸಿದ್ಧ ಮೂಜಗದೊಳು ೩೭

ಸಕಲ ಸಂಭ್ರಮವಾಂತು ಚತುರಂಗ ಮಾರ್ಬಲದ
ನಿಕರದಿಂದೊಡಗೂಡಿ ಬರುತಿರಲು ಮಾರ್ಗದೊಳು
ಸಕಳಂಕ ಚಂದ್ರಮುಖಿ ನಿಜಪತ್ನಿವೆರಸಿ ಮೊನೆಧರ ಚೋಳನಾಕ್ಷಣದೊಳು
ಪ್ರಕಟವಹ ಜಂಗಮಂ ಕಾಣುತ್ತ ಸಮ್ಮುಖದಿ
ಭಕುತಿಯಿಂ ನಮಿಸಲಾತನಸುದತಿಯಂ ಕಂಡು
ಮಕರಕೇತನಶರಕೆ ಗುರಿಯಾಗಿ ವಿರಹದಿಂ ಮರುಗುತ್ತ ಮಾನಸದೊಳು ೩೮

ಪಂಬಲಿಸಿ ಕಳವಳದಿ ರೋದನಂಗೈಯುತಿರೆ
ಕುಂಭಿನೀಶನು ಬಳಿಕ ತಜ್ಜಂಗಮವ ನೋಡಿ
ಕಂಬನಿಯದೇಕೆ ಬಿಡು ಬಿಡು ದೇವ ನಿಜಮನದ ಬಯಕೆಯನು ಬೇಡೆಂದೆನೆ
ಶಂಬರಾರಿಯ ತಾಪ ತರಹರಿಸಲಾರೆ ವರ
ಕುಂಭಕುಚೆಯನು ಕೊಟ್ಟು ಬದುಕಿಸುವುದೆಂದೆನಲು
ನಂಬಿ ಭಯಭಕ್ತಿಯಿಂದವಳ ಧಾರೆಯನೆರೆದು ಧರೆಯ ಭೋಗವನೆಲ್ಲವ ೩೯

ಕೊಟ್ಟು ತಜ್ಜಂಗಮಕೆ ಸಂತಸದಿ ಶರಣೆಂದು
ನೆಟ್ಟನಾತನ ದಾಸ ತಾನಾಗಿ ಬಿಡದೆ ಮನ
ಮುಟ್ಟಿ ಓಲೈಸಲ್ಕೆ ಶ್ರೀಗಿರಿಸುತಾನಾಥ ಮೈದೋರುತತಿಶಯದೊಳು
ದಿಟ್ಟತನದಸಮಶ್ರದ್ಧೆಗೆ ಮೆಚ್ಚಿ ಕೈಲಾಸ
ಪಟ್ಟಣಕೆ ಮೊನೆಧರನ ಕೊಂಡೊಯ್ದನೆಲೆ ರಾಜ
ನಿಷ್ಠೆಯಿಂ ಕೇಳೆಂದು ಮಹಲಿಂಗ ಮುನಿರಾಜ ಪೇಳ್ದ ಪರಮಾನಂದದಿಂ ೪೦

ಚಂಡಾಲವೇಷದಿಂ ಭಸಿತ ರುದ್ರಾಕ್ಷಿಗಳ
ಚಂಡಿಕಾಪತಿ ತಳೆದು ಸೂರಸಾನಿಯ ಹೃದಯ
ಪುಂಡರೀಕದ ಧೈರ್ಯಮಂ ನೋಡಲೋಸುಗದಿ ಬರಲು ಕಾಣುತ ಭಕ್ತಿಯಿಂ
ಮಂಡಿತದ್ವಯಗಳಿಗೆ ನಮಿಸಿ ಮನವೊಲಿದು ಮುಂ
ಕೊಂಡು ನಿಜಮಂದಿರಕೆ ಕರೆದೊಯ್ದು ಭಜಿಸುತಿರೆ
ಕಂಡು ವಿಪ್ರಾಧಮರು ತಮತಮಗೆ ನೆರೆದು ಮಂತಣಗೆಯ್ವುತಿಂತೆಂದರು ೪೧

ಎಲೆ ಕಾಂತೆ ಬ್ರಾಹ್ಮಣೋತ್ತಮ ಕುಲವ ಜಗದೊಳಗೆ
ಪೊಲೆಗಲಿಸಿ ಬಿಟ್ಟೆ ಗಡ ವಿಪರೀತವೀಗ ನಿಜ
ನಿಲಯದಿಂ ಪೊಲೆಯನಂ ಪೊರಮಡಿಪುದೆಂದೆನುತ ಸೂರಸಾನಿಯ ಜರೆಯಲು
ಮಲಹರಾತ್ಮಕನಿಲವನರಿಯದ ಮಹಾಪಾಪಿ
ಗಳು ಎಂದು ಥಳಥಳಿಪ ಲಿಂಗಮೂರ್ತಿಯ ಮಾಡಿ
ಬಳಿಕೆಲ್ಲರಿಗೆ ತೋರಲಾ ಉಮಾವರ ಮೆಚ್ಚಿ ಪ್ರಮಥಪದವಿಯನಿತ್ತನು ೪೨

ಸೋಮ ಸೀಮಾರರುಂ ನಿರ್ಮಿಸಿದ ಯಾಗಕ್ಕೆ
ಹೈಮವತಿಯಾಣ್ಮಶ್ವಪಚಾಕೃತಿಯ ತಳೆವುತಭಿ
ರಾಮದಿಂ ಭಸಿತ ರುದ್ರಾಕ್ಷಿಗಳನಂಗದೊಳು ಅಳವಡಿಸಿಕೊಂಡಾಕ್ಷಣಂ
ಪ್ರೇಮದಿಂ ಬರೆ ಕಂಡು ನಮಿಸೆ ವಿಪ್ರೋತ್ತಮರ
ಸ್ತೋಮವಿದು ದುಷ್ಕೃತ್ಯವೆಂದು ಬಿಟ್ಟೋಡಲಾ
ಹೋಮದೊಳು ಪೂಜೆಯಂ ಕೈಕೊಂಡು ಶಂಕರಂ ನೆರೆ ಮೆರೆದನಾ ಭಕ್ತನಂ ೪೩

ಸಾಮವೇದಿಯ ಪಿತೃಕಾರ್ಯಕ್ಕೆ ಜಗಮರಿಯೆ
ರಾಮಕಂಧರ ಪಿರಿಯ ಭಕ್ತನಾಕಾರದಿಂ
ಪ್ರೇಮದಿಂ ಬರಲೆದ್ದು ನಮಿಸುತ್ತ ಕೈಮುಗಿದು ದಿವ್ಯಾಗಮೋಕ್ತಂಗಳಿಂ
ಆ ಮಹಿಮನಂಘ್ರಿಗಳ ಭಜಿಸುತ್ತಲವಿಸಿ ನಿ
ಸ್ಸೀಮ ನಿಜಕಾಮಿತದಿ ಭಕ್ತೀಸ ನಗರಗಳ
ಸ್ತೋಮಮಂ ಕೊಂಡಸಮ ಕೈಲಾಸಮಂ ಸಾರ್ದನಾ ಭಕ್ತನೆಲೆರಾಜನೆ ೪೪

ಸಂಗರದಿ ಮಾರಾಂತ ಭಟರ ಮಸ್ತಕಗಳಂ
ತುಂಗ ಭುಜಬಲದಿಂದೆ ಖಂಡಿಸುತೆ ನಿಜ ಚರರು
ಭಂಗಿಸುತ್ತಿರೆ ಪಗಲ್ಗೋಳ ಸಮರಾಂಗಣದಿ ನಮಿಸುತ್ತ ಮುಂದೆಸೆಯೊಳು
ಜಂಗಮದ ಜಡೆದಲೆಯ ಕಂಡು ಮರುಗುತ್ತಕಟ
ಸಂಘಟಿಸಿತಘವಿದಕೆ ತನ್ನ ತಲೆ ಸಮನಿತ್ತು
ಮಂಗಲೆಯ ವರನ ಕೃಪೆಯಂ ಪಡೆವೆನೆಂದೆನುತ ನಿಶ್ಚಯಿಸಿ ಮಾನಸದೊಳು ೪೫

ಬಿಡದೆ ನಿಜಕಂಠಮಂ ಕಡಿದುಕೊಳುತಿರಲಾಗ
ಮೃಡ ಮೆಚ್ಚುತಲೆ ಚೋಳ ನಿಲ್ಲು ನಿಲ್ಲೆಂದೆನುತ
ಒಡನೆ ನಿಜರೂಪಮಂದೋರುತ್ತ ತರ್ಕೈಸಿ ಮುಂಡಾಡಿ ಮುದ್ದಿಸುತಲಿ
ಜಡೆದಲೆಯ ಜಂಗಮಕೆ ಪ್ರಾಣಮಂ ಪಾಲಿಸುತ
ಪೊಡವಿಪನ ದೃಢಕೆ ಸಮನಿಲ್ಲೆನುತೆ ಕೊಂಡಾಡಿ
ಕಡವರದ ಬೆಟ್ಟಂಗೆ ಕರೆದೊಯ್ದು ಗಣಪದವನಿತ್ತಾಗ ಮನ್ನಿಸಿದನು ೪೬

ಐಸರನ ಭಕ್ತಿಯಂ ಪ್ರಕಟಿಸುವ ಕಾರಣದೊ
ಳೈಸರಲನುರುಹಿರ್ದ ಶ್ರೀಗಿರಿಸುತಾನಾಥ
ನೈಸರದಿ ಜಂಗಮಾಕೃತಿ ತಾಳ್ದು ಬಂದವನ ಸತಿಯುಟ್ಟ ವರಶಾಲೆಯಂ
ಓಸರಿಸದಲಿ ಬೇಡೆ ಕೊಡೆ ಸಾಲದೆಂದೆನುತ
ಭಾಸುರದ ನಿಜ ಕಚ್ಚುಟವನಿತ್ತು ನಮಿಸಲ್ಕೆ
ಭೇಶಧರ ಮೆಚ್ಚಿ ಕೈಲಾಸಕಂ ಕರೆದೊಯ್ದನೆಲೆ ರಾಜ ಲಾಲಿಸುವದು ೪೭

ಪನ್ನೆರಡು ವರುಷ ಪರಿಯಂತರದಿ ಎಡೆವಿಡದೆ
ಚೆನ್ನಾಗಿ ನೆಯ್ದಿರ್ದ ವಸ್ತ್ರಮಂ ಬಯಸಿ ಘನ
ಪನ್ನಗಾಧರ ವೃದ್ಧ ಜಂಗಮಾಕಾರದಿಂ ಬಂದು ಬೇಡಲು ಭಕ್ತಿಯಿಂ
ಮನ್ನಿಸುತ್ತಲೆ ಇತ್ತು ಶಂಕರನ ಕೃಪೆಯಾಂತು
ಪೊನ್ನವೆಟ್ಟಂಗೆ ನೆರೆ ಪೋದನಾ ದಾಸಿಮಯ
ನಿನ್ನು ಕೇಳಾ ಪರಮ ಜಂಗಮದ ಘನತೆಯಂ ಸಕರೋಜ ಸದ್ಭಕ್ತನೆ ೪೮

ಸುಗುಣಮಣಿಮಾಲ ನಿರ್ಲಜ್ಜಿಶಾಂತಯ್ಯಗಳ
ಬಗೆಯ ಪರಕಿಸುವ ಕಾರಣದಿಂದೆ ಜಗದೊಳಗೆ
ಮೃಗಧರಂ ಜಂಗಮಾಕೃತಿಯಾಂತು ಬಂದಸಮ ಬಟ್ಟೆಯನು ನೆರೆ ಬೇಡಲು
ಸೊಗಸಿನಿಂ ಸತಿಯುಟ್ಟ ವಸನಮಂ ಕೊಡಲಾಗ
ನಗುತೆನಗೆ ಸಾಲದೆನೆ ತನ್ನಸಮ ಕೋವಣವ
ಮಿಗೆ ಕೊಟ್ಟು ಮೀನಾಂಕ ಮದನಾಶನಂ ಒಲಿಸಿ ಗಣಪದವ ನೆರೆ ಸಾರ್ದರು ೪೯

ಅಮರನೀತಿಯ ಮನವ ನೋಡಲೋಸುಗದಿಂದೆ
ಶಮನಾರಿ ಚರವೇಷದಿಂ ಬಂದವನ ಗೇಹ
ಮುಮ ಪೊಕ್ಕು ಕಚ್ಚುಟುವ ಜತ್ತನದೊಳಿರಿಸೆಂದು ಪೇಳಿ ತಾನೇ ಕೃತಕದ
ಪ್ರಮುದದಿಂ ಬಯಲಮಾಡುತ್ತ ತದನಂತರದೊ
ಳಿಮಗೆ ಕೌಪೀನಮಂ ಕೊಡುಯೆನಲುಮಿಲ್ಲದಿರೆ
ಅಮಿತ ಪೀತಾಂಬರದ ಸೆರಗುಗಳ ಪರಿದೀಯೆ ನಾನೊಲ್ಲೆನೆಂದೆನುತಲಿ ೫೦

ಎನ್ನ ಕೋವಣಕೆ ಸಮನೆನಿಪ ಕೌಪೀನ ಬಳಿ
ಕಿನ್ನೊಂದುಮುಂಟದರ ಸಮತೂಕದರಿವೆಯಂ
ನನ್ನಿಯಿಂದೀಯೆನಲು ಚಿಂತಾಲದೊಳಗಿರಿಸಿ ಪರಿಪರಿಯ ವಸ್ತ್ರಂಗಳಂ
ಬಿನ್ನಣದಿ ತೂಗುತಿರೆ ಸರಿಬಾರದಿರಲಾಗ
ತನ್ನ ಸತಿ ಸುತರು ಮುಂತಾದವರ ತೂಗಿತ್ತು
ಉನ್ನತದಿ ಶಿವನೊಲಿಸಿ ಕೈಲಾಸಮಂ ಸಾರ್ದನಮರನೀತಿಯ ಮುದದೊಳು ೫೧

ಸಿಂಧು ಬಲ್ಲಾಳ ಭೂಪನ ಭಕ್ತಿ ಬಿಂಕವನು
ಕಂದುಗೊರಳನು ನೋಳ್ಪ ತವಕದಿಂ ಚರವಾಗಿ
ಬಂದು ಪರಮಾನಂದದಿಂದವನ ಚಂದನಾಂಗಿಯ ನೋಡಿ ಮೋಹಿಸುತಲಿ
ಚಂದದಿಂ ಕೈಗೂಡಿಸುವದೆನಲು ಭೂಕಾಂತ
ಮಂದಿರದೊಳಿರ್ವರಂ ಒಳಪೊಗಿಸಿ ಬಾಗಿಲವ
ನಂದು ಕಾಯುತ್ತಿರಲು ಪರಮೇಶ ಮೆಚ್ಚುತ್ತ ನೆರೆಮೆರೆದನಾ ಭಕ್ತನಂ ೫೨

ಮತ್ತೊಂದು ದಿನದೊಳಿಪ್ಪಗೆಯಾಂಡ ಭಕ್ತನ ಸು
ಚಿತ್ತಮಂ ಪರಿಕಿಸುವ ಕಾರಣದಿ ಜಗದೊಳಗೆ
ಚಿತ್ತಜಾಂತಕ ಜಂಗಮಾಕಾರದಿಂ ನಡೆದು ಬಂದವನ ಮಾನಿನಿಯನು
ಬಿತ್ತರದಿ ಬೇಡಲಿತ್ತವನ ಸೇವಕನಾಗಿ
ರುತ್ತಿರಲು ನಿಮ್ಮವರು ಕಂಡರೆಮ್ಮಯ ಕತ್ತ
ಕತ್ತರಿಪರೆನೆ ತನ್ನ ಸೀಮೆಯಂ ದಾಂಟಿಸುತ ಶಿವನೊಲವ ನೆರೆಪಡೆದನು ೫೩

ವೀರಮಾಹೇಶ್ವರಾರಾಧನೆಯ ನೀನಿರದೆ
ವಾರದಿಂ ಮಾಡೆಂದು ನಿಜಸತಿಗೆ ಪೇಳುತ್ತ
ಭೂರಿಪೊಂಗಳ ಕೊಟ್ಟು ಚತುರಂಗಬಲಸಹಿತ ಪರರಾಜರಂ ಜಯಿಸುವ
ಕಾರಣದಿ ಪೋಗಲ್ಕೆ ಮೂರು ಬರಿಸನ್ನಬರ
ಧಾರುಣಿಗೆ ಬರ ಬೀಳೆ ತದ್ಧನದಿ ನಿಜಬಂಧು
ವಾರವನು ತತ್ಸತಿಯು ಪರಿಪಾಲಿಸಲು ಬಳಿಕ ಸಿರಿವಂತ ಭೂಪಾಲನು ೫೪

ಆ ವಾರ್ತೆಯಂ ಕೇಳಿ ಕೋಪದಿಂ ಬಂದವಳ
ನೋವಿ ಕೇಳುತ್ತಸಮ ಪಾಪಾತ್ಮೆಯಾಗಿ ಶರ
ಣಾವಳಿಯ ತೃಪ್ತಿಮಾಡದೆ ಬರಿದೆ ನೀನು ನಿಜಬಂಧುಗಳನೇ ಪೊರೆದೆಯಾ
ಆವ ರೀತಿಯಿದೆಂದು ಗರ್ಜಿಸುತ್ತವಳ ಕೊಲೆ
ಭಾವಜಾಂತಕ ಮೆಚ್ಚುತಾಕ್ಷಣದಿ ಸಿರಿವಂತ
ಭೂವರಗೆ ಮುಕ್ತಿಪದವನು ಕೊಟ್ಟ ಸಕರೋಜಿ ಲಾಲಿಪುದು ಚರಮಹಿಮೆಯಂ ೫೫

ಸತ್ಯಗುಣಶೀಲ ಸನ್ನುತ ಶಾಂತಮಾನವಂ
ಭೃತ್ಯಭಾವಾನುಗತ ಚಿತ್ತಚಿನ್ಮಯ[೧][ನೇಕ][೧]
ಚಿತ್ತ ಮಹಿಮಾಂಕ ಜಂಗಮಜೀವಿ ದಸರಯ್ಯನಿರಲನ್ಯಮತವಾದಿಗಳ್
ಕೃತ್ರಿಮದಿ ಮೋಟಮಲ್ಲನ ಕರೆದು ತವಕದಿಂ
ನಿತ್ಯ ವರ ಜಂಗಮದ ರೂಪಿನಿಂ ಕಳುಹಲ್ಕೆ
ಮೃತ್ಯುಹರ ಭಕ್ತನಿದ್ದೆಡೆಗಾಗಿ ಬರೆ ಕಂಡು ಭಯಭಕ್ತಿಯಿಂ ನಮಿಸಲು ೫೬

ಮೋಟಮಲ್ಲಂ ತನ್ನ ಮೊಂಡಗೈಯಿಂದವನ
ತಾಟಿಸುತ್ತಿರಲು ತಲೆವೊಡೆವ ತೆರದಿಂ ಬಳಿಕ
ಕಾಟನಪದಾರಿಭಕ್ತೋತ್ತಮಂ ದಸರಯ್ಯ ನಲವೇರುತಿಂತೆಂದನು
ಹಾಟಕಾಚಲಧಾಮ ನಿಮ್ಮ ಮೃದುಹಸ್ತಕ್ಕೆ
ಸಾಟಿಯಲ್ಲಂ ಚೂತಪಲ್ಲವಂ ನೊಂದವಿದು
ಬೇಟನಾನರಿಯೆನೆಂದಾ ಮೋಟಗೈಯನೊತ್ತುತ್ತಿರಲದೇನೆಂಬೆನು ೫೭

ಮಧುಮಾಸದೊಳ್ ಚಿಗಿತ ಮಾಮರದ ಕಳಕಿಗಳ
ವಿಧಿಯಂತೆ ಕರಪಲ್ಲವಾಂಗುಲಿಗಳುಂ ಕೊನರಿ
ವಿದಿತದಿಂ ಪ್ರಜ್ವಲಿಸುತಿರಲಾಗ ಪರಮ ಜಂಗಮರೂಪ ನಿಜವಾಗಲು
ವಿಧುಕಲಾಧರ ಮೆಚ್ಚಿ ದಸರಿದೇವಯ್ಯನಿಗೆ
ಸದಮಲದ ನಿಜರೂಪಮಂ ತೋರ್ದನೆಲೆ ರಾಜ
ಮುದದಿಂದೆ ಕೇಳೆನುತ ಮಹಲಿಂಗ ಮುನಿವರಂ ಪೇಳ್ದನತಿಶಯದಿಂದಲಿ ೫೮

---

[೧] ನುಯ್ಯ (ಕ), (ಚ).

ಇನ್ನೊಂದು ಸತ್ಕಥೆಯ ಲಾಲಿಸೆಲೆ ಸಕರೋಜಿ
ಮುನ್ನ ವೃಷಭೇಶ್ವರಂ ಶಿವಸಾಜ್ಞೆಯಂ ತಳೆದು
ನನ್ನಿಯಿಂ ಮಂಡಿಗೆಯ ಮಾದರಸ ಮಾದಲಾಂಬಿಕೆಯೆಂಬ ದಂಪತಿಗಳ
ಚೆನ್ನೆಸೆವ ಗರ್ಭದೊಳ್ ಸಂಭವಿಸಿ ಭೂತಳದಿ
ಬಿನ್ನಣಲಿದಿ ಬಾಲೀಲೆಯನುಳಿದು ಸುಗುಣ ಸಂ
ಪನ್ನ ಸಂಗಮನಾಥನಂ ಒಲಿಸಿ ಕಲ್ಯಾಣಪಟ್ಟಣದಿ ಸುಖಮಿರುತಿರೆ ೫೯

ಕಪ್ಪಡಿಯಿನಟ್ಟಿದೋಲೆಯದು ಗಗನಾಂತರದಿ
ತಪ್ಪದಲೆ ಬಿಜ್ಜಳನ ವರಸಭಾಮಧ್ಯದೊಳು
ತೊಪ್ಪನೇ ಬೀಳಲೆಲ್ಲರಿಗರಿದುಮಾಗಿರಲು ಓದುತಾ ಬಸವೇಶನು
ಒಪ್ಪದಿಂದರುವತ್ತು ಕೋಟಿ ನಿಧನಮದಿರ್ಪ
ಕೊಪ್ಪರಿಗೆಗಳ ತೋರಿ ಮೆಚ್ಚುತ್ತ ಮಂತ್ರಿಯಾ
ಗಿಪ್ಪುದೆಂದೆನುತ [೧][ಚಾಳುಕ್ಯ][೧] ಭೂವರ ನಮಿಸಿ ಮನ್ನಿಸಲು ಸುಖಮಿರ್ದನು ೬೦

ಆತ ಗುರುಲಿಂಗಜಂಗಮ ಭಕ್ತಿಯುತನಾಗಿ
ಪ್ರೀತಿಯಿಂ ತನುಮನಧನಾದಿಗಳನೀವುತ್ತ
ಖ್ಯಾತಿಯಿಂದೇಳ್ನೂರ ಎಪ್ಪತ್ತು ಪ್ರಮಥಗಣಸಹಿತಮಲ ಶಿವಭಕ್ತಿಯಂ
ಭೂತಳದಿ ಮೆರೆಯುತಿರಲಾ ಮಹಿಮನಂ ಬಳಸಿ
ಸಾತಿಶಯದಿಂ ತಮ್ಮ ವಾಂಛಿತ ಪದಾರ್ಥಗಳ
ಜಾತಮಂ ಪಡೆವುತ್ತ ಜಂಗಮಾವಳಿ ಇರ್ಪುದೇನೆಂಬೆನಚ್ಚರಿಯನು ೬೧

ಪನ್ನೆರಡು ಸಾಸಿರಂ ನೊರೆವಾಲ ನೇಮದರ್
ಪನ್ನೆರಡು ಸಾಸಿರಂ ಕೆನೆವಾಲ ನೇಮದರ್
ಪನ್ನೆರಡು ಸಾಸಿರದ ಹೂಬೆಣ್ಣೆ ನೇಮದರ್ಪಂಚಾಮೃತದ ನೇಮದ
ಪನ್ನೆರಡು ಸಾಸಿರಂ ಕಟ್ಟು ಮೊಸರುಂಬುವರ್
ಪನ್ನೆರಡು ಸಾಸಿರಂ ತಿಳಿದುಪ್ಪ ನೇಮದರ್
ಪನ್ನೆರಡು ಸಾಸಿರಂ ಘಟ್ಟಿತುಪ್ಪದ ನೇಮದವರೊಪ್ಪಿ ನೆಲಸಿರ್ದರು ೬೨

೧ ಚೋಳಾಖ್ಯ (ಕ, ಚ.)

ಈರಾರು ಸಾಸಿರಂ ಕೆನೆಮೊಸರ ನೇಮದರ್
ಈರಾರು ಸಾಸಿರಂ ಸಕ್ಕರೆಯ ನೇಮದರ್
ಈರಾರು ಸಾಸಿರಂ ವಡೆ ಗಾರಿಗೆಯ ನೇಮದವರು ಮತ್ತಂ ಬಗೆವೊಡೆ
ಈರಾರು ಸಾಸಿರಂ ಮೋದಕದ ನೇಮದರ್
ಈರಾರು ಸಾಸಿರಂ ಕರಿಗಡಬು ನೇಮದರ್
ಈರಾರು ಸಾಸಿರಂ ಪರಮಾನ್ನ ಪಾಯಸದ ನೇಮದವರೆಸೆದಿರ್ದರು ೬೩

ಜಂಬು ಚೂತ ಕಪಿತ್ಥದ್ರಾಕ್ಷ್ಯಖರ್ಜುರದ ಫಲವ
ಕೊಂಬುವರ್ಪನ್ನೆರಡು ಸಾಸಿರಂ ಪನಸ ದಾ
ಳಿಂಬ ಪನ್ನೀರಲದ ನೇರು ಮೊದಲಾದಸವು ಪರಿಪಕ್ವ ಫಲಜಾಲಮಂ
ಉಂಬುವರ್ಪನ್ನೆರಡು ಸಾಸಿರಂ ಖರ್ಜುರಿಯ
ರಂಭಾದಿ ಪಂಚಭಕ್ಷ್ಯಗಳ ವರ ನೇಮದವ
ರಿಂಬಿನಿಂ ನೆಲೆಸಿರ್ದರಾ ಬಸವನಾಲಯದೊಳೇನೆಂಬೆನಚ್ಚರಿಯನು ೬೪

ಇಕ್ಷುರಸನೇಮದವರೀರಾರು ಸಾವಿರಂ
ಪಕ್ಷದಿಂ ಸದ್ರಸವ ಸೇವಿಪ ಮಹಾಶರಣ
ರೀಕ್ಷಿಪಡೆ ಪನ್ನೆರಡು ಸಾಸಿರಂ ತಂಪಿನಿಂದೆಸೆವ ಚಿಲುಮೆಯ ನೀರಿನ
ಲಕ್ಷಿತ ಸುನೇಮದವರೀರಾರು ಸಾವಿರಂ
ಅಕ್ಷಯ ಮಹಾಮಹಿಮ ಬಸವನಾಲಯದಲ್ಲಿ
ಲಕ್ಷದಿಂ ಮೇಲೆ ತೊಂಬತ್ತಾರು ಸಾವಿರದ ಗಣಿತದಿಂದೆಸೆದಿರ್ದರು ೬೫

ಬಸವೇಶನಮಲ ಸಮಯಾಚಾರ ಮೂರ್ತಿಗಳು
ಮಿಸುಪಾರು ಸಾವಿರಂ ಪ್ರತ್ಯಕ್ಷವಾಗಿಹರು
ಒಸೆದು ಕೇಳಂತಲ್ಲದಲಿ ನಾಲ್ಕುಲಕ್ಷದಿಂ ಮೇಲೆ ಗಣನೆಯ ಮೀರುತ
ಎಸೆದಿರ್ಪುದರುವತ್ತು ಸಾಸಿರಂ ಜಂಗಮಂ
ವಸುಧೆಯೊಳು ಬಣ್ಣಿಸುವರಾರವರ ಗಣನೆಯನು
ಎಸಕದಿಂ ಕೇಳೆಂದು ಸಕರೋಜಿರಾಜನಿಗೆ ಮಹಲಿಂಗಗುರು ಪೇಳ್ದನು ೬೬

ಇಂತೆಸೆವ ಜಂಗಮಕೆ ಬೇಡಿದ ಪದಾರ್ಥಗಳ
ಸಂತತಂ ಪಾಲಿಸುತ ಬಸವದಣ್ಣಾಯಕಂ
ಸಂತಸದಿ ತತ್ಪಾದಜಲಶೇಷಗಳ ಸೇವಿಸುತ್ತಸವು ಶಿವಭಕ್ತಿಯಿಂ
ಮುಂತೆ ಮೆರೆಯುತ್ತಿರ್ದನಾತನ ಸುಲೀಲೆಗಳ
ಸಂತತಿಯ ವರ್ಣಿಪಡೆ ತ್ರೈಜಗದ ಮಧ್ಯದೊಳ್
ಕಂತುಹರಗರಿದೆನಲು ಕಲ್ಯಾಣನಗರದೊಳಗೆಸೆದಿರ್ದನಾ ಮಹಿಮನು ೬೭

ಕಳ್ಳರಂ ಕಪಟಾತ್ಮರಂ ಜೈನರಂ ಬಳಿಕ
ಸುಳ್ಳರಂ ತೃಣಪುರುಷರಂ ಕಾಷ್ಠಪುತ್ರಿಕೆಯ
ಖುಲ್ಲರಂ ಕೂಡ್ಯದೊಳಗಿರ್ಪಸಮ ಪುತ್ರಿಕೆಯ ಹಗರಣದ ಹರವರಿಯೊಳು
ನಿಲ್ಲದಲೆ ಬಂದ ಮೃಗನೇತ್ರಯರ ಮುಂತಾಗಿ
ಎಲ್ಲರಂ ನಿಜಜಂಗಮರ ಮಾಡಿ ಜಗಮರಿಯೆ
ಫುಲ್ಲಶರಹರಭಕ್ತ ಬಸವೇಶ ನೆರೆಮೆರೆದ ಸಕರೋಜಿ ಸದ್ಭಕ್ತನೆ ೬೮

ಇಳೆಯಾಣ್ಮ ಬಿಜ್ಜಳನ ನಿಲಯದ ಮಹಾಧನವ
ಚೆಲುವ ತೇಜಿಗಳ ನಳಿನಾಕ್ಷಿಯರ ಚರಕಿತ್ತು
ಬಳಿಕವರ ತೋರಿ ನೆರೆ ಮೆರೆದನೀ ಜಗದೊಳಗೆ ಗುರುಬಸವದಣ್ಣಾಯಕಂ
ನಳಿನಶರತಾಪದಿಂ ಪಟ್ಟದರಸಿಯ ಕೂಡಿ
ಒಲಿದು ರಮಿಸುತ್ತಿರಲು ನರನಾಥ ಕಂಡವರ
ಕೊಲಲಿರ್ದರಸುವಿತ್ತನಾಮಹಿಮ ಬಸವೇಶನಾಳಿಪುದು ಸಕರೋಜಿಯೆ ೬೯

ಪೊಡವಿಪನ ಕೂಡೆ ಬಸವೇಶ ಬೇಂಟೆಗೆ ಪೋಗೆ
ಮೃಡಜಂಗಮಂ ಬಂದು ಪುಲಿಯ ಪಾಲಂ ಬೇಡೆ
ಬಿಡದೆ ಗವಿಯೊಳಗಿರ್ಪ ವ್ಯಾಘ್ರನಂ ಕರೆದು ತಜ್ಜಂಗಮವ ನೆರೆತಣಿಸಿದಂ
ಮೃಡಜಂಗಮಾಕಾರದಿಂ ಬಂದು ಭರದಿಂದೆ
ಜಡಜಾಕ್ಷಿ ನೀಲಲೋಚನೆಯ ಬೇಡಲ್ಕಿತ್ತ
ದೃಢದಿಂದೆ ಕೇಳೆಂದು ಸಕರೋಜಿರಾಜನಿಗೆ ಮಹಲಿಂಗಗುರು ಪೇಳ್ದನು ೭೦

ನೀಲಲೋಚನೆಯುಟ್ಟ ಪೀತಾಂಬರವ ತನ್ನ
ಸೂಳೆ ಬೇಡಲು ಬಂದು ವಿಟಜಂಗಮೋತ್ತಮಂ
ಭಾಳಾಕ್ಷಪದಭಕ್ತ ಬಸವೇಶನಂ ಕೇಳೆ ನಲವೇರಿ ಮಾನಸದೊಳು
ನೀಲಪಂಕಜನೇತ್ರೆಯನು ಕರೆಸಿ ಶಾಲಿಯಂ
ಒಲಿದೀಯ ಬೇಕೆನಲು ಶರಣೆಂದು ನಮಿಸಲ್ಕೆ
ನೀಳಕರ ಪಲ್ಲವದಿ ತಜ್ಜಂಗಮಂ ಸೆಳೆಯಲೇನೆಂದು ಬಣ್ಣಿಸುವೆನು ೭೧

ಲೆಕ್ಕವಿಲ್ಲದೆ ಪೀತವಸನಗಳು ಬರುತಿರಲು
ಲೆಕ್ಕಿಸುತ ವಿಟಜಂಗಮಂ ಮನದಿ ಹಿಗ್ಗುತ್ತ
ಮುಕ್ಕಣ್ಣಪದಭಕ್ತ ಬಸವೇಶ ಮಝಬಾಪು ಪೊರಲಾರೆನೆಂದೆನುತಿರೆ
ಚಿಕ್ಕದಣ್ಣಾಯಕಂ ಮುಂತಾದ ಪ್ರಮಥಗಣ
ರಕ್ಕಸದಿ ನೋಡುತಿರಲಾ ಮಿಂಡ ಜಂಗಮನ
ಚೆಕ್ಕನೇ ಸಂತೋಷಮಾನಸನ ಮಾಡುತ್ತೆ ನೆರೆಮೆರೆದನಾ ಮಹಿಮನು ೭೨

ಕೊಂಡಿಯರ ಮಾತುಮಂ ಕೇಳೆ ಮುದದಿಂದೆ ಭೂ
ಮಂಡಲಾಧಿಪ ಪರಮ ಶಿವನಾಗಮಯ್ಯಗಳು
ಚಂಡಾಲವಂಶಸಂಭವರೆಂದು ಸಭೆಯಲ್ಲಿ ನಿಂದಿಸುತ್ತಿರಲಾಕ್ಷಣಂ
ದಂಡಪತಿ ಕೇಳ್ದು ಕರ್ಣಂಗಳಂ ತನ್ನ ಕರ
ಪುಂಡರೀಕದಿ ಮುಚ್ಚಿಕೊಂಡು ಬಿಜ್ಜಳ ಕೇಳು
ಪುಂಡರೀಕಭವಾಂಡಮಂಡಲದಿ ಪೂಜ್ಯನಾತನ ಮಹಿಮೆ ನೀನರಿಯದೆ ೭೩

ಮನಬಂದ ತೆರದಿ ನಿಂದಿಪುದು ನೀತಿಯು ಅಲ್ಲ
ಮನಸಿಜಾಂತಕಮೂರ್ತಿ ಮಲನಾಶ ಕಾಲಮದ
ಘನಸಮೀರನು ಜನ್ಮಕಾಂತಾರದಾವಾಗ್ನಿ ಸೂತಕಾಂಬುಧಿಬಾಡಬಂ
ಮಿನುಪ ನಿಗಮಾಗಮಾತೀತ ನಿರ್ಮಲಚರಿತ
ಘನಮಹಿಮ ಶಿವನಾಗಮಯ್ಯಗಳ ಲೀಲೆಯಂ
ಜನಪ ನೀನರಿಯೆಂದು ಬಸವರಸ ನುಡಿಯಲ್ಕೆ ಧರಣೀಶನಿಂತೆಂದನು ೭೪

ಎಲೆ ಬಸವ ಮಂತ್ರಿತನವಿತ್ತುದಕೆ ಫಲವಾಯ್ತು
ಕುಲಹೀನರೆಲ್ಲರುಂ ಕೂಡಿಕೊಂಡೀ ಪುರದಿ
ಮಲಹರಾತ್ಮಕರೆಂದವರ ಪಾದಗಳ ಪೂಜಿಪುದು ನೀತಿಯಲ್ಲೆಂದೆನೆ
ನಳಿನಾಪ್ತನಂ ಕೌಶಿಕಂ ಚೋರ ಚಂದ್ರಮನ
ಬಲಜನರು ಸಾಧುಗಳ ಜರೆಯಲೇಂ ಕೊರತೆಯೇ
ಇಳೆಯಾಣ್ಮ ನೀ ಬರಿದೆ ಶಿವನಾಗಮಯ್ಯಗಳ ನಿಂದಿಸಿದರೇನಾಹುದು ೭೫

ಜಾತಿವರ್ಣಾಶ್ರಮಾತೀತನಮೃತಾಂಗಮಯ
ನಾತನ ಮಹಾಮಹಿಮೆ ನೀನರಿಯದಾಡುವದು
ನೀತಿಯಲ್ಲೆಂದೆನಲು ಬಿಜ್ಜಳಧರಾಧೀಶನಾ ಸಭೆಯೊಳಿಂತೆಂದನು
ಆತನುತ್ತಮ ಸುಧಾಮಲರೂಪನಾದರತಿ
ಪ್ರೀತಿಯಿಂ ಸರ್ವಜನ ತಿಳಿವಂತೆ ಹಸ್ತವನ
ಜಾತದೊಳಗಮೃತಮಂ ತೋರವೇಳ್ಕೆಂದನಲು ಬಸವರಸ ನಸುನಗುತಲಿ ೭೬

ಅಚ್ಚರಿಯದೇನರಸ ಶಿವನಾಗಮಯ್ಯಗಳ
ನಿಶ್ಚಲದ ಮಹಿಮೆಯಂ ನೋಡೆಂದು ಕರೆಸಲತಿ
ಉಚ್ಚವದೊಳಂದಳವನೇರಿ ಬರಲಾ ಸಭೆಗೆ ಬಸವೇಶನಿದಿರೇಳುತ
ಅಚ್ಚ ಮಹಿಮನ ಪದಕೆ ಪೊಡಮಟ್ಟು ಕೈಮುಗಿದು
ಬಚ್ಚಬರಿ ಪರಬೊಮ್ಮವರದ ಜಗದಾರಾಧ್ಯ
ಮಚ್ಚರದಿ ನೋಳ್ಪ ಬಿಜ್ಜಳಮುಖ್ಯ ಮಾನವರ ಸಂದೇಹವಂ ಬಿಡಿಪಡೆ ೭೭

ಪರಮಾಮೃತವ ತೋರಬೇಕೆಂದು ಬಸವರಸ
ಹರುಷದಿಂ ನಾಗಮಯ್ಯಗಳ ಕರತಳವ ನಿಜ
ಕರಕಮಲದಿಂ ಪೊಡೆಯಲೇನೆಂಬೆನಚ್ಚರಿಯನಾ ಸಭೆಯ ಮಧ್ಯದೊಳಗೆ
ಸುರಧೇನು ಕೆಚ್ಚಲದ ಮೊಲೆಗಳುಂ ತೊರೆದಿಳಿಪ
ತೆರದಿಂದೆ ಹಸ್ತಾಂಗುಲಿಗಳಲ್ಲಿ ಪಾಲ್ಸುರಿಯೆ
ಧರಣೀಶ ಬಿಜ್ಜಳಂ ಮೊದಲಾದ ಪರಿಜನಂ ಪೌರಜನ ನೋಡುತ್ತಲಿ ೭೮

ಭೀತಿಯಿಂ ಪೊಡಮಟ್ಟು ಮನ್ನಿಸುತ್ತಾ ಪ್ರಮಥ
ನಾಥಶಿವನಾಗಮಯ್ಯಗಳ ಕೊಂಡಾಡುತಿರ
ಲೀ ತೆರದಿ ಬಸವದಂಡೇಶನಾಥನು ಮಹಿಮೆಯಂ ಮೆರೆದನೀ ಜಗದೊಳು
ಪ್ರೀತಿಯಿಂ ಕೇಳೆಂದು ಸಕರೋಜಿರಾಜನಿಗೆ
ಭೂತಳದ ಮಹಪೂಜ್ಯಮಹಲಿಂಗಮೌನಿಕುಲ
ನಾಥ ಪೇಳುತ್ತಿರ್ದನಗಜಾತೆ ಕೇಳೆಂದು ಶಂಕರನು ಸೂಚಿಸಿದನು ೭೯

ಸಂಗಮೇಶ್ವರಭಕ್ತಬಸವೇಶ ಕೇಳೆನಗೆ
ಲಿಂಗಪೂಜಾಸಮಯದೊಳು ದಿವ್ಯಮೌಕ್ತಿಕದ
ರಂಗವಲ್ಲಿಯ ನೇಮಮುಂಟಾದ ಕಾರಣಂ ಮುತ್ತುಗಳ ಮೂಗಂಡುಗಂ
ಹಿಂಗದಲಿ ಕೊಡು ಎನಲು ಬಿಳಿಜೋಳರಾಶಿಯನು
ತುಂಗಮುತ್ತುಗಳ ಮಾಡಿತ್ತನಾ ಮಹನಾಗ
ಜಂಗಮಗೆ ಕೇಳೆಂದು ಸಕರೋಜಿರಾಜನಿಗೆ ಮಹಲಿಂಗಮುನಿಪೇಳ್ದನು ೮೦

ಬಸವರಸನಿಂತು ಘನಮಹಿಮೆಗಳ ಬೀರುತ್ತ
ಎಸೆವ ಜಂಗಮಪ್ರಾಣಿಯೆಂಬ ನೇಮದೊಳಿರಲು
ಅಸಮಾಕ್ಷ ಬಳಿಕವನ ಭಕ್ತಿಯಂ ಪ್ರಕಟಿಸುವ ಕಾರಣದಿ ಒಂದಿನದೊಳು
ಮಿಸುಪ ಜ್ಯೋತಿರ್ಮೂರ್ತಿ ಕಿನ್ನರಿಯ ಬ್ರಹ್ಮಯ್ಯ
ನಸುವನೊಯ್ಯಲ್ಕಂಡು ಮರುಗುತ್ತ ಮನದೊಳಗೆ
ಬಸವಳಿದು ದಣ್ಣಾಯಕರು ರೋದನಂಗೈಯುತಿರೆ ಪ್ರಮಥಗಣಮಧ್ಯದಿ ೮೧

ತದ್ವಾರ್ತೆಯನು ಕೇಳಿ ಕೋಪದಿಂ ಮಾಚಿವಿಭು
ವಿದ್ವಜ್ಜನಾಭಿಮತ ಬಸವರಸ ತಾ ನುಡಿದ
ಸದ್ವಚನಮಂ ಮರೆದು ಲೋಕರಂದದಿ ಬರಿದೆ ದುಃಖಿಸುವನೇ ಜಗದೊಳು
ಸದ್ವಿವೇಕಮದಲ್ಲವೆಂದೆನಲು ತವಕದಿಂ
ಸದ್ವರದ ಕಿನ್ನರಿಯ ಬೊಮ್ಮಿತಂದೆಗಳ ಪಾ
ದದ್ವಯದಿ ತನ್ನಸುವ ಪೊರ್ದಿಸಿದ ಉರಿಗಪ್ಪುರದ ತೆರದಿ ದಣ್ಣಾಯಕಂ ೮೨

ಆ ಕ್ಷಣದಿ ಮಡಿವಳಯ್ಯನು ಕೇಳ್ದು ಮನವೊಲ್ದು
ಈ ಕ್ಷಣದಿ ಬಸವ ತಾ ನುಡಿದ ನುಡಿ ನಿಜವಾಯ್ತು
ಈಕ್ಷಿಸುವೆನೆಂದೆನುತ ಬಂದವರ ಪ್ರಾಣಮಂ ಪಾಲಿಸಲು ಸತ್ಪ್ರಮಥರು
ಮೋಕ್ಷದಾಯಕ ಮಹಾಮಹಿಮ ಜಯಜಯತು ಖಲ
ಶಿಕ್ಷ ಸಜ್ಜನರಕ್ಷಶೀಲ ಜಯುಜಯತು ಫಾ
ಲಾಕ್ಷನವತಾರ ಜಯಜಯತೆಂದು ಕೀರ್ತಿಸಿದರೇನೆಂಬೆನಚ್ಚರಿಯನು ೮೩

ಮತ್ತೊರ್ವ ಶರಣಕುಲಪುಂಗವಂ ಮಾರಮದ
ಮತ್ತಗಜಮೃಗನಾಥ ಮಲನಾಶ ಜನ್ಮಗಿರಿ
ವೃತ್ರಹರ ವ್ರಜಿನೌಘಜಲದಝಂಝಾಮರುತ ಮದಕುಲಾಂಬುಧಿಬಾಡಬಂ
ಉತ್ತಮೋತ್ತಮಶೀಲ ವಿನುತಸದ್ಗುಣಮಾಲ
ಚಿತ್ತಜಾಂತಕಭಕ್ತಸನ್ನಿಹಿತಸನ್ಮಾರ್ಗ
ವೃತ್ತಿರಂಜಿತನಾಗಿ ಮೇದಾರಕೇತಯ್ಯ ಬಸವನಸುವಾಗಿರ್ದನು ೮೪

ಇರಲೊಂದು ದಿನದಲ್ಲಿ ಶ್ರೀಗಿರಿಸುತಾಕಾಂತ
ವರಬಸವಮೇದಾರಕೇತಯ್ಯಗಳ ಸ್ನೇಹ
ದಿರವ ಪರಕಿಸುವ ಕಾರಣದಿಂದಲಾ ಪರಮಕೇತಯ್ಯಗಳ ಪ್ರಾಣಮಂ
ತ್ವರಿತದಿಂದೊಯ್ಯಲಾಕ್ಷಣದಲ್ಲಿ ಪ್ರಮಥಗಣ
ನೆರಪಿ ದಣ್ಣಾಯಕಂ ರೋದನಂಗೈಯುತಿರೆ
ಕರುಣಿ ಶ್ರೀಚೆನ್ನಬಸವೇಶ್ವರಂ ನೋಡುತ್ತ ಮಡಿವಳಯ್ಯನ ಕರೆಯಲು ೮೫

ಹಡಪದಪ್ಪಣ್ಣಗಳ ಕಳುಹಲ್ಕೆ ಬಂದವರು
ಪೊಡಮಟ್ಟು ಕರಕಂಜಗಳ ಮುಗಿವುತಲೆ ದೇವ
ದೃಢಶರಣ ಮೇದಾರಕೇತಯ್ಯಗಳು ಶಿವನೊಳೇಕಾರ್ಥವಂ ಹೊಂದಲು
ಬಿಡದೆ ಬಸವಾದಿ ಪ್ರಮಥರು ಮರುಗಿ ಮನದೊಳಗೆ
ಕಡುದುಃಖದೊಳಗಿರುವ ಹದನವನು ನಾ ನಿಮ್ಮ
ಅಡಿಗೆ ದೂರಲು ಚಿಕ್ಕದಣ್ಣಾಯಕರು ಕಳುಹೆ ಬಂದೆನೆಂದೆನಲಾಕ್ಷಣಂ ೮೬

ವರ ಜಂಗಮಪ್ರಾಣಿ ಬಸವರಸ ತನ್ನನುಡಿ
ಮರೆದು ಮನದೊಳು ಮರುಗಿ ರೋದಿಪನೆ ಶಿವಶಿವಾ
ಕರುಣಿ ಗಡ ತಾಮಸದ ಪರಜೆಯಂ ಪರೆದ ಗಡ ಭಾವಿಪಡೆ ಭೂತಳದೊಳು
ಹರಶರಣ ಮೇದಾರಕೇತಯ್ಯಗಳು ಶಿವನ
ಬೆರೆದ ಬಳಿಕಿನ್ನಳುವ ಉಪಕಾರಣವೆ ಸಾಕು
ಬರಿದೆ ಕೋಪಿಸಲೇಕೆ ಭಕ್ತಿಭಂಡಾರಿಯಂ ಪೋಗೆಂದನಾ ಮಹಿಮನು ೮೭

ಚೆನ್ನಬಸವೇಶಾದಿ ಸತ್ಪ್ರಮಥನಾಯಕರು
ಬಿನ್ನಣದ ಭಾಷ್ಯಹೀನನ ಬಳಿಯೊಳಿರ್ದಪರೆ
ತನ್ನನೇತಕೆ ಕರೆಯಕಳುಹಿದರು ಹರಹರಾ ಸತ್ಯಶೀಲನ ಮಾತಿಗೆ
ಚೆನ್ನೆಯರ ತೆರದಿಂದೆ ಕಣ್ಣೀರಗರೆಸಿದರೆ
ಮನ್ನಿಸುವರಾರಕಟ ತತ್ಸಭಾಮಧ್ಯದಲಿ
ಗನ್ನಘಾತಕನಿರ್ಪನದು ಕಾರಣಂ ಬರ್ಪುದನುಚಿತವು ಪೋಗೆಂದೆನೆ ೮೮

ಹಿಂದಿರುಗಿ ಹಡಪದಪ್ಪಣ್ಣಗಳು ಭೀತಿಯಿಂ
ಬಂದು ಶ್ರೀಚೆನ್ನಬಸವಾದಿ ಪ್ರಮಥರ ಮುಂದೆ
ನಿಂದು ಕೈಗಳ ಮುಗಿದು ಮಾಚಿದೇವನ ಕೋಪದುದ್ರೇಕದುತ್ತರಗಳ
ವೃಂದಮಂ ಸೂಚಿಸುತ್ತಿರೆ ಕೇಳ್ದು ಬಸವ ತಾ
ನಂದು ಜಲಧಿಯೊಳಾಳ್ದ ವಾರಶಿಲೆಯಂತಸುವ
ಹೊಂದಿಸಿದ ಮೇದಾರಕೇತತಂದೆಗಳೊಡನೆ ಶರಣಾಳಿ ನೋಳ್ಪಂದದಿ ೮೯

ಕಲ್ಪಿತಪದಾರ್ಥಗಳ ಪ್ರಮಥರಿಗೆ ಪಾಲಿಸುವ
ಕಲ್ಪವೃಕ್ಷಂ ಕಾಮಧೇನು ಸುರಮಣಿಯೆನಿಪ
ಬಲ್ಪಿನ ಪವಾಡಗಳ ಮೆರೆವ ದಣ್ಣಾಯಕಂ ಕೇತಯ್ಯನೊಳಗೈಕ್ಯಮಂ
ಓಲ್ಪಡಿಸಿಬಿಟ್ಟಮೇಲಿನ್ನಾರು ಗತಿ ನಾವು
ಮಾಳ್ಪುದೇನೆಂದೆನುತ ಶರಣಾಳಿ ಮನದ ಸಂ
ಕಲ್ಪದಿಂದಳಲುತಿರೆ ಚಿಕ್ಕದಣ್ಣಾಯಕರ್ ಮರಳಿ ಮಡಿವಳದೇವನಾ ೯೦

ಬಳಿಗೆ ಶ್ರೀ ಹಡಪದಪ್ಪಣ್ಣಗಳ ಕಳುಹಿದರೆ
ಗಳಗಳನೆ ಬಂದೆರಗುತೆಲೆದೇವ ಮಾಚಿವಿಭು
ಮಲಹರಾತ್ಮಕಬಸವ ಕೇತಯ್ಯನೋಳ್ಪೆರೆದನೆಂದರುಹಲಾಕ್ಷಣದೊಳು
ಭಲರೆ ಭಾಪುರೆ ಭಕ್ತಿಭಂಡಾರಿಬಸವೇಶ
ಚೆಲುವಾಯ್ತು ನುಡಿದನುಡಿ ಕಲ್ಪಕುಜ ಭೂತಳದಿ
ಫಲವಾಯ್ತು ಎಂದೆನುತ ನಲವೇರಿ ಕೂಗುತ್ತ ವೀರಘಂಟೆಯ ಪೊಡೆಯುತ ೯೧

ಕಲಿಯುಗದ ಲೀಲೆ ಮುಗಿಯದ ಮುನ್ನ ಗಿರಿಜೇಶ
ನೊಲಿದವರನೊಯ್ವನೆಂತೆನೆ ಕಲ್ಲಿನಾಥೇಶ
ಬಳಿಕ ಬಸವನಕಿಂತ ಭಾಷೆಗಳ್ಳನು ಭಾವಜಾಂತಕನು ಎಂದೆನುತಲಿ
ಮುಳಿಯುತ್ತ ತನ್ನೊಳಗೆ ತಾನರಿದು ಮಾಚಿವಿಭು
ಪಳಿವುತ್ತ ಬಂದೊಡನೆ ತ್ರಿಪುರಾಂತಕಾಲಯದ
ಥಳಥಳಿಪ ಗೋಪುರಾಗ್ರದಿ ನಿಂದು ಘಂಟೆಯಂ ಧ್ವನಿಗೈದನೇನೆಂಬೆನು ೯೨

ನೆಟ್ಟನಾಡಿದ ನುಡಿಗೆ ಬಸವದಂಡೇಶ್ವರಂ
ಮುಟ್ಟಿದ ಗಡಾ ಬಳಿಕ ಮುದವಾಯ್ತು ಕಾಮನಂ
ಸುಟ್ಟ ಹರ ಬಸವಂಗೆ ಕೊಟ್ಟ ಭಾಷೆಗೆ ಮುಟ್ಟಲಿಲ್ಲೆಂದು ಕೂಗುತ್ತಲಿ
ನಿಟ್ಟಿಸಡೆ ಮೃತ್ಯು ಪಾತಾಳ ಸುರನಿಲಯದೊ
ಳ್ಕಿಟ್ಟನಗಜಾಧವಂ ಭಕ್ತಮಾಹೇಶ್ವರರ
ಕಟ್ಟಿಗತಿ ಪೊರತಾದ ಭ್ರಷ್ಟನವನೆಂದೆನುತ ನಾದಮಂ ಏರಿಸಿದನು ೯೩

ಆ ನಾದ ಬ್ರಹ್ಮಾಂಡಭಾಂಡಮಂ ಪೂರೈಸಿ
ಭೂನಾಥನಂ ತಳೆದ ಭರ್ಮಗಿರಿಯೊಳಗಿರ್ಪ
ಮಾನಾಥನಾಸ್ಥಾನಮಂಡಲದಿ ವ್ಯಾಪಿಸಲು ಕೇಳ್ದು ಭಯದಿಂ ನಡುಗುತ
ಏನಾಯ್ತು ನಗೆಹೋಗಿ ಹೊಗೆಯಾಯ್ತು ತ್ರಿಭುವನದಿ
ತಾನೆಂತು ಗೈವೆನೆಂದೆನುತ ಚಿಂತಿಸಿ ಮನದಿ
ದೈನ್ಯೋಕ್ತಿಯಿಂ ಬಿಡದೆ ನಂದಿ ರೇಣುಕ ಮುಖ್ಯ ಪ್ರಮಥರಿಗೆ ಸೂಚಿಸುತಲಿ ೯೪

ತಪ್ಪಾಯಿತೆಂದವರ ಪ್ರಾಣಮುಮನಾಕ್ಷಣದಿ
ಕಪ್ಪುಗೊರಳನು ಕಳುಹೆ ಮೇದಾರಕೇತಯ್ಯ
ನರ್ಪಿರ್ದ ಜೀವನಂ ಬರಲಾಗ ಬಸವನಸುವುಂ ಬಂದುದೇನೆಂಬೆನು
ಒಪ್ಪುಳ್ಳ ಚೆನ್ನಬಸವಾದಿ ಗಣಕುಲ ನೋಡಿ
ಕಪ್ಪುವೋಡಿನ ಒರವ ಕಂಡ ಸೋಗೆಗಳಂತೆ
ಕಪ್ಪಡಿಯ ಸಂಗಮೇಶ್ವರಭಕ್ತನುತ್ತರಕೆ ಮೆಚ್ಚುತ್ತ ಕೀರ್ತಿಸುತಿರೆ ೯೫

ಬಸವಮೇದರಕೇತತಂದೆಗಳು ಪ್ರಮಥಗಣ
ವಿಸರಕ್ಕೆ ನೆರೆನಮಿಸಿ ಕರಕಂಜಗಳ ಮುಗಿದು
ಮಿಸುಪ ತ್ರಿಪುರಾಂತಕಾಲಯದಗ್ರದಲಿ ಬಿಡದೆ ಚಿನ್ನಾದಮನ್ನೇರಿಸಿ
ಎಸೆವ ಮಡಿವಳಮಾಚಿತಂದೆಗಳ್ಗಭಿನಮಿಸಿ
ಅಸಮಾಕ್ಷನವತಾರ ನಾದಮಂ ಇಳಿಸೆನಲು
ಅಸವಸದಿ ಇಳುಹುತ್ತ ಮಝುಭಾಪು ಬಸವೇಶ ಎಂದೆನುತ ಕೊಂಡಾಡುತ ೯೬

ಭಕ್ತಿಭಂಡಾರಿಬಸವಾದಿ ಗಣಸಂಕುಲಕೆ
ರಕ್ತಿಯಿಂ ನಮಿಸಿ ತತ್ಕೃಪೆಯಾಂತ ಮಾಚಿವಿಭು
ಮುಕ್ತಿದಾಯಕ ದಂಡಪತಿಯಿಂತು ಜಂಗಮಪ್ರಾಣಿಯೆಂಬುತ್ತರವನು
ಯುಕ್ತಿಯಿಂ ತೋರಿ ಕಲ್ಯಾಣಪಟ್ಟಣದಿ ಸ
ದ್ಭಕ್ತಿಸನ್ನುತನಾತ ನೆರೆ ಮೆರೆದನೆಂದು ದಿ
ವ್ಯೋಕ್ತಿಯಿಂ ಸೂಚಿಸಿದ ಮಹಲಿಂಗ ಗುರುವರಂ ಸಕರೋಜಿಸದ್ಭಕ್ತಗೆ ೯೭

ಈ ಪರಿಯೊಳಂ ಲಿಂಗಜಂಗಮದ ಮಹಿಮೆಗಳ
ಮಾಪಸುತಭಂಗಮಹಲಿಂಗ ಸೂಚಿಸಲಾಗ
ಭೂಪತಿಯ ಸಹಜಾತಸಕರೋಜಿಮಹರಾಜ ಕೇಳ್ದು ಸಂತಸದಿಂದಲಿ
ತಾಪಸೋತ್ತಮನಂಘ್ರಿಗೆರಗುತ್ತ ಎಲೆ ದೇವ
ತಾಪತ್ರಯಾರಣ್ಯದಾವಾಗ್ನಿ ತವ ಕೃಪಾ
ಲಾಪಗಳ ಕೇಳ್ದು ಕೃತಕೃತ್ಯನಾದೆನು ಬಳಿಕ ಘೋರ್ಪಡೆಯ ಮಹರಾಜರಾ ೯೮

ವಂಶಕ್ಕೆ ಲಿಂಗಜಂಗಮಮೂರ್ತಿ ನೀ ದೈವ
ಕಂಸಾರಿ ದೈವಮೆಂಬುದ ಮರೆದೆನೆಲೆ ದೇವ
ಸಂಶಯವದಿಲ್ಲಿದಕೆ ಸರ್ವಜಗದಾರಾಧ್ಯನೆಂದೆನುತ ಕೀರ್ತಿಸುತಲಿ
ಹಂಸವಲ್ಲಭನಿಂದೆ ಬೀಳ್ಕೊಂಡು ರಾಜಕುಲ
ಹಂಸ ತನ್ನರಮನೆಗೆ ಬಂದು ಸುಖದಿಂದಿರ್ದ
ಹಂಸಮುಖಿ ಕೇಳೆಂದು ಮಹಲಿಂಗಲೀಲೆಯಂ ಶಂಕರಂ ಸೂಚಿಸಿದನು ೯೯

ಇದು ಬಸವ ಸುಕುಮಾರವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೧೦೦

ಅಂತು ಸಂಧಿ ೧೬ ಕ್ಕಂ ಪದ ೭೬೫ ಕ್ಕಂ
ಮಂಗಳಂ
ಶ್ರೀ

ಶ್ರೀ

# ಹದಿನೇಳನೆಯ ಸಂಧಿ

**ಸೂಚನೆ :** ಗೋವಿಂದರಾಜನಂಗಡ ರೋಗವುಂ ಕಳೆದು
ಪಾವನ ಶಿವಾಕ್ಷಿಮಣಿ ಗುರುಮಹಿಮೆಗಳ ಪೇಳ್ದ
ಭಾವಜಾಂತಕಮೂರ್ತಿಮಹಲಿಂಗಗುರುವರ್ಯ ಮೆರೆದನೆಲೆ ಗಿರಿಜಾತೆಯೇ

ಭರ್ಮಗಿರಿಧರ್ಮ ಭಕ್ತಾಳಿಸನ್ನುತ ಕಾಲ
ಕರ್ಮಕಾಂತಾರದಾವಾಗ್ನಿ ಕರಿದೈತ್ಯವರ
ಚರ್ಮಧರ ಚಂದ್ರಶಕಲಾಶ್ರಿತಜಟಾಮುಕುಟ ಜಲಜಾಕ್ಷಸಂಪೂಜಿತ
ಶರ್ಮದಂ ವರ ಸಕಲಗೀರ್ವಾಣಸಂಪೂಜ್ಯ
ಧರ್ಮಾನುಜಾತರಣಸಂಪ್ರೀತ ಸರ್ವೇಶ
ನಿರ್ಮದ ಮಹಾಮಹಿಮ ಶ್ರೀಚೆನ್ನವೀರೇಶ ಪಾಲಿಪುದು ತ್ರೈಜಗವನು ೧

ಗಿರಿಜಾತೆ ಲಾಲಿಪುದು ಮಹಲಿಂಗಜಂಗಮದ
ವರಲೀಲೆಯಂ ಬಳಿಕ ಮೋದಪುರಭೂವರರ
ಪರಮಭಕ್ತಿಯನು ಕೈಕೊಂಡವರ ಪಾಲಿಸುತ ಕರುಣಾವಲೋಕನದೊಳು
ಪರಮಾನುಭವಗೋಷ್ಠಿಯಿಂದ ತಚ್ಛಾತ್ರದೊಳ್
ಶರಣಾಳಿ ಸಹಿತ ಸುಖಿಯಿರುತಿರಲು ಮತ್ತಮಾ
ಧರಣೀಶಮಾಲೋಜಿಗರ್ಭಸಂಭವನೆನಿಪ ಗೋವಿಂದಮಹರಾಜನು ೨

ಶೌರ್ಯಗುಣಮಣಿಸಾಂದ್ರ ಸಾವಂತಕುಲಚಂದ್ರ
ಧೈರ್ಯಜಿತಕುಧರೇಂದ್ರ ವರ ದಯಾಂಬುಧಿಚಂದ್ರ
ಸ್ಥೈರ್ಯಮಾನಸರುಂದ್ರ ವೈರಿಭೂಪರುಪೇಂದ್ರ ರಾಜವೈಭವಸನ್ನುತ
ಆರ್ಯಜನಪದಪತ್ರಷಟ್ಚರಣಚಿತ್ತಮಾ
ಧುರ್ಯ ಭಕ್ತಿವಿಹಾರ ಮದನಸಮರೂಪ ಗಾಂ
ಭೀರ್ಯಯುತನಾಗಿ ಗೋವಿಂದರಾಜಾಖ್ಯದಿಂ ಮೆರೆದಿರ್ದನೇನೆಂಬೆನು ೩

ಇರಲವನ ಕಾಯದೊಳ್ ಘನತರದ ಮಲರೋಗ
ಪರಿಪರಿಯ ಬಾಧೆಯಿಂ ನೋಯಿಸುತ್ತಿರಲಾಗ
ಪರಮವೈದ್ಯರ ಕರೆಸಿ ಪರಕಿಸುತ ಭೇಷಜಗಳಂ ಮಾಡೆ ತದ್ರೋಗವು
ಪೊರೆಯೇರಿ ದಿನಕೊಂದು ಚಂದದಿಂ ನೆರೆಕಾಡು
ತಿರೆ ಮನದಿ ಮರುಗುತ್ತ ಪೂರ್ವಸಂಚಿತಕರ್ಮ
ದುರುವಣೆಯ ತಗ್ಗಿಸುವರಾರೆನುತ ಗೋವಿಂದರಾಜನುಮ್ಮಳಿಸುತ್ತಿರೆ ೪

ಇಳೆಯೊಳುಂಟಾದಖಿಳ ವೈದ್ಯರುಗಳಂ ಕರೆಸಿ
ಬಲು ಪೊನ್ನುಗಳನಿತ್ತು ಮಾಡಿಸಿದಡೌಷಧಿಗೆ
ಮಲರೋಗಮದು ಬಿಡದೆ ಕಾಡುತಿರೆ ಸಂತತಂ ಮಾಲೋಚಿಸಂಜಾತನು
ತಿಳಿದು ತನ್ನಯ ಮನದಿ ನೆನೆದನೊಂದೆಣಿಕೆಯಂ
ಮಲಹರಾತ್ಮಕಮೂರ್ತಿಮಹಲಿಂಗನಂಘ್ರಿಗಳಿ
ಗೊಲವಿನಿಂ ಬಿನ್ನೈಪೆನೆಂದೆನುತ ರಾಜಮಂದಿರದಿಂದೆ ಪೊರಮಟ್ಟನು ೫

ಪೊನ್ನಂದಳವನೇರಿ ಪರಿಚಾರಕರು ಸಹಿತ
ಮಾನ್ಯೆಯರನೊಡಗೊಂಡು ಮಹಪುರುಷನಾಶ್ರಮದ
ರನ್ನವಾಗಿಲ್ಗಳಂ ಕಂಡಿಳಿದು ಭಕ್ತಿಯಿಂದೊಳಪೊಕ್ಕು ಕಂಗೊಳಿಸುವ
ಉನ್ನತದ ಪೀಠದೊಳ್ದ್ವಿತಿಯಶಂಕರನಂತೆ
ಚೆನ್ನಗಿರಿನಾಥ ಶರಣಾಳಿಮಧ್ಯದೊಳೆಸೆಯೆ
ಮುನ್ನ ಸಾಷ್ಟಾಂಗಪ್ರಣಮಿತನಾಗಿ ಕೀರ್ತಿಸಿದ ಗೋವಿಂದಮಹರಾಜನು ೬

ಎಲೆ ದೇವ ಘೋರ್ಪಡೆಯ ಮಹಿಪಾಲರನ್ವಯಕೆ
ಕುಲದೈವ ನೀವಲ್ಲದಾರಿಲ್ಲ ಜಗದೊಳಗೆ
ಕಲಿಮಲಾಪಹಮೂರ್ತಿ ಕರ್ಮವನದಾವಾಗ್ನಿ ಕಾರುಣ್ಯರತ್ನಾಕರ
ಜಲಜಾಕ್ಷಜಡಜಭವಜಂಭಾರಿಮುಖ್ಯ ಸುರ
ಕುಲನಮಿತ ಭಕ್ತರಾಪತ್ಕುಶಧಿವಡಬಾಗ್ನಿ
ಜಲಜಶರನಾಶ ಪಾಲಿಪುದೆನ್ನ ಮಲರೋಗಮಂ ಕಳೆದು ಸಂತಸದೊಳು ೭

ನೀರಳ್ಕೆಯಾಂತ ಮಾನವನಿರದೆ ಜಾಹ್ನವಿಯ
ತೀರದೊಳ್ ಕೂಪಮಂ ಖನನಿಸುವ ತೆರದಂತೆ
ಘೋರಭವರೋಗಭೇಷಜ ನಿಮ್ಮ ಮಹಿಮೆಗಳನರಿಯದಜ್ಞಾನದಿಂದ
ಆರಯ್ಯದಖಿಳ ವೈದ್ಯರಿಗಿತ್ತೆ ಪೊನ್ನುಗಳ
ಧಾರುಣಿಯೊಳುಂ ಐದೆ ಮಾತ್ರೆ ಮೂಲಿಕೆಗಳಿಂ
ದಾರೋಗ ಪೋಗದಲೆ ಕಾಡುತ್ತಲಿಹುದೆನ್ನ ಪಾಲಿಸುವುದೆಲೆ ದೇವನೆ ೮

ಪೂರ್ವಸಂಚಿತಕರ್ಮವೆಡೆಗೊಂಡು ದೇಹದೊಳ್
ಬೇರ್ವರಿದು ಬಾಧಿಸುತ್ತಿಹುದಿನ್ನು ವೈದ್ಯರಿಂ
ಸಾವುದೇನೆಲೆ ದೇವಕುಲಸಾರ್ವಭೌಮ ಮಹಲಿಂಗೇಶ ಮುನಿಚಂದ್ರಮ
ನಿರ್ವಹಿಸಿ ನೀವಿಂದು ಪಾಲಿಸುವುದೆಂದೆನುತ
ಉರ್ವೀಶತನುಜಾತ ಬಿನ್ನೈಸುತಿರೆ ಬಳಿಕ
ಸರ್ವೇಶನವತಾರ ಮಹಲಿಂಗ ಕರುಣಾವಲೋಕನದಿ ನೋಡುತ್ತಲಿ ೯

ಮುಂದೆಸೆಗೆ ಕರೆದು ವೈದಡವುತ್ತ ಮುದದಿ ಗೋ
ವಿಂದರಾಜಕುಮಾರ ಚಿಂತಿಸದಿರಾ ಮನದಿ
ಸಂದೇಹಮೇನಿದಕೆ ಪ್ರಾರಬ್ಧಕರ್ಮಗಳು ಬಂದು ಬಹುತರ ರೂಪದಿಂ
ಸಂದು ಸಂಕಟ ಮಾಡುತಿಹವಿದುವೆ ಸಿದ್ಧಾಂತ
ಸಿಂಧುಮಧ್ಯದೊಳಿರ್ಪ ಕೊರಡಿಂಗೆ ನೊರೆತೆರೆಯು
ಹೊಂದಲಿಪ ತೆರದಿಂದೆ ನರಕಾಯವಿನ್ನಿದಕೆ ವೈದ್ಯರಿಂದೇನಾಹುದು ೧೦

ಎನುತ ಮಹಲಿಂಗ ಮುನಿಪೋತ್ತಮಂ ಪೇಳುತಿರ
ಲನಿತರೊಳಗಾರೋಗ ಪಸರಿಸುತ ಭರದಿಂದ
ಜನಪಸುಕುಮಾರನಂಗದಿ ಬಿಡದೆ ಪೂರ್ಕೈಸಿ ಬಾಧಿಸುತ್ತಿರೆ ಸರ್ವರು
ಮನದೊಳಗೆ ನೋಡುತ್ತ ಮರುಗುತಿರೆ ಬಳಿಕ ಮೇ
ದಿನಿಯ ಮೇಲೊರಗಸುವುಗಳಿವುತಿರೆ ತದ್ವಾರ್ತೆ
ಯನು ಕೇಳುತಾ ರಾಜನರ್ಧಾಂಗಿ ಬಂದು ಮುನಿಪದಕೆರಗುತಿಂತೆಂದಳು ೧೧

ಕಂಜಾಪ್ತಸೂರ್ಯನಿಗೆತಿಮಿರಭಯಮೆಲ್ಲಿಹುದು
ಸಂಜೀವನಾಶ್ರಿತಗೆ ಮರಣಭೀತಿಯದುಂಟೆ
ಮಂಜುಲಸುವರ್ಣಮಂತ್ರಾಶ್ರಮದಿ ಬಾಳುವಗೆ ವಿಷಬಾಧೆಯೇಗೆಯ್ವುದು
ಮಂಜಿನಮುನೀಶ ಮನ್ನಾಥ ಭವದೀಯಪದ
ಕಂಜಿ ಸೇವಕನಾದಮೇಲೆ ಮಲರೋಗಮದು
ಭಂಜಿಪುದು ಕೌತುಕವದೆಂದೆನುತ ಬಿನ್ನೈಪ ಮಾನಿನಿಯ ನುಡಿಗೇಳುತ. ೧೨

ತಾಯೆ ನೀನಂಜದಿರುಯೆಂದಭಯಮುಮನಿತ್ತು
ಗಾಯತ್ರಿಮಂತ್ರ ಶತರುದ್ರೀಯಗಳ ಜಪಿಸಿ
ಮಾಯಾಖ್ಯ ಪಂಚಾಕ್ಷರಿಯ ಜಪದಿ ಮನವೊಲಿದು ಶಿವನಕ್ಷಿಮಾಲೆಗಳನು
ಆಯುಸದಿ ಮರುಗಿ ಹರಣಂಗಳೆವುತಿರ್ಪಸಮ
ರಾಯಕುವರನ ಗ್ರೀವದಲಿ ತಳೆಯಲಾಕ್ಷಣದಿ
ಮಾಯವಾದಿತು ರೋಗ ಮಹಪುರುಷನಾಜ್ಞೆಯಿಂದೇನೆಂದು ಬಣ್ಣಿಸುವೆನು ೧೩

ಪರವಶಂ ತಿಳಿದೆದ್ದ ವಟುವಿನಂತರಸನೈ
ಸರದಿಂದ ಕಣ್ದೆರೆದು ಎದ್ದು ನಮಿಸುತ್ತ ಕರ
ಸರಸಿಜಂಗಳ ಮುಗಿದು ಸತಿಸಹಿತ ಕೀರ್ತಿಸುತ್ತಿಲೆ ದೇವ ಮಹಲಿಂಗನೇ
ಪರಮಮಂತ್ರೋಚ್ಚರಣದಿಂದಕ್ಷಿಮಾಲೆಯನು
ಕೊರಳಿಂಗೆ ತಳೆಯಲ್ಕೆ ತದ್ರೋಗಮದು ಬಿಟ್ಟು
ಸರಿದಿತ್ತು ತರಣಿಮಂಡಲಕಂಡ ತಮದಂತೆ ಸರ್ವಜನ ತಿಳಿವಂದದಿ ೧೪

ಧನ್ಯನಾದೆನು ದೇವ ನಿಮ್ಮ ಕಾರುಣ್ಯದಿಂ
ಮುನ್ನಾವ ಜನ್ಮಾಂತರದ ಪುಣ್ಯ ಫಲದಿಂದೆ
ಎನ್ನ ಕರ್ಣಗ್ರೀವಗಳಿಗಸಮ ಮಂತ್ರರುದ್ರಾಕ್ಷಿಗಳು ಸಿದ್ಧಿಸಿದವು
ಇನ್ನಿದರ ಮಹಿಮೆಯನು ಪೇಳ್ದು ಪಾಲಿಪುದೆಂದು
ಬಿನ್ನೈಪ ಗೋವಿಂದರಾಜನುನ್ನತವರಿದು
ಚೆನ್ನಗಿರಿವಾಸ ಕಾರುಣ್ಯದಿಂ ಪೇಳಲುಜ್ಜುಗಿಸಿದನು ಗಿರಿಜಾತೆಯೇ ೧೫

ಆ ದಿವ್ಯರುದ್ರಾಕ್ಷಿಶಿವಮಂತ್ರಮಹಿಮೆಗಳ
ನಾದಿಯೊಳು ಸಕಲಶ್ರುತ್ಯಾಗಮ ಪುರಾಣಗಳು
ಭೇದವಿಲ್ಲದೆ ಪೇಳುತಿರ್ದಪವು ಬಾಲಕನೆ ಲಾಲಿಪುದು ಘನಭಕ್ತಿಯಿಂ
ಮೇದಿನಿಯೊಳಿನ್ನು ದ್ವಿಜನಾದೊಡಂ ಶಾಸ್ತ್ರವಿದ
ನಾದೊಡಂ ಚಂಡಾಲಪುಲ್ಕ ಸಂಪಾಪಿತಾ
ನಾದೊಡಂಮರಿದೊಮ್ಮೆ ಮಂತ್ರಮಣಿಯಾಂತವಂ ಭೂರುದ್ರನಹನಿಳೆಯೊಳು ೧೬

ಸತ್ಯವಿದು ಜಗದೊಳಗೆ ಸಕಲಸಿದ್ಧಿಗಳೀವ
ಮೃತ್ಯುಹರನಂ ತೋರ್ಪ ನಿಗಮಾಗಮಾಳಿ ಸಂ
ಸ್ತುತ್ಯ ಶಿವಮಂತ್ರ ರುದ್ರಾಕ್ಷಿಗಳ ನೆರೆ ನಂಬಿ ಹರಿಬ್ರಹ್ಮಸುರರೆಲ್ಲರು
ನಿತ್ಯನಿರ್ಮಲಪದವಿಯನು ಪಡೆದರೆಲೆ ಕುವರ
ಭೃತ್ಯಭಾವದಿ ಕೇಳು ಮುನ್ನ ಮಂತ್ರವ ಜಪಿಸಿ
ಕೃತ್ಯದಿಂ ಮೋಕ್ಷಪದವನು ಪಡೆದ ಸದ್ಭಕ್ತರಿತಿಹಾಸಗಳ ಪಾಳಿಯಿಂ ೧೭

ಹಿಂದೊಂದು ಕಾಲದಲಿ ದಾಶಾರ್ಹನೆಂಬರಸ
ನಿಂದುಕುಲಸಂಜಾತನೆಂದೆನಿಸಿ ಭೂತಳದಿ
ಸಂದ ವೈಭವದಿಂದ ಬಾಳುತಿರಲೊಂದುದಿನ ನಿಜಸುಂದರಾಂಗನೆಯನು
ಕಂದರ್ಪನಾಹವಕೆ ಕರೆಯಲ್ಕೆ ಬಾರದಿರೆ
ಮುಂದುವರಿವುತ್ತವಳ ಹೊಂದಿ ಮೋಹಿಪೆನೆಂದು
ಚೆಂದದಿಂ ಪಿಡಿದೆಳೆಯಲೊಡನೆ ಭೂಪಾಲ ಬಿಡುಬಿಡು ನಿನಗೆ ನಾ ಪೇಳ್ವೆನು ೧೮

ಮಮತೆಯಿಲ್ಲದ ಮಾನಿನಿಯರ ಗರ್ಭಿಣಿಯರಂ
ವಿಮಲ ವ್ರತಮಾಚರಿಪ ವನಿತೆಯಂ ರೋಗದಿಂ
ಶ್ರಮಗೊಂಬ ಕಾಂತೆಯಂ ಪುಷ್ಪವತಿಯಂ ಬರಿದೆ ನಿಷ್ಕಾಮಿಯಂ [೧]ಪ್ರೌಢರು[೧]
ರಮಿಸಲಾಗದು ಭೂಪ ಕಾಮಶಾಸ್ತ್ರೋಕ್ತವಿದು
ಭ್ರಮಿಸಬೇಡೆನ್ನಾಣೆ ಸತ್ಯಶೀಲಮದುಂಟು
ಕ್ಷಮಿಸಬೇಕೆಂದೆನಲು ಸೈರಿಸದೆ ಕಾತುರದಿ ನೃಪನಪ್ಪಲಾಕ್ಷಣದೊಳು ೧೯

ಕಾದಿರ್ದ ಕಾಂಚನದ ಬೊಂಬೆಯಪ್ಪಿದ ತೆರದಿ
ಮೇದಿನೀಶನ ದೇಹಮದು ಸುಡಲು ನಡುಗುತ್ತ
ಆದರದಿ ಕೇಳ್ದನೆಲೆ ಕಾಂತೆ ನಿನ್ನಂಗಮದು ತಪ್ತಮಾಗಿಹುದೇಕೆನೆ
ನಾದಮಯದೂರ್ವಾಸ ಮುನಿಯೆನಗೆ ಮಂತ್ರಮಂ
ಬೋಧಿಸಿದ ಬಾಲ್ಯದೊಳಗದರಿಂದ ಕಾಮಸುಖ
ಮಾದಪುದೆ ಭ್ರಮಿಸಬೇಡೆಂದೆನಲು ತ[೨][ನ್ಮಂತ್ರವು][೨]ಪದೇಶಿಸೆಲೆ ಕಾಂತೆಯೇ ೨೦

ಸತಿಗೆ ಪತಿ ಗುರುವಾಗಬಲ್ಲನಲ್ಲದೆ ಪತಿಗೆ
ಸತಿಯು ಗುರುವಾಗುವದು ನೀತಿಯಲ್ಲೆಂದೆನುತ
ರತಿಯಿಂದೆ ಗಾರ್ಘ್ಯಮುನಿಯಾಶ್ರಮಕೆ ಒಡಗೊಂಡು ಬಂದಾಗ ಬಿನ್ನೈಸಲು
ಹಿತದಿಂದೆ ತನ್ಮುನಿಪ ಯಮುನಾನದೀ ತಟದಿ
ಪ್ರತಿರಹಿತ ಮಂತ್ರೋಪದೇಶಮಂ ಕೊಡಲಸಮ
ಕ್ಷಿತಿಪನಂಗದಿ ಕೋಟಿವಾಯಸಗಳುಂ ಚೀರಿ ಪಾರಲ್ಕೆ ಕಡುಭೀತಿಯಿಂ ೨೧

ಅರಸನಚ್ಚರಿದಾಳ್ದಿದೇನೆಂದು ಮುನಿವರನ
ಚರಣಕ್ಕೆ ಬಿನ್ನೈಸೆ ಬಹುಜನ್ಮಕೋಟಿಯೊಳ್
ಪರಿಮಿತಿಲ್ಲದೆ ಮಾಳ್ದ ನಿಜಪಾಪ ಕೊತ್ತಳಿಯವಿಂಡಾಗಿ ನೆರೆಸಾರ್ದವು
ಪರಮಮಂತ್ರೋಪದೇಶದ ಮಹಿಮೆಯೆಂದೆನುತ
ಹರುಷದಿಂ ಗಾರ್ಘ್ಯಮುನಿ ಪೇಳ್ದು ಬೀಳ್ಕೊಡಲು ನೃಪ
ನರಸಿಸಹಿತಂ ಬಂದು ತನ್ನ ಪಟ್ಟಣದೊಳಗೆ ರಾಜವೈಭವದಿಂದಲಿ ೨೨

---

೧ ಪ್ರಬಢರು (ಕ. ಚ). ೨ ನುವನು (ಕ. ಚ.)

ಸುಖಮಿರುತ ಮಂತ್ರಮಯನಾಗಿ ಭೂಪಾಲ ರತಿ
ಸುಖದಿ ನಿಜಪತ್ನಿಯಂ ಬೆರೆದು ಪರಿಣಾಮಿಸು
ತ್ತಖಿಲ ವೈಭವದಿಂದೆ ಚಿರಕಾಲಮಂ ಬಾಳ್ದು ಶಿವಮಂತ್ರದುನ್ನತಿಯೊಳು
ಶಿಖಿಸೋಮರವಿನೇತ್ರನಂ ಒಲಿಸಿ ಕೈಲಾಸ
ಶಿಖರಿಯಂ ನೆರೆಸಾರ್ದು ಪರಮ ನಂದೀಶ ಪ್ರ
ಮುಖಗಣರ ಮಧ್ಯದೊಳು ಮೆರೆದಿರ್ದನತಿಶಯದಿ ಚಿತ್ತೈಪುದೆಲೆ ರಾಜನೆ ೨೩

ಶಿವಮಂತ್ರಜಪಕಾಲದೊಳಗಸ್ಯನುಡಿಯಾಡ
ದವಿರಳದ ವ್ರತದಿಂದೆ ಚೊಕ್ಕಳದ ಮಾಠಯ್ಯ
ನವಿರತಂ ಬಾಳುತಿರೆ ಮುಪ್ಪಡಸಿಯೊಂದಿನದಿ ತಪ್ಪೊಂದನೇ ನುಡಿಯಲು
ಶಿವ ಶಿವ ಮಹಾದೇವ ವ್ರತಭಂಗಮಾಯ್ತೆನುತ
ವಿವರಿಸುತ್ತಸುವಳಿವುತಿರೆ ನೋಡಿ ಶೈಲಜಾ
ಧವ ಮೆಚ್ಚಿ ಕೈಲಾಸಗಿರಿಗೊಯ್ದನೆಲೆ ರಾಜ ಕೇಳು ಮಂತ್ರದ ಮಹಿಮೆಯಂ ೨೪

ಸಲ್ಲಲಿತ ಮಂತ್ರೋಪದೇಶದಿಂ ಜಗಮರಿಯೆ
ಕಲ್ಲುಬಸವಂಗೆ ತಿರುಬೆಟ್ಟನಾಕ್ಷಣದಿ ಎಳೆ
ಹುಲ್ಲುಮಂ ಮೇಯಿಸಲು ಕಂಡು ನಡನಡಗುತ್ತ ಪರವಾದಿಗಳ ಸಂಕುಲಂ
ಫುಲ್ಲಶರಹರ ಭಕ್ತರೊಳಗಧಿಕನಿವನೆಂದು
ಖುಲ್ಲತನಮಂ ಬಿಟ್ಟು ತನ್ಮಹಿಮನಮಳಪದ
ಪಲ್ಲವಕೆ ವಂದಿಸಿದರೆಲೆರಾಜ ಕೇಳಿನ್ನು ಪರಮ ಮಂತ್ರದ ಮಹಿಮೆಯಂ ೨೫

ಬಾಚರಸ ಲೆಕ್ಕದೊಳು ಶಿವಮಂತ್ರಮಂ ಬಿಡದೆ
ಸೂಚಿಸಿರೆ ಕಂಡು ಕಾಪಟ್ಯಮಂತ್ರಿಗಳೆಲ್ಲ
ನೀಚತನದಿಂ ನೃಪಗೆ ಪೇಳ್ದರೆಲೆ ಜೀಯ ಚಿತ್ತೈಸೆಂದು ವಿಜ್ಞಾಪನಂ
ಗೋಚರಿಸಲಸದಳಂ ಬಹುಕಾಲ ಗಣಿತಗಳ
ವಾಚಿಸುವದರಿದರಿದು ಸೊಡ್ಡಳನ ಲೆಕ್ಕಕ್ಕೆ
ನಾಚಿಕೆಯು ತೋರುವದು ಕೊಟ್ಟು ಕೊಂಡುದಕೆಲ್ಲ ಓಂನಮಃಶಿವಯೆನುತಲಿ ೨೬

ಬಹುಕಾಲದೋವಿಯೊಳಗೆಲ್ಲಿ ನೋಡಿದಡಲ್ಲಿ
ಇಹುದು ಪಂಚಾಕ್ಷರದ ಮಂತ್ರಮದರಿಂದ ನೀ
ವಹುದಲ್ಲವೋ ನೋಡಬೇಕೆನುತ ಕೊಂಡೆಯರು ಪೇಳಲ್ಕೆ ಭೂಪಾಲನು
ವಿಹಿತಮಲ್ಲೆಂದೆನುತ ಲೆಕ್ಕಗಳನಾಕ್ಷಣದಿ
ತಹುದೆಂದು ತರಿಸುತಾರೈಯುತ್ತ ನಿಮ್ಮ ವಚ
ನ ಹುಸಿಯಲ್ಲೆಂದು ಕೋಪವನಾಂತು ಬಾಚರಸ ಬಸವೇಶರಂ ಕರಿಸುತಾ ೨೭

ಲೆಕ್ಕಮಂ ರುಜುಮಾಳ್ಪುದೆಂದೆನಲು ಬಾಚರಸ
ನಕ್ಕರದಿ ಪ್ರಮಥರಾಣೆಯನಿಟ್ಟು ದಿನಮಣಿಗೆ
ಮಿಕ್ಕು ಪೋಗದರಿಂದು ಪನ್ನೊಂದು ದಿನ ತಡೆದು ಪಂಚಾಕ್ಷರಿಯ ಮಂತ್ರದಿಂ
ಲೆಕ್ಕದೋಲೆಯ ನೋಡಿ ನಸುನಗುತ ತನ್ನೊಳಗೆ
ಮಿಕ್ಕ ಮಂತ್ರಿಪರ ಗಣಿತಕ್ಕೆ ಸಮವೆಂದೆನಲು
ಚಕ್ಕನೇ ಪೇಳ್ದು ಜಗದಿಟ್ಟಂಗೆ ಬೀಳ್ಕೊಂಡು ಮೆರೆದ ಮಂತ್ರದ ಮಹಿಮೆಯಂ ೨೮

ಅಜಗಣ್ಣ ತಂದೆಗಳು ಶಿವಮಂತ್ರಮಂ ಹೃದ್ವ
ನಜದೊಳಗೆ ಗೌಪ್ಯದಿಂ ಧ್ಯಾನಿಸುತ್ತಿಹ ನೇಮ
ರುಜುವಾಗಿರಲು ಬಳಿಕ ಮತ್ತೊಂದು ದಿನದೊಳಂ ಮರೆದೊಮ್ಮೆ ಮಾನಸದೊಳು
ಕುಜನಾಳಿ ಕೇಳುವಂತುಚ್ಚರಿಸಲಾಕ್ಷಣದಿ
ಅಜಮುಖಾಮರಸೇವ್ಯ ಸಾಂಬನೊಳಗೈಕ್ಯಮಂ
ನಿಜದಿಂದೆ ಪಡೆದನೆಲೆರಾಜ ಕೇಳೆಂದೆನುತ ಮಹಲಿಂಗಗುರು ಪೇಳ್ವನು ೨೯

ಸಾನಂದಗಣನಾಥನೊಂದಿನದಿ ಯಮಪುರಕೆ
ಸಾನಂದದಿಂ ಬಂದು ನರಕಿಗಳ ನೋಡುತ್ತ
ತಾನೊಂದು ಕಾರುಣ್ಯದಿಂ ಪೊರೆಯಬೇಕೆಂದು ಪಂಚಾಕ್ಷರಿಯ ಮಂತ್ರಮಂ
ಆ ನರಕದಲ್ಲಿರ್ಪ ಪ್ರಾಣಿಗಳು ಕೇಳ್ವಂತೆ
ಓಂ ನಮಃ ಶಿವಯೆಂಬ ಮಂತ್ರಮಂ ಬಿಡದೆ ಸಮ
ಧ್ಯಾನದಿಂದುಚ್ಚರಿಸುತೆಲ್ಲರನು ಶಿವಪುರವ ಪೊರ್ದಿಸಿದ ಜಗಮರಿಯಲು ೩೦

ಪಂಚಾಕ್ಷರಿಯ ಮುರಘನೆಂದೆಂಬ ಶರಣ ತಾ
ಪಂಚಾಕ್ಷರವ ಕೊಳಲಿನಲಿ ನುಡಿಸಿ ಜಾಣ್ಮೆಯಿಂ
ಪಂಚಮುಖನಂ ಕೇಳಿಸುತ್ತಸಮ ಸಂತಸವಗರೆವುತ್ತ ಜಗಮರಿಯಲು
ಸಂಚಿತಾಗಾಮಿಪ್ರಾರಬ್ಧಗಳ ಸಂಹರಿಸಿ
ಕಾಂಚನಾಚಲಧಾಮನೊಳಗೈಕ್ಯ ಪದವಿಯಂ
ವಂಚನಿಲ್ಲದೆ ಪಡೆದ ಸಿದ್ಧಾಂತವಿದು ಮಗನೆ ಕೇಳೆಂದ ಮಹಲಿಂಗನು ೩೧

ಧರಣೀಶನಾಜ್ಞೆಯಿಂ ಭಟರಂದು ಕೋಪದಿಂ
ಶರಣಜೀವನ ಮಂತ್ರಿವರನುತ್ತಮಾಂಗಮಂ
ಭರದಿಂದೆ ಪೊಡೆವುತಿರೆ ತನ್ಮಹಿಮನಸಮ ಪಂಚಾಕ್ಷರಿಯ ಜಪಿಸುತ್ತಿರೆ
ಕರವಾಳಸಂಕುಲಗಳರಳಮಾಲೆಯದಾಗಿ
ಕೊರಳಿಂಗೆ ಪರಿರಮ್ಯಮಾಗಿ ಬೀಳುತ್ತಿರಲು
ಪರಮೇಶ ಮೆಚ್ಚುತ್ತ ಪ್ರಮಥಪದವಿಯನಿತ್ತ ಚಿತ್ರ್ಯೈಪುದೆಲೆ ರಾಜನೇ ೩೨

ಬಂಕಯ್ಯಗಳ ಪರಮ ಭಕ್ತಿಯಂ ಪರಕಿಸಲು
ಶಂಕರನ ಪರಮಾವತಾರ ಜಂಗಮ ಬಂದು
ಶಂಕಿಸವೆ ಮಧ್ಯಾಹ್ನಸಮಯದಲಿ ಕ್ಷೀರಮಂ ಬೇಡಲ್ಕೆ ಭಯಭಕ್ತಿಯಿಂ
ಪಂಕಜಭವಾಂಡದೊಳಗಚ್ಚರಿಯದೆಂಬಂತೆ
ಅಂಕಿತಮಹಾಮಂತ್ರಮಂ ಜಪಿಸಿ ಕರುವಿಂಗೆ
ಮುಂಕೊಂಡು ಕೊಡಹಾಲುಮಂ ಕರೆದು ಚರಕಿತ್ತು ನೆರೆಮೆರೆದನಾ ಮಹಿಮನು೩೩

ರಾಜಶೇಖರನೃಪನತುರಗಖುರಹತಿಯಿಂದ
ಭೂಜನಂ ತಿಳಿವಂತೆ ಶಂಕರನು ಮಡಿಯಲ್ಕೆ
ನೈಜದಿಂ ತಸ್ಮಾತೆ ತಿರುಕೊಳವಿನಾಚಿ ತಾಂ ಕಡುದುಃಖದಿಂ ಬಳಲುತ
ರಾಜನ ಸಭಾಸ್ಥಾನದಲಿ ಬಂದು ಮೊರೆಯಿಡುವ
ವ್ಯಾಜ್ಯಮಂ ಕೇಳ್ದು ಸತ್ಯೇಂದ್ರ ಭೂವರನಾಗ
ಮಾಜಹರಭಕ್ತಶಿಶುದ್ರೋಹಕ್ಕೆ ನಿಜಸುತನ ಹರಣಮಂ ಸಮನೀವುದು ೩೪

ಧರ್ಮವೆಂದೆನಲು ಪತಿವ್ರೋಹಿಮಂತ್ರಿಪನಾಗ
ಧರ್ಮವರಿತಾಕ್ಷಣದಿ ತನ್ನಸುವ ನೆರೆಕೊಡಲು
ಕರ್ಮಹರ ಮಂತ್ರಲಕ್ಷಂ ನೋಡಿ ಭರದಿಂದ ನಿಜಪ್ರಾಣವನ್ನೀಯಲು
ನಿರ್ಮದದ ಸಂದಾಯಿ ಕಂಡಸುವನೀಯಲ್ಕೆ
ನಿರ್ಮಲಸ್ವಾಂತೆ ತಿರುಕೊಳನಾಚಿ ತಾ ಮಡಿಯೆ
ಕೂರ್ಮೆಯಿಂ ಸತ್ಯೇಂದ್ರವಿತವಚನರುಂ ತಮ್ಮ ತಲೆಗಳಂ ಕತ್ತರಿಸಲು ೩೫

ಅದನೆಲ್ಲವುಂ ಕಂಡು ಸತ್ಯೇಂದ್ರನಂಗನೆಯು
ಹೃದಯದೊಳು ಪಂಚಾಕ್ಷರಿಯ ಮಂತ್ರ ಜಪಿಸುತ್ತ
ಹದನಾದ ಖಡ್ಗದಿಂ ತನ್ನ ಗೋಣುಮನರಿದು ಬಿಸುಡಲ್ಕೆ ಭೂತಳದೊಳು
ಮದನಾರಿ ಮೆಚ್ಚುತ್ತ ಎಣ್ಬರಿಂಗಸುವಿತ್ತು
ಮುದದಿಂದ ಪುಷ್ಪಕದಿ ಕೈಲಾಸಗಿರಿಗೊಯ್ದು
ಸದಮಲಮಹಾಮಂತ್ರದುನ್ನತಿಯ ಕೇಳೆನುತ ಮಹಲಿಂಗಗುರು ಪೇಳ್ದನು ೩೬

ಹರಶರಣಸೀಮಂತಮಣಿ ಮಂತ್ರಜಾತಯ್ಯ
ಪರಮಮಂತ್ರಾಪೇಕ್ಷೆಯಿಂದಿರದೆ ಡೊಂಬತಿಯು
ಚರಣಸೇವೆಯ ಮಾಡಿ ಪನ್ನೆರಡು ವರುಷ ಪರಿಯಂತರದಿ ಗಾರ್ದಭಗಳಂ
ಪರಿಪಾಲಿಸುತ್ತಿರಲು ಮತ್ತೊಂದು ದಿನದಲ್ಲಿ
ವರಮಂತ್ರವನು ತೋರಿ ಸರ್ವರಿಗೆ ಮುಕ್ತಿಯುಂ
ಹರುಷದಿಂ ಕೊಟ್ಟು ತನ್ಮಂತ್ರದೊಳಗುರಿಗಪ್ಪುರದ ತೆರದಿ ಬಯಲಾದನು ೩೭

ಇಂತು ಹರಮಂತ್ರವನು ನೆರೆನಂಬಿ ಭಕ್ತಿಯಿಂ
ಸಂತತಂ ಸಕಲಸಿದ್ಧಿಯ ಪಡೆದರೆಲೆ ಮಗನೆ
ಸಂತಸದಿ ಕೇಳಿನ್ನು ಪರಮ ರುದ್ರಾಕ್ಷಿಗಳ ಘನತೆಯಂ ಭೂತಳದೊಳು
ಕಂತುಹರ ಪೂರ್ವದಲಿ ತ್ರಿಪುರಗಳ ಸಂಹರಿಪ
ಚಿಂತೆಯಿಂ ದಿವ್ಯ ಸಾಸಿರವರುಷ ಕಣ್ದೆರೆದು
ನಿಂತು ನೋಡಲು ಕೀಲಮದು ತೋರದಿರೆ ದೃಷ್ಟಿಯುದ್ರವಣದಿಂ ಹನಿಗಳು ೩೮

ಧರೆಗುದುರೆ ರುದ್ರಾಕ್ಷಿ ತರುವಾಗೆ ತನ್ಮಣಿಯ
ಧರಿಸಿದರೆ ಸ್ಮರಿಸಿದರೆ ಸೋಂಕಿದರೆ ಸಂತತಂ
ನರಜನ್ಮಕೋಟಿಯೊಳ್ ನಿರ್ಮಿಸಿದ ಪಂಚಮಹ ಪಾತಕದ ಸಂಕುಲವನು
ಪರಿಹರಿಸಿ ಲಕ್ಷಭೂದಾನ ಗೋದಾನಗಳ
ವರ ಫಲವನಿತ್ತು ಹರಲೋಕವಂ ಪೊರ್ದಿಸುವ
ಪರಮ ರುದ್ರಾಕ್ಷಿಗಳ ಮಹಿಮೆಯಂ ಕೇಳೆಂದು ಮಹಲಿಂಗಮುನಿ ಪೇಳ್ದನು ೩೯

ಹೆಂಡವಂ ಸೇವಿಸುವ ಭಂಡ ತಾನಾದೊಡಂ
ಖಂಡಮಂ ಖಾತಿಸುವ ಕಡುಕರ್ಮಿಯಾದೊಡಂ
ಚಂಡಾಲವನಿತೆಯರ ಚೆಲ್ವಿಂಗೆ ಮೆಚ್ಚಿರುವ ಕುಲಭ್ರಷ್ಟ ತಾನಾದೊಡಂ
ಮಂಡೆಯೊಳಗೊಂದು ರುದ್ರಾಕ್ಷಿಯನು ಧರಿಸಿದರೆ
ಚಂಡಿಕಾವರನ ದ್ವಿತಿಯಾಕಾರನೆಂದು ಭೂ
ಮಂಡಲದಿ ಶ್ರುತಿವಾಕ್ಯ ಸಾರುತಿಹುದೆಲೆ ಮಗನೆ ಕೇಳೆಂದ ಮುನಿಚಂದ್ರನು ೪೦

ರುದ್ರಾಕ್ಷಿ ದೊರೆಯದಿರೆ ಭಕ್ತಿಯಿಂ ಮೃಣ್ಮಯದಿ
ರುದ್ರಾಕ್ಷಿಯನು ಮಾಡಿ ಧರಿಸಿದವ ಭೂತಳದಿ
ರುದ್ರಸ್ವರೂಪನೆಂದೆನಿಪ ಕಾತ್ಯಾಯನರು ಶಾಖೆಯೊಳು ಸಾರುತ್ತಿಹ
ಭದ್ರಮಯ ವಾಕ್ಯಗಳ ವರಸನತ್ಕುವರಂಗೆ
ರುದ್ರಜಾವರ ಪೇಳ್ದನೆಲೆರಾಜ ದುರಿತ ದಾ
ರಿದ್ರ್ಯವಿದ್ರಾವಣೋನ್ನತ ಪರಮ ರುದ್ರಾಕ್ಷಿ ಘನತೆಯನು ಚಿತ್ತೈಪುದು ೪೧

ವಾರಣಾಶಿಯೊಳು ಸುಜ್ಞಾನಾಶ್ರಮರ ಚರಣ
ವಾರಿಜವ ಸೇವಿಸುತ ಓರ್ವ ಶೂದ್ರಂ ಬಿಡದೆ
ಸೇರಿಕೊಂಡಿರಲು ಕಾಲಾಂತರಕೆ ಮೃತನಾಗಿ ವೈವಸ್ವತನ ಭಟರೊಳು
ಧೀರ ತಾನಾಗಿರುತ ಬಳಿಕೊಂದು ವಾಸರದಿ
ಭೂರಿ ಖಡ್ಗಗಳಿಂದ ಕಡಿವಡೆದು ಬಂದೊಡನೆ
ಚಾರು ತತ್ಸನ್ಯಾಸಿಯಾಶ್ರಮರ ಪದಕೆರಗಲಾ ಮಹಿಮ ನೀನಾರೆನೆ ೪೨

ದೇವ ಸ್ನಾನಾದಿಯೊಳ್ ನಿಮ್ಮ ಪದಪದ್ಮಗಳ
ಸೇವೆಯೊಳಗಿರ್ದ ಶೂದ್ರಂ ಮಡಿದ ಬಳಿಕ ರಾ
ಜೀವ ಮಿತ್ರೋದ್ಭವನ ಕಿಂಕರತ್ವದೊಳಿರ್ದು ವ್ಯಾಸಕಾಶಿಯೊಳೊಂದಿನಂ
ಜೀವಗತನಾಗಿರ್ದ ಪಾತಕನ ಕೊಂಡೊಯ್ವ
ಭಾವಮಂ ತಿಳಿದು ಘನಕೋಪದಿಂದಾಕ್ಷಣದಿ
ದೇವದೂತರು ಬಂದು ಪುಣ್ಯಾತ್ಮನವನೆಂದು ಬಿಡಿಸುತೆಮ್ಮನು ಜಡೆಯಲು ೪೩

ವ್ಯಾಸಕಾಶಿಯೊಳು ಮೃತರಾದರಾರಾದೊಡಂ
ಹೇಸಿ ಖರಜನ್ಮದೊಳು ಸಂಜನಿಪರೆನಲವನ
ಭಾಸುರದ ಪುಣ್ಯವೇನೆಂದೆನುತ ನಾವವರ ಬೆಸಗೊಳಲ್ಕಿಂತೆಂದರು
ಓಸರಿಸದವನಳಿದ ತಾಣದೊಳ್ ರುದ್ರಾಕ್ಷಿ
ವಾಸವಾಗಿಹುದಿಳೆಯೊಳಗವೆಂದು ಪೇಳ್ದು ಪರ
ಮೇಶದೂತರು ಬಳಿಕ ಕೊಂಡೊಯ್ದರವರತ್ತ ಘಾಸಿಯಾಗುತ ಬಂದೆನು ೪೪

ಎಂದೆನುತ ಪೇಳಲ್ಕೆ ಕೇಳ್ದು ಸನ್ಯಾಸಿ ಮುದ
ದಿಂದವಂ ಬೀಳ್ಕೊಡುವಗಳೆದಸಮ ತಾಣಮಂ
ಚಂದದಿಂ ತೋರ್ಪುದೆನೆ ವ್ಯಾಸಕಾಶಿಗೆ ಬಂದು ಮುಂದಿರ್ಪ ಮಂದಿರವನು
ಒಂದಿ ತೋರಿಸಲು ಒಂದಾಳುದ್ದ ನೆಲನಗಿಯೆ
ಕುಂದದೆ ಮಹಾಪರಮ ರುದ್ರಾಕ್ಷಿ ಥಳಥಳಿಸ
ಲಂದು ತನ್ಮಣಿಯ ಕೈಯೊಳಗಾಂತು ಕೀರ್ತಿಸಲು ಯಮಬಂಟನದ ಬೇಡಲು ೪೫

ನಿನಗೆ ಸಲ್ಲದು ಜಗದಿ ಘನಕೆ ಘನವಾದಸಮ
ಮನಸಿಜಾಂತಕನಕ್ಷಿಯಿಂದೊಗೆದ ಮಣಿಯೆಂದು
ಮನವೊಲಿದು ತನ್ನುತ್ತಮಾಂಗದೊಳ್ತಳೆದವನ ಬೀಳ್ಕೊಟ್ಟು ಸನ್ಯಾಸಿಗಳ್
ಮಿನುಪ ಕಾಶೀಕ್ಷೇತ್ರಕೆಯ್ತಂದು ಸುಖಮಿರ್ದ
ರೆನೆ ಪರಮರುದ್ರಾಕ್ಷಿ ಮಹಿಮೆಯಂ ಬಣ್ಣಿಪಡೆ
ವನಜಭವಗರಿದೆಂದು ಮಹಲಿಂಗಮುನಿರಾಜ ಸೂಚಿಸಿದನಾನಂದದಿಂ ೪೬

ಮತ್ತೊಂದು ಸತ್ಕಥೆಯ ಲಾಲಿಸುವದೆಲೆ ರಾಜ
ಉತ್ತಮೋತ್ತಮವೆನಿಪ ವರ ನಂದಿ ಗ್ರಾಮದೊಳ್
ಚಿತ್ತಜನ ಮಂತ್ರದೇವತೆಯಂತೆ ರಾಜಿಸುವ ಮಹನಂದಿಯೆಂದೆಂಬುವ
ಮತ್ತ ಗಜಗತಿಯ ಮಲಯಜಗಂಧಿ ಮೃದುವಾಣಿ
ವೃತ್ತಕುಚಮಂಡಲದ ವೇಶ್ಯಾಂಗನಾಮಣಿಯು
ಬಿತ್ತರದಿ ಮೆರೆದಿರ್ದಳೀನೆಂಬೆನವಳ ಸದ್ವರ್ತನೆಯ ಭೂತಳದೊಳು ೪೭

ಹರಿತಾಮ್ರಚೂಡಗಳ ಕಂಠಶಿರದೆಡೆಗಳೊಳ್
ಹರನಕ್ಷಿಮಣಿಯನೊಂದೊಂದುಮಂ ನೆರೆ ತಳೆದು
ಪರಿರಮ್ಯವಾದ ನಾಂಟ್ಯಾಗಾರದಲಿ ಬಿಡದೆ ನರ್ತನವ ಶಿಕ್ಷಿಸುತಲಿ
ಹರುಷದಿಂದಿರಲವಳ ನೈಷ್ಠಿಯಂ ಜಗದೊಳಗೆ
ಮೆರೆಯಬೇಕೆಂದೆಂಬ ಕಾರಣವ ನಿಶ್ಚೈಸಿ
ಗಿರಿಸುತಾವರನಸಮ ವಿಟರೂಪದಿಂ ಬಂದನೇನೆಂದು ಬಣ್ಣಿಸುವೆನು ೪೮

ಮಣಿಖಚಿತ ಭೂಷಣದ ಭಾರದಿಂ ದೇಹಮದು
ಮಣಿಯುತಿರೆ ಕೋಟಿ ಮನ್ಮಥರುಗಳ ರೂಪಮಂ
ಅಣಕಿಸುವ ಸೌಂದರ್ಯಕಾಯಕಾಂತಿಗಳಿಂದ ಬರಲಾಗ ಸಂತಸದೊಳು
ಗಣಿಕೆಯರ ಸೀಮಂತಮಣಿಯೆನಿಪ ಮಹನಂದಿ
ತ್ರಿಣಯನೆಂಬುದ ತಿಳಿಯದತಿ ಮೋಹದಿಂದೆಸೆವ
ಪ್ರಣಯದಿಂ ನಲವೇರಿ ತದ್ವಿಟನ ಕೈಗಂಕಣವ ನೋಡುತಿಂತೆಂದಳು ೪೯

ಪಲ್ಲವಕುಲಾಂಭೋಧಿಚಂದ್ರ ಭವದೀಯ ಕರ
ಪಲ್ಲವಪ್ರಕೋಷ್ಠಗತ ಮಣಿಖಚಿತ ಕಂಕಣವ
ನುಲ್ಲಾಸದಿಂದೀಯಬೇಕೆನಲು ನಸುನಗುತ ಕಪಟವಿಟನಿಂತೆಂದನು
ಪುಲ್ಲಿಗಂಗಳೆ ನಿನ್ನ ಮನದೊಲವನಿತ್ತಪೆನು
ನಿಲ್ಲದೆನ್ನೊಡನೇಸುದಿನ ಒತ್ತೆಯಾದಪೆಯು
ಸೊಲ್ಲಿಸೆನಲಾಕ್ಷಣದಿ ತದ್ವಾರನಾರಿಯರ ಸೀಮಂತಮಣಿ ನುಡಿದಳು ೫೦

ಸರ್ವರುಂ ವಲ್ಲಭರು ನಮಗೆಂದು ಜಗದೊಳಗೆ
ಸರ್ವ ಶಾಸ್ತ್ರಗಳು ಸಾರುತ್ತಿಹವು ಬಳಿಕ ನಿನ
ಗೊರ್ವನಿಗೆ ಸೆರಗಹಾಸುವೆನೆಂತು ಬಿಡು ನಿನ್ನ ಬರಿಮಾಯೆಯಂ ಸುಮ್ಮನೆ
ಉರ್ವಿಯೊಳು ದಿವಸತ್ರಯಂ ಪತ್ನಿಯಾದಪೆನು
ಉರ್ವಿಸುಖದುಃಖಗಳು ಬಂದರನುಭವಿಪೆನೆನೆ
ನಿರ್ವಹಿಸು ನನಗಿಂದು ನಂಬುಗೆಯನೆಂದೆನಲು ಮಹನಂದಿಯಿಂತೆಂದಳು ೫೧

ಇದಕೆ ನಾ ತಪ್ಪಿದರೆ ಹರಿ ಬ್ರಹ್ಮ ಶಕ್ರಾದಿ
ಸದಮಲ ಸುರಾಳಿ ಸೋಮಾದಿತ್ಯರೇ ಸಾಕ್ಷಿ
ಯಧುಮಲ್ಲದಲೆ ಬಳಿಕ ಮದನಾರಿಯೇ ಸಾಕ್ಷಿಯೆಂದೆನಲು ಕಪಟಾತ್ಮನು
ಮುದದಿಂದೆ ನಸುನಗುತ್ತಲೆ ಬಾಲೆ ಕೈಗಡಗ
ಮಿಡುಯೆನ್ನ ಪ್ರಾಣಲಿಂಗವು ಕುಂದುಕೊರತೆಗಳು
ಒದವಿದರೆ ಪ್ರಾಣಮಂ ಬಿಟ್ಟಪೆನು ಜೋಕೆಂದು ಕೊಟ್ಟನಾ ಕಂಕಣವನು ೫೨

ಆ ಕಂಕಣವನಿರದೆ ಕೈಕೊಂಡು ಮನವೊಲಿದು
ರಾಕೇಂದುವದನೆ ನಾಂಟ್ಯಾಗಾರ ಮಧ್ಯದಲಿ
ಜೋಕೆಯಿಂದಿರಿಸುತ್ತ ರತಿಸುಖದ ಸುಗ್ಗಿಯಿಂದಾ ವಿಟನ ತಣಿಸುತ್ತಲಿ
ಏಕಾಂತದೊಳಗಿರಲ್ಕೇನೆಂಬೆ ಕೌತುಕವ
ನಾ ಕಪಟರೂಪ ಮಾಯಾಗ್ನಿಯನು ಪತ್ತಿಸಲು
ಕೋಕಕುಚೆ ರತಿಮೂರ್ಛೆತಿಳಿದೆದ್ದು ನೋಡುತಿರೆ ಧಗಧಗಿಸುತಾಕ್ಷಣದೊಳು ೫೩

ಛಟಪಟನೆ ನಾಂಟ್ಯಾಲಯಂ ಸುಟ್ಟು ನಿಮಿಷದೊಳ್
ಪಟಪಟನೆ ಬೀಳುತಿರೆ ಭ್ರಮೆಗೊಂಡು ಭರದಿಂದೆ
ಛಟಪಟಿಪ ಹರಿ ಕುಕ್ಕುಟಂಗಳಂ ಬಿಡಲೊಡನೆ ಓಡಡವಿಗೀಡಾದುವು
ತುಟಿಮಿಡುಕದಕಟಕಟಿದೇನಾಯ್ತು ಜಗದೊಳಗೆ
ವಿಟನಕ್ರಿಯೆ ಘಟಿಸಲಿಲ್ಲೆಂದೆನುತ ಮರುಗಿ ಸಂ
ಕಟದಿ ನಾಂಟ್ಯಾಲಯದಿ ಪೊರಪೊಣ್ಮಲವನೊಡನೆ ಉರಿನೊಂದಲನುವಾದುದು ೫೪

ಹರಿಣಾಕ್ಷಿ ಮತ್ಪ್ರಾಣಲಿಂಗ ಸಮುಕಂಕಣವ
ಮರೆದೆಯಾಯೆನಲು ಹಹಹಾ ಎಂದು ಮನಮರುಗಿ
ಅರಸುತಿರೆ ಪಲವು ಪೋಳಾಗಿ ಬೀಳ್ದಿರೆ ಕಂಡು ಚಿಂತಿಸುತ ಹಾ ಎನುತಲಿ
ಪರಿಯನೆಲ್ಲವ ನೋಡಿ ಕಪಟಾತ್ಮವಲ್ಲಭಂ
ಹರಹರ ಮಹಾದೇವ ಮರಣ ಸಮನಿಸಿತೆಂದು
ಪರಮ ಮಾಯಾಗ್ನಿಯೊಳು ಪೊಕ್ಕು ಬಯಲಾದನಾ ಮಹನಂದಿ ನೋಳ್ಪಂದದಿ ೫೫

ಎತ್ತ ವಿಟನಾಗಮನ ಮಣಿಖಚಿತಕೈಗಡಗ
ವೆತ್ತರದ ಮೇಲನಾಪೇಕ್ಷೆಯೆನಗಾಯ್ತುಕಟ
ಎತ್ತ ನಾಂಟ್ಯಾಲಯಕೆ ಮಾಯಾಗ್ನಿಪತ್ತಿದುದು ಭಾವಿಪಡೆ ಭೂತಳದೊಳು
ಒತ್ತೆಯಾಡಪನೇಕೆ ದಿವಸತ್ರಯಂ ಬರಿದೆ
ಸತ್ತನೇತಕೊ ಪಲ್ಲವೋತ್ತಮಂ ಶಿವಶಿವಾ
ಎತ್ತಣಿಂದಿತ್ತೆನಗೆ ದೈವವಶದಿಂದಗ್ನಿ ಸಮನಿನಿತು ಪ್ರಾರಬ್ಧವು ೫೬

ದೈವಸಾಕ್ಷಿಕವಾಗಿ ವಚನವಿತ್ತಂತೆನಗೆ
ದೈವವಶದಿಂದಗ್ನಿಗಾಹುತಿಯದಾಗಿ ಘನ
ಶೈವ ಸನ್ಮಾರ್ಗದೊಳಹೊಂದಿ ಸುಖಿಸುವೆನೆಂದು ನಿಶ್ಚಯಿಸುತಾಕ್ಷಣದೊಳು
ದೇವಭಕ್ತಾಳಿಗಭಿನಮಿಸಿ ಸರ್ವಸ್ವಮಂ
ಓವಿದಾನಮನಿತ್ತು ನಿಜಬಂಧು ಸಮ್ಮತದೊ
ಳಾ ವಿಟನ ಸ್ಮರಣೆಯಿಂದಗ್ನಿಕುಂಡವ ಬಳಸಿ ಬೀಳಲ್ಕದೇನೆಂಬೆನು ೫೭

ಬೀಳದಿರು ಬಾಲೆ ಬಿಡು ಬಿಡು ನಿನ್ನ ಘನಧೈರ್ಯ
ದೇಳಿಗೆಯ ನೋಡಲೋಸುಗದಿಂದೆ ವಿಟನಾಗಿ
ಭಾಳಾಕ್ಷ ಮುಂತಾದ ಕುರುಹುಗಳ ಮರೆಮಾಡಿ ನಾಬಂದೆನೆಂದೆನುತಲಿ
ಕಾಳಿಕಾವರ ಮೆಚ್ಚಿ ನಿಜರೂಪಮಂದೋರಿ
ಪಾಳಿಯಿಂ ಕೈವಿಡಿದು ತರ್ಕೈಸಿ ಮನ್ನಿಸುತ
ಬೋಳೈಸಿ ನಿನ್ನ ಮನದೊಲವ ಬೇಡೆಂದೆನಲ್ ಕೈಮುಗಿದು ಬಿನ್ನೈಸಿದಳ್ ೫೮

ಎಲೆ ದೇವ ಮದ್ಬಂಧು ಜನಸಹಿತ ಸಮ್ಮತದಿ
ಕಲಧೌತಗಿರಿಗೊಯ್ದು ಸಾಯುಜ್ಯಪದವಿಯನು
ಒಲಿದೀಯಬೇಕೆನಲು ಮಣಿಖಚಿತ ಪುಷ್ಪಕದ ಸಾಲಿನೊಳಗಿರಿಸುತ್ತಲಿ
ಕಲಿತ ಸುರದುಂದುಭಿಯ ನಾದದಿಂ ಪ್ರಮಥಗಣ
ಕುಲಮೆಯ್ದೆ ಕೊಂಡಾಡುತಿರೆ ಗಗನ ಮಾರ್ಗದೊಳ್
ಥಳಥಳಿಸುತಡರಿ ಕೊಂಡೊಯ್ದು ನಿಜಪದವಿತ್ತ ಲಾಲಿಸುವದೆಲೆ ರಾಜನೇ ೫೯

ಬಳಿಕಿತ್ತಲಾವನೇಚರತಾಮ್ರಚೂಡಗಳು
ಕಳವಳಿಸಿ ಕಾಂತಾರಮಧ್ಯದೊಳಗಸುಗಳೆದು
ಗಳ ಶಿರಗಳೆಡೆಯಲ್ಲಿ ತಳೆದಸಮ ರುದ್ರಾಕ್ಷಿಮಣಿ ಮಹಿಮೆಯಿಂ ಜಗದೊಳು
ಇಳೆಯಾಣ್ಮ ಭದ್ರಸೇನ ಸುಧಾಮ ವರಮಂತ್ರಿ
ಗಳ ತನುಜರಾಗಿ ಸಾಮ್ರಾಜ್ಯಗಳ ಭೋಗಿಸುತ
ತಿಳಿದಾದಿ ಜನ್ಮ ಸತ್ಫಲವೆಂದು ತನ್ಮಣಿಯನಾಂತು ಮುಕ್ತಿಯ ಸಾರ್ದರು ೬೦

ಬಿಲ್ಲನೋರ್ವಂ ಬೇಂಟೆಯಾಡುತ್ತೆ ವಿಪಿನದೊಳ
ಗೆಲ್ಲ ಮೃಗಸಂದೋಹಗಳ ಕೊಂದು ಖಾತಿಸುತ
ನಿಲ್ಲದೆಡೆಯಾಡುತಿರಲೊಂದು ಮರಬುಡದಲ್ಲಿ ರುದ್ರಾಕ್ಷಿಮಣಿಬಿದ್ದಿರೆ
ಸಲ್ಲಲಿತ ಬೋರಿಬೀಜಮದೆಂದು ಶುನಿಯ ಕೊರ
ಳಲ್ಲಿ ಬಂಧಿಸಿ ಬಿಡಲು ಹಂದಿ ಮೇಲ್ವರಿದದನು
ಕೊಲ್ಲುತಿರಲಾ ಕಿಟಿಯ ಕೊಂದು ತಾ ಮೃತವಾಗೆ ಮೂವರ್ಗೆ ಮೋಕ್ಷವಾದುದು ೬೧

ಗಾರ್ದಭನ ಮೇಲೋರ್ವ ಹರದ ರುದ್ರಾಕ್ಷಿಯಂ
ಹೇರ್ದುಕೊಂಡೊಯ್ವುತಿರೆ ಭಾರೈಸಿ ಮಾರ್ಗದೊಳ್
ಜಾರ್ದು ಬಿದ್ದಸುಗಳೆಯಲಾಕ್ಷಣದಿ ಬಂದೊಡನೆ ಶಿವದೂತರುನ್ನತದಲಿ
ಸಾರ್ದು ಕೈಲಾಸಕ್ಕೆ ಕೊಂಡೊಯ್ದು ಪರಶಿವಗೆ
ತೋರ್ದು ಗಣಪದವಿತ್ತರಾ ಮಣಿಯ ಮಹಿಮೆಯನು
ಸಾರ್ದು ಬಣ್ಣಿಪನಾವ ಕಬ್ಬಿಗನು ಭೂತಳದಿ ಕೇಳೆಂದ ಮುನಿಚಂದ್ರನು ೬೨

ಚಾರು ನಳಿತೋಳಿನೊಳಗೊಂದು ರುದ್ರಾಕ್ಷಿಯನು
ಧಾರಣಂಗೈದು ವ್ಯಭಿಚಾರಿ ಕಾಮಾತುರದಿ
ಜಾರನೊಳ್‌ನೆರೆದು ಸುರತಾಂತ ಮೂರ್ಛೆಯ ತಾಳ್ದು ಮಲಗಿರಲು ಪತಿ ಕಾಣುತ
ಧೀರತನದಿಂದೀರ್ವರಂ ಕಡಿಯೆ ಮೃತವಾಗಿ
ಮಾರಹರ ಪುರವನೆರೆಸಾರ್ದು ಸಾಯುಜ್ಯದೊಳು
ಸೇರಿ ಸುಖಿಸಿದರು ಗೋವಿಂದರಾಜನೆ ಕೇಳು ರುದ್ರಾಕ್ಷಿ ಘನಮಹಿಮೆಯಂ ೬೩

ಸಕಲ ಶಾಸ್ತ್ರಾಗಮ ಪುರಾಣ ವೇದಾದಿಗಳ
ನಿಕರದೊಳು ರುದ್ರಾಕ್ಷಿ ಘನಮಹಿಮೆಯನು ಬಿಡದೆ
ಸುಕರ ಗುರುಮುಖದಿಂದೆ ಕೇಳ್ದು ಭಯಭಕ್ತಿಯಿಂ ನೆರೆನಂಬಿ ಮಾನಸದೊಳು
ಶುಕವಾಣಿ ಕೇರಳಾಧಿಪನ ಪಟ್ಟದ ರಾಣಿ
ಯುಕುತಿಯಿಂ ನಿಜಕಾಂತನರಿಯದೊಲ್ ತೋಳಿನೊಳ್
ಅಕಳಂಕ ರುದ್ರಾಕ್ಷಿಯನು ಚರ್ಮಮರೆಗೈದು ತಾಳ್ದಿರಲು ಒಂದಿನದೊಳು ೬೪

ಭೂಮಿಪತಿ ಕೇರಳಾಧೀಶನೇಕಾಂತದೊಳ್
ಕಾಮಲಂಪಟನಾಗಿ ಕಾಮಿನಿಯ ಕೈದುಡುಕಿ
ಪ್ರೇಮದಿಂದೊಡನೆ ಗಾಢಾಲಿಂಗನಂಗೈದು ಚುಂಬಿಸುತ ಮಣಿಮಂಚದೊಳ್
ತಾಮರಸನೇತ್ರೆಯಂ ಮೋಹದಿಂ ನೆರೆವುತಿರ
ಲಾ ಮಣಿಯು ಕೋಮಲಾಂಗವನೊತ್ತಿ ನೋಯಿಸಲು
ಸೋಮಮುಖಿ ನಿನ್ನ ನಳಿತೋಳೊಳಿಹುದೇನೆನಗೆ ಪೇಳೆನಲು ನಸುನಗುತಲಿ ೬೫

ಅರಸಕೇಳ್ತರುಣಿಯಾಗಿರ್ದಂದು ಮೊದಲಾಗಿ
ವರತೋಳಿನೊಳಗಿಹುದು ನಾನರಿಯೆನೆಂದೆನಲು
ಧರಣೀಶ ವೈದ್ಯರಂ ಕರೆಸಿ ದ್ರವ್ಯವನಿತ್ತು ಸಕಲ ವೈದ್ಯವ ಮಾಡಿಸಿ
ಪರಿಪರಿಯ ಲೇಪನಂಗಳನೆಸಗೆ ಗ್ರಂಥಿಯದು
ಕರಗದಿರೆ ಕಂಡು ಶಸ್ತ್ರಸಲಾಕೆಯಿಂದೊಡನೆ
ಕೊರೆಯೆ ಪರಿಯದೆ ಮುರಿಯೆ ಶಸ್ತ್ರಾಸ್ತ್ರಗಳುಯೆಲ್ಲ ವಿಸ್ಮಯದಿ ಭೂಪಾಲನು ೬೬

ಹರಿಣಾಕ್ಷಿ ಮಾಜಬೇಡೆನ್ನಾಣೆ ನೀ ಪೇಳು
ಸುರಪನಾಯುಧಕಿಂತ ಬಿರುಸಾಗಿಪುದು ಗ್ರಂಥಿ
ಬರಿದೇನು ಮಾಡಿಸಿಯು ಕರಗದಿಹುದ್ಧಚ್ಛುರಿಯು ಕರವಾಳಗಳು ಮುರಿದವು
ವರ ತೋಳು ಘಾಸಿಯಾದವುವೆನುತ ದೈನ್ಯಮಂ
ಕರೆವ ಭೂಪಾಲಕನ ಮುಖಪದ್ಮವಂ ನೋಡಿ
ಕರುಣದಿಂ ರುದ್ರಾಕ್ಷಿಮಣಿಯೆಂದು ಪೇಳಲ್ಕೆ ಕಂಪಿಸುತ ಭಯಭಕ್ತಿಯಿಂ ೬೭

ತೋರ್ಪುದೆನಗೆಂದೆನಲು ಶ್ರೀಭಸಿತಮಂ ತಳೆದು
ಬೇರ್ಪಡಿಸಿ ತೋಳಿನೊಳಗಿರ್ದ ರುದ್ರಾಕ್ಷಿಯಂ
ಕೂರ್ಪ ತನ್ನರಸಂಗೆ ತೋರಿಸಲ್ ನೋಡಿ ವಿಸ್ಮಯಮಾಂತು ಭೂಕಾಂತನು
ಶೂರ್ಪಕಾಂತಕಹರನ ಭಕ್ತಿಯುತನಾಗಿ ನಾ
ನಿರ್ಪೆನೆಂದೆನುತ ತನ್ಮಹಿಮೆಯನು ಸತಿಯಿಂದ
ನೇರ್ಪಡಿಸಿ ಸಕಲ ಶಾಸ್ತ್ರಾಗಮ ಪುರಾಣದಲಿ ಕೇಳುತ್ತ ಸಂತಸದೊಳು ೬೮

ತನ್ನ ಮತಮಂ ಬಿಟ್ಟು ಶಿವಭಕ್ತನಾಗುತ್ತ
ಉನ್ನತದ ಚತುರಂಗ ಬಲಕೆ ರುದ್ರಾಕ್ಷಿಗಳ
ಸನ್ನಾಹ ಜೋಡುಗಳ ಮಾಡಿಸುತ ಭಕ್ತಿಯಿಂದಿರುತಿರಲು ಭೂತಳದೊಳು
ಚೆನ್ನಸೆವ ಸೌಂದರಗಣಾಧೀಶನೊಂದಿನದಿ
ಸೊನ್ನವೆಟ್ಟಿಂಗೆ ನೆರೆಪೋದ ವಾರ್ತೆಯ ಕೇಳಿ
ಮುನ್ನಿತ್ತ ಭಾಷೆಯಂ ಮುರಿದನೆಂದೆನುತಾಗ ಜಯಭೇರಿಯಂ ಪೊಡಿಸಿದಂ ೬೯

ಭೋರ್ಗರೆವ ನಾದದಿಂ ಚತುರಂಗಬಲದಿ ಶಿವ
ನೂರ್ಗೆ ಮುತ್ತಿಗೆ ಮಾಡೆ ಸಗ್ಗಿಗರು ಪೂಮಳೆಯ
ನೋರ್ಗುಡಿಸಿ ಗರೆವುತಿರಲಾಗಸದಿ ನಂದ್ಯಾದಿ ಪ್ರಮಥರಚ್ಚರಿದಾಳುತ
ಆರ್ಗಿವನ ಧೀರತ್ವ ತ್ರಿಭುವನದೊಳೆಲ್ಲರಿಗೆ
ಸೇರ್ಗುವದೆ ಮಝುಬಾಪುರೀಯೆನಲು ತತ್ಪುರದ
ಪೇರ್ಗದಗಳಂ ತೆಗೆಸಿ ಚಾರುಮಾಂಕನು ಪೊಕ್ಕ ಗಿರಿಜೇಶನಾಸ್ಥಾನಮಂ ೭೦

ಕೇರಳಾಧಿಪನಿಂತು ಶಿವಸಭಾಸ್ಥಾನಮಂ
ವಾರದಿಂದೊಳಪೊಕ್ಕು ಬಲವಂದು ಹರನಂಘ್ರಿ
ವಾರಿಜಕ್ಕೆರಗಿ ವರ ಸಾಮೀಪ್ಯಪದವಿಯೊಳ್ ಸೇರಿ ಸುಖದಿಂದಿರ್ದನು
ಮಾರಹರನಕ್ಷಿಮಣಿ ಮಹಿಮೆಯಿಂತೆಂದು ಮುನಿ
ವಾರ ಸಂಪೂಜ್ಯ ಪೇಳಲು ಕೇಳ್ದು ಸಂತೋಷ
ವಾರಿಧಿಯೊಳಾಳ್ದು ಗೋವಿಂದರಾಜಕುಮಾರ ಕರಕಂಜಗಳ ಮುಗಿವುತಾ ೭೧

ಎಲೆ ದೇವ ಮಹಲಿಂಗ ಮಂತ್ರರುದ್ರಾಕ್ಷಿಗಳ
ಕಲಿತ ಮಹಿಮೆಯ ಕೇಳ್ದು ಧನ್ಯನಾದೆನು ಜಗದಿ
ಬಳಿಕಿನ್ನು ಘೋರ್ಪಡೆಯರನ್ವಯಕೆ ಕುಲದೈವ ನೀವಲ್ಲದಾರಿಲ್ಲವು
ಕಲಿಮಲಾಪಹ ಮೂರ್ತಿ ಎಂದು ಪದಕೆರಗಿ ನಿಜ
ಲಲನೆ ಸಹಿತಂದು ಗೋವಿಂದರಾಜಕುಮಾರ
ಒಲಿದು ಬೀಳ್ಕೊಂಡು ಮನ್ನೆಯರೊಡನೆ ಬಂದು ರಾಜಾಲಯದಿ ಸುಖಮಿರ್ದನು೭೨

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿಂದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಿಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು೭೩

ಅಂತು ಸಂಧಿ ೧೭ ಕ್ಕಂ ಪದ ೮೩೮ ಕ್ಕಂ

ಮಂಗಳಂ

ಶ್ರೀ

ಶ್ರೀ

# ಹದಿನೆಂಟನೆಯ ಸಂಧಿ

ಸೂಚನೆ : ಮೇದಿನಿಪ ಮಾಲೋಜಿರಾಜನಂದನನೆನಿಪ
ಕೇದಾರಭಾವನಂಗದ ವಿಷಮರೋಗಮಂ
ಸಾದರದಿ ಕಳೆದು ಶೇಷದ ಮಹಿಮೆಯುಂ ಪೇಳ್ದ ಮಹಲಿಂಗನಗಜಾತೆಯೇ

ಕನಕಗಿರಿಕೋದಂಡ ಕಾತ್ಯಾಯನೀಕಾಂತ
ಜನಕಜಾಪತಿವರದ ಜಂಭಾರಿಸುತಶರದ
ಸನಕ ಶೌನಕ ಮುಖ್ಯ ಮುನಿಜಾಲಹೃತ್ಕಮಲಸಂಪೂಜ್ಯ ಸರ್ವೇಶ್ವರಾ
ಜನನಮರಣವಿಧೂತ ಸಕಲ ಜಗವಿಖ್ಯಾತ
ವಿನುತ ಗುಣಮಣಿಹಾರ ವಿರತಿಮಾರ್ಗವಿಚಾರ
ವನಜಶರನಾಶ ಸೋಲೂರ ಚೆನವೀರೇಶ ಪಾಲಿಪುದು ಮೂಜಗವನು ೧

ಗಿರಿಜಾತೆ ಚಿತ್ತೈಸು ಮಹಲಿಂಗ ಜಂಗಮದ
ವರ ಲೀಲೆಯಂ ಬಿಡದೆ ಮೋದಪುರಿ ಛಾತ್ರದೊಳ್
ಪರಮಬ್ರಹ್ಮಾನಂದದಿಂದಿರಲು ಬಳಿಕೊಂದು ದಿನದಲ್ಲಿ ಭೂಪಾಲನ
ವರ ತನುಜನೆಂದೆನಿಪ ಕೇದಾರಭಾವಾಖ್ಯ
ನಿರುತ ಗಾಂಭೀರ್ಯ ಶೌರ್ಯಾದಿ ಸದ್ಗುಣನೆನಿಸಿ
ಮೆರೆದಿರ್ದನಖಿಳ ವೈಭವದಿಂದೆ ವೈರಿಜನಕಾಂತಾರದಾವಾನಲಂ ೨

ಘೋರ್ಪಡೆಯರನ್ವಯಮಹಾಂಭೋಧಿ ಪೂರ್ಣಶಶಿ
ಶೂರ್ಪಕಾಂತಕರೂಪ ಸುಗುಣಮಣಿಜಾಲಮಾ
ಲಾರ್ಪಿತಕಳೇವರ ಕಳಾಕುಶಲ ಶಸ್ತ್ರಾಸ್ತ್ರಸಂಧಾನದೊಳ್ ಜಾಣನು
ನೇರ್ಪಡಿಪ ಗಜಹಯಾರೋಹಣದಿ ನಿಸ್ಸೀಮ
ಬೇರ್ಪಡಿಸದಿಹ ಭಾವದಿಂದ ಸಹಜಾತರೊಳ್
ಸೇರ್ಪಡೆಯೊಳಿರುತಿರ್ದ ಸಂತತಂ ಕೇದಾರಭಾವಾಖ್ಯನರಮನೆಯೊಳು ೩

ದಾಯಾದ್ಯತನದ ಮತ್ಸರದಿಂದ ರಾಣಿಯರು
ರಾಯಕುವರನ ಕೊಲ್ಲಬೇಕೆಂದು ತಮ್ಮೊಳಗೆ
ಮಾಯದಿಂ ಮಾತಾಡಿ ಬಳಿಕೊಂದು ದಿನದಲ್ಲಿ ಪರಮಾನ್ನ ಪಾಯಸದೊಳು
ಆಯತದಿ ಘೋರ ವಿಷಚೂರ್ಣಗಳ ಬೆರಸುತ್ತ
ತೋಯಜಾಕ್ಷಿಯರು ಕಾಪಟ್ಯದಿಂವೆಡೆಮಾಡೆ
ಬಾಯಿಗಿನಿದಾಗುವಂತುಂಡನಾಕ್ಷಣದಲ್ಲಿ ಮಾಲೋಜಿ ತನುಜಾತನು ೪

ಘೋರವಿಷಮಾನ್ನವದು ಸರ್ವಾಂಗದೊಳಗೆಲ್ಲ
ಪೂರವಿಸುತುದ್ರೇಕದಿಂ ಕಾಡುತಿರಲಾಗ
ವಾರಗೆಟ್ಟದು ಸತ್ವ ಒಡಲಬಣ್ಣಳಿದೊಡನೆ ದಿನಕೊಂದು ಪರಿಯಾಗುತ
ಘೋರಿಸುತ ಪ್ರಾಣಸಂಕಟ ಮಾಡುತಿರೆ ಕೃತಕ
ನಾರಿಯರು ರಾಜಮಂದಿರದಲ್ಲಿ ತಮ್ಮೊಳಗೆ
ಯಾರರಿಯದಂತಿರಲು ಬಳಿಕೊಂದು ದಿನದಲ್ಲಿ ಭೂರಮಣ ನೆರೆ ನೋಡುತ ೫

ಮೋಸದಿಂದಾದ ಕಜ್ಜಮಿದೆಂದು ತಾನರಿದು
ಭಾಸುರದ ವೈದ್ಯರಂ ಕರೆಸಿ ಬಹುಧನಮಿತ್ತು
ಆಸುರದೊಳೌಷಧಿಯ ಮಾತ್ರೆಗಳ ಕೊಡಿಸಲ್ಕೆ ಮತ್ತಷ್ಟು ಘನವಾಗುತ
ಓಸರಿಸದಾ ವಿಷಮರೋಗಮದು ದೇಹದೊಳ್
ಘಾಸಿಮಾಡುತ್ತಿರಲು ಭೇಷಜರ ಸಂದೋಹ
ಬೇಸತ್ತು ನಮ್ಮಿಂದಸಾಧ್ಯಮಾಗಿಹುದೆನಲು ಭೂನಾಥ ಚಿಂತಿಸುತಲಿ ೬

ಏನಾದಡೀ ರೋಗ ಪೋಗದೆಂದೆನುತ ನಿಜ
ಸೂನು ಕೇದಾರಭಾವಾಖ್ಯನಂ ನೋಡಿ ನೆರೆ
ಭೂನಾಥ ನೆನೆದನೊಂದೆಣಿಕೆಯನು ಮನದೊಳಗದೇನೆಂದು ಬಣ್ಣಿಸುವೆನು
ಮಾನನಿಧಿ ಮಹಲಿಂಗ ಮಹಿಮನಿರೆ ಬರಿದೆಯು
ಜ್ಞಾನದಿಂದೌಷಧಿಗಳಂ ಕೊಂಡರೇನಾಯ್ತು
ಸಾನುರಾಗದೊಳಾತನಂಘ್ರಿಕಮಲಕ್ಕೆರಗಿ ಬಿನ್ನೈಪೆನೆಂದೆನುತಲಿ ೭

ಎಂದು ಮಾಲೋಜಿ ಭೂಪಾಲ ನಿಜದಾರಕನ
ಚೆಂದದಿಂದಂದಳದೊಳಿರಿಸಿ ನಡೆಗೊಂಡು ಮುನಿ
ವೃಂದವಲ್ಲಭನಿರ್ಪ ಛಾತ್ರಾಂತರಕಮಾತ್ಯಮನ್ನೆಯರಗಡಣದಿಂದ
ಬಂದು ಸಾಷ್ಟಾಂಗಪ್ರಣಮಿತನಾಗಿ ಕೈಮುಗಿದು
ನಿಂದು ಕೇದಾರಭಾವನ ಅಡಿಗೆ ಕೆಡಹುತಿಂ
ತೆಂದು ಮಹಲಿಂಗ ಗುರುವರ್ಯನಿಗೆ ಬಿನ್ನಹವ ಸೂಚಿಸಿದನೇನೆಂಬೆನು ೮

ದೇವ ಚಿತ್ತೈಸು ನಿಜ ಸೇವಕನ ದೇಹದೊಳ
ಗಾವರೋಗವಿದೆಂದು ತಿಳಿಯಲೊಲ್ಲದು ಬರಿದೆ
ಭೂವಲಯದೊಳಗಿರ್ಪ ವೈದ್ಯರಿಗಸಾಧ್ಯಮಾಗಿಹುದಿಂದು ಭಾವಿಸುವಡೆ
ದೇವಮಣಿಯಿರಲು ಕಾಜಿನಮಣಿಯ ಬೇಳ್ಪಂತೆ
ನೀವಿರಲು ತಿಳಿಯದಜ್ಞಾನದಿಂದೌಷಧಿಯ
ಸೇವಿಸಿದ ಜಡಮತಿಗಳಂ ಬಿಡದೆ ಪಾಲಿಪುದು ಮಹಲಿಂಗ ಮುನಿಚಂದ್ರಮ ೯

ಎನುತ ಬಿನ್ನೈಪ ಜನಪತಿಯ ವದನಾಬ್ಜಮಂ
ಮಿನುಪ ಕರುಣಾವಲೋಕನದಿಂದೆ ನೋಡುತ್ತೆ
ವಿನಯದಿಂದಭಯಮುಮನಿತ್ತು ತತ್ತನುಜಾತಕೇದಾರಭಾವಾಖ್ಯನಂ
ಮನವೊಲಿದು ಮುಂದಕ್ಕೆ ಕರೆದು ನೈದಡವುತ್ತೆ
ತನುಜ ನೀನಂಜದಿರು ಪ್ರಾರಬ್ಧಕರ್ಮಗಳು
ತನುವಿಂಗೆ ಪ್ರಾಪ್ತಿಯಾಗುವವು ಶಿವನಾಜ್ಞೆಯಿಂ ಆಯುಷ್ಯಮುಳ್ಳನಕವು ೧೦

ವಸುಧೆಯೊಳು ವೈದ್ಯರಿಂದೇನಾಹುದೆಂದೆನುತ
ಎಸೆವ ಪಂಚಾಕ್ಷರವ ಜಪಿಸುತ್ತ ಜಿಹ್ವೆಯೊಳ್
ಭಸಿತ ಪಾದಾಂಬು ಶಿವನಿರ್ಮಾಲ್ಯಗಳನಿಂದು ಸೇವಿಸುವುದೆಂದೆನುತಲಿ
ಅಸಮಾಕ್ಷನವತಾರನೀಯಲತಿಭಕ್ತಿಯಿಂ
ವಸುಧೀಶನಾತ್ಮಜಂ ಕೈಕೊಂಡು ಭುಂಜಿಸಲ್
ಮಿಸುಪ ನಿರ್ಮಲಪ್ರಭೆಯು ತನ್ನಂತರಂಗದೊಳ್ ಪ್ರಜ್ವಲಿಸಲೇನೆಂಬೆನು ೧೧

ಒಳಗಿರ್ಪ ತಾಮಸೊಬ್ಬುಳಿ ಪೊಣ್ಮಿತೆಂಬಂತೆ
ಮಿಳಿತ ಕಲ್ಮಷಗರಳಕರ್ಕಟದ ರೂಪಿನಿಂ
ದಿಳೆಯೊಣ್ಮಿಸುಕುಮಾರಕನ ವದನದಿಂ ಬೀಳ್ವುದೇನೆಂಬೆನದ್ಭುತವನು
ಥಳಥಳಿಪ ದಿವ್ಯಾಂಗನಾಗಿ ಮಹಲಿಂಗಪ
ನ್ನಳಿನಕ್ಕೆ ನಮಿಸಲ್ಕೆ ಕೇದಾರಭಾವಾಖ್ಯ
ಬಳಿಕ ಮಾಲೋಜಿ ಭೂವರಮುಖ್ಯ ಸರ್ವಜನ ನೋಡುತ್ತ ಕೌತುಕದೊಳು ೧೨

ಮಾಲಿಂಗವುನಿವರನ ಮಹಿಮೆಗಳ ಬಣ್ಣಿಸುತ
ಮಾಲೋಜಿ ಮಹರಾಜ ಸಂತೋಷಜಲಧಿಯೊಳ
ಗಾಳುತ್ತಮಿರೆ ಮಂತ್ರಿ ಮಹನಿಯರು ತಮತಮಗೆ ನಮಿಸುತ್ತ ಕೀರ್ತಿಸುತಿರೆ
ಪಾಳಿಯಿಂದಾರಾಜ ಸುಕುಮಾರ ಭಕ್ತಿಯಿಂ
ಬಾಲಚಂದ್ರಕಿರೀಟ ಚಿದ್ರೂಪ ಜಯ ಜಯತು
ನೀಲ ಪಿಂಗಲ ಜಟಾಪಟಲಶೋಭಿತಮೌಳಿ ಜಯಜಯತು ಎಂದೆನುತಲಿ ೧೩

ದೇವ ಘೋರ್ಪಡೆಯರಸ್ವಯಕೆ ಸಂಜೀವನಂ
ನೀವೆಂಬುವಾಕ್ಯಮಿದು ಪ್ರತ್ಯಕ್ಷಮಾಯ್ತೆಮಗೆ
ಭೂವಲಯದಲಿ ವೈದ್ಯರಿಗೆ ದುರ್ಲಭವದಾದ ಕಲ್ಮಷದ ಘನರೋಗವು
ಭಾವಿಸಲು ಭಸ್ಮಪ್ರಸಾದ ಪಾದಾಂಬುಗಳ
ಸೇವನೆಯ ಬಲದಿಂದೆ ನಷ್ಟಾಯ್ತು ಹೃದಯದೊಳ್
ತೀವಿರ್ದ ಜ್ಯೋತಿಯಂ ನೆರೆ ಕಂಡು ಧನ್ಯನಾದೆನು ನಿಮ್ಮ ಕಾರುಣ್ಯದಿಂ ೧೪

ಆ ಮಹಾಪರಮಪ್ರಸಾದಮಹಿಮೆಯನೆನಗೆ
ಪ್ರೇಮದಿಂ ಪೇಳ್ದು ಪಾಲಿಪುದೆಂದು ಬಿನ್ನೈಪ
ಭೂಮೀಶನಾತ್ಮಜನ ಕರುಣಾವಲೋಕನದಿ ನೋಡುತ್ತ ಮಹಲಿಂಗನು
ರಾಮನರಸುತ್ರಾಮ ಮೊದಲಾದ ಗೀರ್ವಾಣ
ಸ್ತೋಮಸಂತತಿ ಬಿಡದೆ ಶಿವಪ್ರಸಾದವ ನಂಬಿ
ರಾಮಣೀಯಕ ಮುಕ್ತಿಯಂ ಪಡೆದರೆಲೆ ಮಗನೆ ಲಾಲಿಪುದು ಭಯಭಕ್ತಿಯಿಂ ೧೫

ದಿವ್ಯನಿಗಮಾಗಮ ಪುರಾಣ ಶಾಸ್ತ್ರಂಗಳೊಳ್
ಸೇವ್ಯಮಪ್ಪಸಮ ಪ್ರಸಾದವೇ ಘನವೆಂದು
ಭವ್ಯಮನುಮುನಿಗಳೆಲ್ಲರು ಬಿಡದೆ ಭುಂಜಿಸುತ ದೇವತ್ವವನೆ ಪಡೆದರು
ನವ್ಯ ಶಿವನಿರ್ಮಾಲ್ಯಗಳ ತಳೆದು ಮಂಡೆಯೊಳ್
ಭವ್ಯ ಮುರಹರಬ್ರಹ್ಮಸುರಪಾದಿ ಗೀರ್ವಾಣ
ರವ್ಯಯದ ಮಹಪದವಿಯನು ಪಡೆದರೆಲೆ ಮಗನೆ ಬಣ್ಣಿಸುವರಾರಿಳೆಯೊಳು ೧೬

ಮಾರಹರನಂಘ್ರಿಜಲನಿರ್ಮಾಲ್ಯಗಳನಳಿದು
ಮಾರುತನು ಮೆಲ್ಲನೈತರುತಿರಲು ಫಣಿರಾಜ
ವಾರದಿಂ ಸೇವಿಸುತ ಪರಮ ಸಾಮರ್ಥ್ಯಮಂ ಪಡೆದೊಡನೆ ಭೂಭಾಗದಾ
ಭಾರಮಂ ತಲೆಗಳೋಳ್ತಾಳ್ದು ದೇವತ್ವ ಸುವಿ
ಚಾರದಿಂ ಸರ್ವಜ್ಞನಾಗಿ ಶಿವ ಕಂಧರದಿ
ಹಾರವಾಗಿರ್ಪನೆಲೆ ಸುಕುಮಾರ ಕೇಳಿನ್ನು ಶೇಷಸೇವನೆ ಫಲವ ನು ೧೭

ದೂರ್ವಾಸ ಶಿವನ ಪಾದಾಂಬು ಪ್ರಸಾದಗಳ
ನಿರ್ವಹಿಸಿ ಭಕ್ತಿಯಿಂ ಸೇವಿಸಿದ ಕಾರಣದಿ
ಸರ್ವಋಷಿಜಾಲದೊಳ್ ಸಂಪೂಜ್ಯನಾದನೀ ಜಗವರಿಯೆ ಪರಮೇಷ್ಠಿಯು
ಶರ್ವಪ್ರಸಾದವಂ ಭುಂಜಿಸಿಯೆ ಸೃಷ್ಟಿಯನು
ಖರ್ವದಿಂ ನಿರ್ಮಿಸುವ ಕಾರಣಿಕ ಪ್ರಭುವಾಗಿ
ಗೀರ್ವಾಣರೊಳಗಧಿಕನೆಂದೆನಿಸಿ ಮೆರೆದ ತ್ರೈಭುವನದೊಳ್ ಸಿದ್ಧಾಂತವು ೧೮

ಪರಮ ಪ್ರಸಾದ ಪಾದಾಂಬು ನಿರ್ಮಾಲ್ಯಗಳ
ಸರಸಿಜಾಕ್ಷಂ ಪರಶುರಾಮರ್ಕಳುಂ ಬಿಡದೆ
ಹರುಷದಿಂ ಸೇವಿಸಿದ ಕಾರಣದಿ ಸಕಲ ಕರ್ಮನ್ಮುಕ್ತರಾಗುತ್ತಲಿ
ಸುರದಾನವಮಾನವಾದಿಗಳ ಸಂಕುಲಗಳಲಿ
ಪಿರಿಯರೆಂದೆನಿಸುತ್ತ ಬ್ರಹ್ಮಾಂಡಮಧ್ಯದೊಳ್
ಹರನ ಕೃಪೆಯಾಂತು ಲೋಕಾನುಗ್ರಹದ ಕಾರ್ಯಮಂ ತಾಳ್ದರೆಲೆ ಪುತ್ರನೇ ೧೯

ಅಚ್ಯುತಂ ನೆಲೆಸಿರ್ಪ ದ್ವಾರಕಾಕ್ಷೇತ್ರಕ್ಕೆ
ಸಚ್ಚಿದಾನಂದ ದೂರ್ವಾಸಮುನಿ ಬರಲು ಮನ
ಮೆಚ್ಚಿ ಕಂಡೆರಗಿ ಕೈಮುಗಿದು ಸನ್ಮಾನದಿಂ ಕಂಜಾಕ್ಷನಾಕ್ಷಣದೊಳು
ಉಚ್ಚವದಿ ತನ್ನ ರಾಜಾಲಯಕೆ ಕರೆದೊಯ್ದು
ನಿಶ್ಚಲದ ಭಕ್ತಿಯಿಂ ಬಿಡದೆ ಬಿನ್ನೈಸಿ ಬಳಿ
ಕಚ್ಚಿ ಪರಮಾನ್ನಮಂ ಪಾಯಸಗಳಂ ನೀಡಿ ಸೇವಿಸುತ ಸಂತಸದಲಿ ೨೦

ಉಳಿದ ಪ್ರಸಾದಮಂ ಭುಂಜಿಸೆಂದೆನುತ ಮುನಿ
ನಳಿನಾಕ್ಷಗೀಯಲ್ಕೆ ಕೈಕೊಂಡು ಭಕ್ತಿಯಿಂ
ತಳೆದು ಸರ್ವಾಂಗದೊಳು ವಜ್ರಮಯನಾದನೀ ಜಗದೊಳಗೆ ಸಿದ್ಧಾಂತವು
ಬಳಿಕ ತತ್ಶೇಷದ ಮಹತ್ವವನು ಬಣ್ಣಿಪಡೆ
ನಳಿನಭವಗರಿದೆಂದು ಮಹಲಿಂಗ ಮುನಿರಾಜ
ನಿಳೆಯಾಣ್ಮಕುವರಂಗೆ ಸೂಚಿಸುತ್ತಿರ್ದನೆಲೆ ಗಿರಿಜಾತೆ ಕೇಳೆಂದನು ೨೧

ಜಂಗಮದ ಶೇಷ ಶಫರಂಗೆ ಸಮನಿಸಲಾಗಿ
ತುಂಗ ಧೀವರನದನು ಕೊಂಡು ಭುಂಜಿಸೆ ಬಳಿಕ
ಹಿಂಗದೀರ್ವರ್ಗೆ ಶಿವಪದವಾಯ್ತು ಮುನ್ನೋರ್ವ ಖೇಟಕೀ ಗಂಧರ್ವನು
ಲಿಂಗಕ್ಕೆ ಚರಪ್ರಸಾದವು ಸಲ್ಲದೆನುತಂತ
ರಂಗದೊಳ್ ಸಂಶಯಂಗೊಳಲು ಶೂಕರನಾಗಿ
ಭಂಗದಿಂ ಬಾಳುತಿರಲೊಂದಿನದಿ ತತ್ಶೇಷ ಸಿದ್ಧಿಸಲು ಸೇವಿಸುತಲಿ ೨೨

ಕನಕಮಯವಾಗಿ ಕಂಗೊಳಿಸುತ್ತ ಶೂಕರನ
ತನುವು ಪ್ರಜ್ವಲಿಸುತಿರಲದ ನೋಡುತದರೊಡೆಯ
ನನುಪಮದ ರೋಗ ಸಮನಿಸಿತೆಂದು ಭರದಿಂದೆ ಬರಗುಡುವಿನಿಂ ಬರೆಯಲು
ಮಿನುಗುತಾ ಬರಗುಡಂ ಕಲಧೌತಮಯವಾಗೆ
ಜನಪತಿಯು ಕೇಳುತ್ತ ಕಾಬೊರ್ನ್ನಗಳ ದಿವ್ಯ
ಘನತರದ ಹಾರಿಗಳ ಕಾಸಿ ಸೋಂಕಿಸಲೆಲ್ಲ ಕಡವರದ ರೂಪಾದವು ೨೩

ಕಾಸುತಿರಲಸುವು ಶಿವಪುರಕೆ ಪೋಗಲ್ಕದರ
ಮೂಸ ನೆತ್ತರ ತೀರುವನ್ನೆಬರ ಸೋಂಕಿಸುತ
ಆಸುರದಿ ಚೆಂಬೊನ್ನ ಮಾಡಿ ಜನಮರಿಯೆ ಭೂಪಾಲನಾ ಕಾಲದೊಳಗೆ
ಭಾಸುರದ ತಕ್ಕಿಟಿಯ ಮುದ್ರೆಗಳನೊತ್ತಿ ಸುವಿ
ಲಾಸದಿಂ ನಾಣ್ಯಕ್ಕೆ ವರಹನಾಮವನಿಟ್ಟ
ನಾ ಸುಶೇಷದ ಮಹಿಮೆಯಂ ಬಿಡದೆ ಬಣ್ಣಿಪಡೆ ಮಹಶೇಷಗರಿದೆಂದನು ೨೪

ಚಾಳೋಕ್ಯಭೂವರನ ಮಂದಿರದಿ ಒಂದುದಿನ
ಭಾಳಾಕ್ಷನವತಾರ ರೇವಣಾಸಿದ್ಧೇಶ
ಪಾಳಿಯಿಂ ಬಂದು ಭಿಕ್ಷವ ಬೇಡೆ ಬಿಜ್ಜಳಂ ಕುದುರಿಂಗೆ ನೆರೆಕುದಿಸುವಾ
ಬೀಳಮುದ್ದಿಯನು ನೀಡೆಂದೆನಲು ಚರರು ಕೈ
ತಾಳದೆಂದೆನುತ ಸಟ್ಟುಕದಿಂದ ಹಾಕೆ ಕರು
ಣಾಳು ಕೈಯಾಂತು ನಸುನಗುತ ಶೇಷಮಿದೆಂದು ಸೇವಿಸುತ ತದ್ರವದಲಿ ೨೫

ಬಿಜ್ಜಳನ ಗರ್ವಮಂ ಬಿಡಿಸಬೇಕೆಂದೆನುತ
ಪಜ್ಜಳಿಪ ಕಸವರದ ಚಾವಡಿಯ ನಡುವಣದ
ಬಜ್ಜರದ ಕಂಬಕ್ಕೆ ಕೈಯ್ಯೊರಸಲಾಕ್ಷಣದೊಳೇನೆಂಬೆನಚ್ಚರಿಯನು
ಸಜ್ಜೆವನೆ ಮೊದಲಾದ ರಾಜಾಲಯಂ ಸುಡುವ
ಕಜ್ಜವನು ಕಾಣುತ್ತ ಚಾಳೋಕ್ಯಸಿದ್ಧಪತಿ
ಪಜ್ಜಳಜಕೆರಗುತೆನ್ನಪರಾಧ ಸೈರಿಪುದು ಗುರುಕುಲಾಂಬುಧಿ ಚಂದ್ರಮ ೨೬

ಎಂದು ಬಿನ್ನೈಸುತಿರೆ ರೇವಣಾಸಿದ್ಧೇಶ
ನಂದು ಕಾರುಣ್ಯದಿಂ ಚಾಳೋಕ್ಯಭೂವರನ
ಮಂದಿರವ ಮುನ್ನಿರ್ದ ತೆರದಿಂದೆ ನಿರ್ಮಿಸುತ ಪಡಿಯಕ್ಕಿಗಳ ತರಿಸುತ
ಚೆಂದದಿಂದೋಗರವ ಮಾಡಿಸುತ ತತ್ಪುರದ
ಸಂದ ಮಾನವರಿಗೆಲ್ಲುಣಿಸಿ ನೆರೆ ಮೆರೆದ ತಾ
ನೆಂದೆನುತ ಮಹಲಿಂಗ ಗುರುವರಂ ಪೇಳ್ದನಾ ಭೂಕಾಂತತನುಜಾತಗೆ ೨೭

ಇನಿದಾದ ಹುಗ್ಗಿಯನು ತಂದೀಯೆ ಬಾಂಧವರು
ವನಜಾಕ್ಷಿ ಚೋಳಕ್ಕ ಸವಿನೋಡಿ ಮೋಹದಿಂ
ಮನಸಿಜಾಂತಕಭೀಮನಾಥಗುಣಿಸೆಂದೆನುತ ನಿಜಸಖಿಯು ಕೈಗೀಯಲು
ಮನವೊಲಿದು ಬಂದವಳು ದೇಗುಲದಿ ನೆರೆದಿರ್ದ
ಜನಸಂದಣಿಯ ಕಂಡು ಬಂದು ದೇಗುಲದೆಡೆಗೆ
ಧ್ವನಿ ಮಾಡುತಲೆ ದೇವ ಭಾವ ಭೀಮೇಶ ನಿನಗಕ್ಕ ಹುಗ್ಗಿಯ ಕಳುಹಿದಳ್ ೨೮

ನಂಜಿ ಸವಿನೋಡಿ ತಾನುಣ್ಣದೀಕ್ಷಣದಲ್ಲಿ
ನಂಜುಗೊರಳನಿಗಿತ್ತು ಬಾ ಎಂದು ಕಳುಹಿದಳು
ಕಂಜಾಕ್ಷಿಮೋಹ ತಾನೆಂತೊ ನಿನ್ನಯ ಮೇಲೆ ಬಾಯೆನುತ ಧ್ವನಿಮಾಡಲು
ಮಂಜುಲದ ನುಡಿಗೇಳಿ ಭೀಮೇಶ್ವರಂ ಬಂದು
ಭುಂಜಿಸುತ ಬಟ್ಟಲವ ನುಂಗಲಿಕೆ ಭೀಮೆ ತಾ
ನಂಜುತಿರೆ ದೇಗುಲದೊಳಿಹ ಪರಮ ಪಿಂಜರಿಯ ಚಷಕವನು ಕೊಡಲಾಕ್ಷಣಂ ೨೯

ಕತ್ತಲೆಯ ಮರೆಯಲ್ಲಿ ಕೊಡಲು ಭೀಮೇಶ್ವರಂ
ಗೊತ್ತು ತಿಳಿಯದೆ ತಂದು ಮಂದಿರದಿ ಮಡಗಲ್ಕೆ
ಹೊತ್ತರೆದ್ದಾಗ ಪೂಜಾರಿಗಳು ದೇಗುಲದ ಬಟ್ಟಲವನದು ಕಾಣದೆ
ಎತ್ತಪೋದುದೊ ಎಂದು ಪುರದಲ್ಲಿ ಪುಡುಕುತಿರೆ
ವೃತ್ತ ಕುಚೆ ಚೋಳಕ್ಕನಾಲಯದಿ ಕಾಣುತ್ತ
ಎತ್ತಣಿಂ ಬಂದುದೀ ಬಟ್ಟಲಂ ಪೇಳೆನಲು ಭೀಮೆ ತಾನಿಂತೆಂದಳು ೩೦

ಭೀಮೇಶ್ವರಂ ಪುಗ್ಗಿಯುಂಡು ಬಟ್ಟಲನುಂಗಿ
ಪ್ರೇಮದಿಂದಿತ್ತನಿದ ಕತ್ತಲೆಯ ಮರೆಯಲ್ಲಿ
ಹೇಮಚಷಕವಿದೆಂದು ತಿಳಿಯದಲೆ ನಾ ತಂದೆನೆನೆ ಕೋಪದಿಂ ಪೂಜಕರ್
ಭೀಮೆ ತುಡುಗುಣಿ ನಿನ್ನ ಮಾತಿಗಾರ್ಮೆಚ್ಚುವರ್
ಭೂಮಿಯೊಳಗಚ್ಚರಿಯು ಬರಿದೆ ಪುಸಿಯಲು ಬೇಡ
ಭೀಮೇಶನಿಂ ಸಾಕ್ಷಿನುಡಿಸೆಂದು ಗರ್ಜಿಸಲು ದೇಗುಲಕೆ ಬಂದಾಕ್ಷಣಂ ೩೧

ರಂಗಮಂಟಪದೆಡೆಗೆ ಬಂದು ನಿಂದಾಕ್ಷಣದಿ
ಅಂಗಜಾಂತಕ ಭಾವ ಭೀಮೇಶ ಸನ್ಮಾನ
ಭಂಗಮಂ ಮಾಡುವರು ಪೂಜಕರು ಬಟ್ಟಲದ ಕಟ್ಟಲೆಯ ಪೇಳೆಂದೆನೆ
ನುಂಗಿರ್ದ ಬಟ್ಟಲವ ಸರ್ವಜನ ನೋಡುತಿರೆ
ಅಂಗಳಕೆ ಒಗೆದು ನಾನಿತ್ತಿಹುದು ಸತ್ಯಮೆನು
ತಂಗವಿಸಿ ಕೂಗಿ ಪೇಳುತ್ತ ಕೈಲಾಸಕ್ಕೆ ಕೊಂಡೊಯ್ದನವರೀರ್ವರಂ ೩೨

ಕಮಲದಳನೇತ್ರೆ ಪಿಟ್ಟವ್ವೆದೋಸೆಗೆ ಬಂದು
ಕಮಲಾಕ್ಷಸಂಪೂಜ್ಯ ಬಿಟ್ಟಿಗೆಯ್ದುದ ನೋಡಿ
ಪ್ರಮುದದಿಂ ಕರಿಕಾಲಚೋಳಾಖ್ಯಭೂವರಂ ನಾನುಣಿಪೆನೆಂದೆನುತಲಿ
ವಿಮಲಭಕ್ಷ್ಯಸುಶಾಕಪಾಕದುಗ್ಧಾಜ್ಯಗಳ
ಸಮುದಯಂಗಳ ಬಳಿಕಲಾಯ್ದುಕ್ಕಿಬೋನಮಂ
ಪ್ರಮಿತ ಮೂಗಂಡಗದ ಮೆಣಸಿನಿಂದೊಡವೆರೆದ ಸಾರದಿಂ ತಣಿಸುತ್ತಲಿ ೩೩

ಈ ಪರಿಯೊಳುಂ ಶಿವಗೆ ನಿತ್ಯನೈವೇದ್ಯಮಂ
ಭೂಪ ತಾನಿತ್ತುಣುವ ನೇಮದಿಂದಿರಲು ನಿಜ
ರೂಪಮಂ ನಿಟ್ಟಿಸುತ್ತಿರಲೊಂದು ರನ್ನಗನ್ನಡಿಯೊಳುರೆ ತೋರುತಿರುವ
ವ್ಯಾಪಿಸಿದ ಕೇಶದೊಳಗೊಂದು ನರೆ ಕಂಡು ಸಂ
ತಾಪಿಸುತ ನಾನಳಿದ ಮೇಲಿನ್ನು ಭೂತಳದಿ
ಮಾಪಸಂಪೂಜ್ಯ ನಿನಗಾರುಣಿಸುವರು ಎಂದು ಮಾನಸದಿ ಚಿಂತಿಸುತಿರೆ ೩೪

ಭೂರಮಣಹಂಕಾರಕೀಡಾದನೆಂದೆನುತ
ಮಾರಹರ ತಾನರಿದು ಚೆನ್ನನಾಲಯ ಸಾರ್ದು
ಸಾರಂಬಕಳ ಸವಿದು ಬಂದು ದೇವಾಲಯದೊಳಾರರಿಯದಂತಿರುತಿರೆ
ಚಾರು ನೈವೇದ್ಯಮಂ ಮುನ್ನಿನೊಲ್ ಮಾಡಿ ಕೆಲ
ಸಾರಿ ಚೋಳಂ ತೆರೆಯನಿಳುಹಿ ದನಿಗೇಳುತಿರೆ
ಕಾರುಣ್ಯಸಿಂಧು ಮುಟ್ಟದೆ ಸುಮ್ಮನಿರೆ ಮರಳೆ ಕಂಡಾಗ ನಿಡುಃಕುತ್ತಲಿ ೩೫

ಚಂಡಿಕಾವರನೇಕೆ ಉಣ್ಣದಿಹನೆನುತ ಭೂ
ಮಂಡಲಾಧಿಪ ಪ್ರಾಣಮಂ ಕೊಡುವೆನೆಂದು ವರ
ಕಂಡೆಯದಿ ತನ್ನ ಗೋಣರಿವುತಿರಲಾಕ್ಷಣದಿ ಶ್ರೀಶೈಲಜಾಕಾಂತನು
ಕಂಡು ಕೈಪಿಡಿದು ಹೋ ಚೋಳ ನಿಲ್ಲೆಂದೆನುತ
ಉಂಡು ಬಂದಿಹೆನು ಮಾದರ ಚೆನ್ನನಾಮನೆಯ
ಲುಂಡಂಬಲಿಯ ತೃಪ್ತಿ ತಲೆಗೇರಿಹುದು ಬಳಿಕ ಮನವಿಲ್ಲ ನೈವೇದ್ಯದಿಂ ೩೬

ಎಂದೆಂಬ ನುಡಿಗರಸ ಮನಮೆಚ್ಚಿ ಚೆನ್ನಯ್ಯ
ತಂದೆ ತಾನೆಲ್ಲಿರ್ಪ ಮಝುಭಾಪು ಭೂತಳದೊ
ಳಿಂದವನ ಹೊಂದಿ ಬಾಳುವೆನು ತೋರೆಂದೆನುತ ಶಿವನ ಬೆಂಬಳಿವಿಡಿವುತ
ಚೆಂದದಿಂದಡಿಗಡಿಗೆ ಬಲಸಹಿತ ನಮಿಸುತ್ತ
ಮುಂದಕ್ಕೆ ನಡೆಗೊಂಡು ಪೊಲಗೇರಿಯತ್ತ ತಾ
ನಂದು ಬರುತಿರೆ ಕಂಡು ಕಡುಭೀತಿಯಿಂದೊಡನೆ ಚಿಂತಿಸುವ ಮಾನಸದೊಳು ೩೭

ಅಂಬಿಕಾವರ ಬಂದು ಪಸಿವಿನಾತುರದಿಂದೆ
ಪಂಬಲಿಸಿ ಹರಿವಾಣದೊಳಗಿಂದು ನನ್ನೊಡನೆ
ಅಂಬಲಿಯನುಂಡಿರ್ದ ವಾರ್ತೆಯನದಾರೀಗ ಪೇಳಿದರೊ ತತ್ಕಾರಣಂ
ಬೆಂಬಿಡದೆ ಶಿವನೊಡನೆ ಬಂದೆನ್ನ ಭಂಜಿಸುವ
ಕುಂಭಿನೀಶಂ ಎಂದು ಚೆನ್ನಯ್ಯ ನಡುಗುತಿರೆ
ಮುಂಬರಿದು ಬಂದರಸ ಭಕ್ತಿಯಿಂ ನಮಿಸುತಿರಲಾಗಯ್ಯನಿಂತೆಂದನು ೩೮

ಕೀಳು ಕುಲದಲಿ ಜನಿಸಿ ಭೂತಳದಿ ನಾನು ನಿ
ನ್ನಾಳುತನದಲ್ಲಿರ್ದು ಕಂಪಣವನಡಕುತ್ತ
ಬಾಳುವೆನು ಭೂಪಾಲ ಸತ್ಕುಲಜರೀ ತೆರದಿ ನಮಿಸುವದು ನೀತಿಯಲ್ಲ
ಭಾಳಾಕ್ಷನೊಲಿದನೇ ಧನ್ಯನೀಜಗದೊಳಗೆ
ಕೇಳೆನುತ ತರ್ಕೈಸಿ ನನ್ನಯ್ಯ ಚೆನ್ನಯ್ಯನ
ಆಳಾಗಿ ಬದುಕುತ್ತ ಧನ್ಯನಾಗುವೆನೆಂದು ಕೊಂಡಾಡುತಿಂತೆಂದನು ೩೯

ಚೆನ್ನಯ್ಯ ನಿನ್ನಾಳುಗೊಂಡೆನ್ನ ತಪ್ಪುಮಂ
ಮನ್ನಿಪುದು ಮುದದಿಂದೆ ಮುಂಗಾಣದಿಹ ದುಷ್ಟ
ಘನ್ನ ಘಾತುಕನೆಂದು ಭಯಭಕ್ತಿಯಿಂ ಬಿಡದೆ ಚೋಳೇಂದ್ರಭೂಪಾಲನು
ಬಿನ್ನೈಸಿ ಭದ್ರಜನ ಕಂಧರದಿ ಶಿವಸಹಿತ
ನನ್ನಿಯಿಂ ಕುಳ್ಳಿರಿಸಿ ಮೆರೆಸುತ್ತ ದೇಗುಲಕೆ
ಬಿನ್ನಣದಿ ಬರೆ ಸರ್ವಜನ ನೋಡುತಿರಲಾಗ ಶ್ರೀಶೈಲಜಾವಲ್ಲಭಂ ೪೦

ನಂದಿ ರೇಣುಕ ಮುಖ್ಯ ಪ್ರಮಥಗಣ ಸಹಿತ ಸುರ
ದುಂದುಭಿಯು ಮೊಳಗುತಿರೆ ಪುಷ್ಪವೃಷ್ಟಿಯಗರೆದು
ಚೆಂದದಿಂ ಚೆನ್ನಯ್ಯ ಕರಿಕಾಲಚೋಳರಂ ಮಣಿಖಚಿತ ಪುಷ್ಪಕದೊಳು
ಕಂದರ್ಪಹರನು ಕುಳ್ಳಿರಿಸುತ್ತ ಕೈಲಾಸ
ಮಂದಿರಕೆ ಕರೆದೊಯ್ದನೆಲೆ ರಾಜಸುಕುಮಾರ
ಸಂದ ಶೇಷದ ಮಹಿಮೆ ಬಣ್ಣಿಪಡೆ ಬ್ರಹ್ಮಾದಿಗಳಿಗರಿದು ಭೂತಳದೊಳು ೪೧

ಇನ್ನೊಂದು ಸತ್ಕಥೆಯ ಲಾಲಿಸೆಲೆ ಸುಕುಮಾರ
ಮುನ್ನೊರ್ವ ವೃಢಮತಾಂಬುಧಿಸೋಮ ಸುಗುಣಸಂ
ಪನ್ನ ಪಾವನಮೂರ್ತಿ ಪಾಪತಿಮಿರಪತಂಗ ಖಲಜನಾಂಬುಧಿಬಾಡಬಾ
ಸನ್ನುತ ಶಿವಾಗಮಜ್ಞಾನಿ ಶರಣಾಳಿವರ
ಪನ್ನಳಿನಜಲಸುಪ್ರಸಾದಸೇವಿತಶೀಲ
ಪನ್ನಂಗಧರಭಕ್ತಕುಲತಿಲಕನೆಂದೆನಿಸಿ ಮೆರೆದಿರ್ದನೀ ಜಗದೊಳು ೪೨

ಬಿಬ್ಬಿಬಾಚರಸನೆಂಬಾಖ್ಯಾನದಿಂ ಬಿಡದೆ
ಗೊಬ್ಬುರದ ಮಧ್ಯದೊಳ್ ನೆಲಸಿರ್ದನಾರತಂ
ಸಬ್ಬ ಭಕ್ತರ್ಗಣಾರಾಧನೆಯ ಮಾಳ್ಪಲ್ಲಿ ತಾಂ ಪೋಗಿ ಭಯಭಕ್ತಿಯಿಂ
ಸಬ್ಬನ ಪ್ರಸಾದಮಂ ಕೊಂಡು ಬಂಡಿಲಿ ತುಂಬಿ
ಉಬ್ಬಿ ಧೌತಾಂಬರವ ಮುಚ್ಚುತ್ತ ತಂದೊಡನೆ
ಹಬ್ಬ ನಮಗಿಂದೆನುತ ನಂಬಿ ಸೇವಿಸುತಿರ್ದನಾ ಭಕ್ತನತಿಶಯದಲಿ ೪೩

ಈ ಪರಿಯೊಳುಂ ನಿತ್ಯನೇಮದೊಳಗಿರುತಿರಲು
ಆ ಪುರದ ಕೂರಬಾಡಬರೆಲ್ಲ ಒಂದು ದಿನ
ಕೋಪದಿಂ ಕುಲಭ್ರಷ್ಟನಿವ ಮಾಳ್ಪ ಕಜ್ಜಮಂ ಬಿಡಿಸಬೇಕೆಂದೆನುತಲಿ
ಪಾಪಿಗಳು ತನ್ನಗದ ದ್ವಾರದೊಳ್ ನಿಂತಿರಲು
ಮಾಪ ಶರಭಕ್ತನಾ ಸಮಯದಲಿ ಬಂಡಿಯೊಳ್
ತಾಪತ್ರಯಾರಣ್ಯದಾವಾಗ್ನಿ ಶೇಷವಂ ತರುತಿರಲು ಸಂಭ್ರಮದೊಳು ೪೪

ನೆರೆದು ವಿಪ್ರಾಧಮರು ನೋಡುತೆಲೆ ಬಾಚರಸ
ತರುಬು ಬಂಡಿಯನಿಂದು ಕುಲಭ್ರಷ್ಟ ನೀನೆಮ್ಮ
ಪುರವ ಪೊಗದಿರು ಸರ್ವರುಂಡೆಂಜಲವ ತಂದು ಪೊಲೆಗಲಿಸುವದು ನೀತಿಯೆ
ಹರಹರಮಹಾದೇವ ಜನ್ಮಗಿರಿದಂಭೋಳಿ
ದುರಿತವನದಾವಾಗ್ನಿ ಶರಣಸಂಜೀವನಿಯಿ
ಪರಮಪ್ರಸಾದಮಂ ಪರಿಕಿಸದೆ ನಿಂದಿಸಿದ ಫಲವನುಣ್ಣುವುದೆನ್ನುತಾ ೪೫

ಬಂಡಿಯೊಳಗಿರ್ದ ಶೇಷವನಣುವಿನಷ್ಟು ಕರ
ಪುಂಡರೀಕದಿ ತೆಗೆದು ಬಾಚರಸ ಪುರದತ್ತ
ಚಾಂಡಾಲ ಬ್ರಾಹ್ಮಣರು ನೋಳ್ಪಂತೆ ಸೂಸಲ್ಕದೇನೆಂಬೆನದ್ಭುತವನು
ಕೆಂಡಗಳನುಗುಳುತ್ತ ತತ್ಪುರವನೊಳಕೊಂಡು
ಭಂಡಮಾಗುತ್ತ ಕಾಲಾಗ್ನಿಯೆಂಬಂದದಿಂ
ಕಂಡಕಡೆಗಾಗಿ ಚಂಡಾಲರಂ ಸುಡುತಿರಲು ತಮತಮಗೆ ವಿಪ್ರಾಧಮರ್ ೪೬

ಬಿಟ್ಟೋಡುತಿರೆ ಜುಟ್ಟ ಜನಿವಾರಗಳು ಸುಟ್ಟು
ಮಟ್ಟ ಮೊದಲಾದ ಸಾಲಿಗ್ರಾಮ ಪೆಟ್ಟಿಗೆಯ
ಕೊಟ್ಟಿಗೆಯು ಕೆಟ್ಟುರಿವುತಿರೆ ಕಂಡು ಬಟ್ಟೆಯಾದೀತೆಂದು ಬಾಯ್ಬಿಡುತಿರೆ
ಕಟ್ಟಳಿದ ಕೇಸುರಿಯು ಸುತ್ತುಗಟ್ಟೊರುವಂ
ಪಟ್ಟುರಿಸುತಿರೆ ಬಟ್ಟೆಗಾಣದಲೆ ಹೊರಬೀಳೆ
ಅಟ್ಟಹಾಸಂಗೈದು ನಿಟ್ಟಿಸುತ್ತಿರ್ದನಾ ಬಾಚರಸನಾ ವಿಪ್ರರ ೪೭

ಎತ್ತನೋಡಿದಡತ್ತ ಬಿತ್ತರದ ಜ್ವಾಲೆ ಬೆಂ
ಬತ್ತಿ ಬರೆ ಚಿತ್ತದೊಳ್ ಮತ್ತೆ ಕಳವಳಿಸುತ್ತ
ಸತ್ತೆವೋ ಎಂದಿಳೆಗೆ ಬೀಳುತ್ತಲೇಳುತ್ತ ಒತ್ತರಿಸಿ ತತ್ತರಿಸುತ
ಉತ್ತಮೋತ್ತಮ ನಿಮ್ಮ ವೃತ್ತಿಯನು ತಿಳಿಯದಿಹ
ಕೃತ್ರಿಮರ ಪಾಲಿಸೆನೆ ಗರಳಾಗ್ನಿಯಿಂ ಬೆಂದು
ವೃತ್ತಹರ ಮುಖ್ಯ ಸುರರಂ ನೋಡಿ ಮೃತ್ಯುಹರ ನಕ್ಕಂತೆ ನಸುನಗುತಲಿ ೪೮

ಬಿಬ್ಬಿ ಬಾಚರಸನಭಯವನಿತ್ತು ವಿಪ್ರರಿಗೆ
ಹಬ್ಬಿರ್ದ ಶೇಷಾಗ್ನಿಯಂ ಬಯಲಗರೆದುರಿದ
ಗೊಬ್ಬರವ ಮುನ್ನಿನಂತಿರದೆ ನಿರ್ಮಿಸಲಾಗ ಸರ್ವಜನ ನೋಡುತ್ತಲಿ
ಸಬ್ಬ ಮುಪ್ಪುರಗಳಂ ಸುಟ್ಟಬಳಿಕಾ ತೆರದಿ
ನಿಬ್ಬರದೊಳೆಸಗಲರಿದಾಯ್ತು ಮಝಭಾಪು ನೀ
ನೊಬ್ಬ ಜಗದಾರಾಧ್ಯನೆಂದೆನುತ ಬಾಡಬರು ಬಣ್ಣಿಸುತ್ತಿರಲಾಕ್ಷಣಂ ೪೯

ಗಿರಿಜಾತೆ ಸಹಿತಂದು ಪರಮೇಶ ಮೈದೋರಿ
ಸುರರು ಪೂಮಳೆಗರೆದು ಸರ್ವಜನ ತಿಳಿವಂತೆ
ವರ ಬಿಬ್ಬಿ ಬಾಚರಸರಂ ಬಿಡದೆ ಮಣಿಖಚಿತ ಪುಷ್ಪಕದೊಳಿರಿಸುತ್ತಲಿ
ಪರಮ ರಜತಾಚಲಕೆ ಕೊಂಡೊಯ್ದರೆಂದೆನಲು
ನಿರಘಪ್ರಸಾದಮಹಿಮೆಯನಾರು ಬಣ್ಣಿಪರು
ಧರಣೀಶಸುಕುಮಾರ ಲಾಲಿಸೆಂದೆನುತಾಗ ಮಹಲಿಂಗಮುನಿ ಪೇಳ್ದನು ೫೦

ವಸುಧೀಶ ಬಿಜ್ಜಳಂ ವೈಹಾಳಿಯಿಂ ಪೋಗಿ
ಬಸವರಸನೊಡಗೊಂಡು ಬರುತಿರಲು ಪುರದಲ್ಲಿ
ಅಸಮಾಕ್ಷ ಭಕ್ತನೋರ್ವಂ ತನ್ನ ಕುವರಂಗೆ ಬಸವನಾಮವನಿಟ್ಟಿರೆ
ಒಸೆದು ತತ್ಕಾಲದಲಿ ಬಸವಸುಕುಮಾರನೀ
ಮಿಸುಪ ಪ್ರಸಾದಮಂ ಸೇವಿಸಲ್ ಬಾರೆನಲು
ಅಸವಸದಿ ತಧ್ವನಿಯ ಕೇಳುತಂದಳವಿಳಿದು ಬಂದೊಡನೆ ಸೇವಿಸುತಲಿ ೫೧

ತಡಮಾಡದಾಕ್ಷಣದಿ ಮಂತ್ರಿಸಂಕುಲತಿಲಕ
ಪೊಡವಿಪತಿಕೂಡಿ ಬರುತಿರೆ ರಾಜಮಾರ್ಗದೊಳ್
ವಡಿ ಮಾರುತಿರೆ ಕಂಡು ಬಿಜ್ಜಳಂ ಬಾಲೆಯದ ಮೊನೆಯಿಂದ ಚುಚ್ಚುತ್ತಲಿ
ಮೃಡಭಕ್ತ ಬಸವಕೋ ಶಿವಪ್ರಸಾದವನೆನಲು
ಕಡುಭಕ್ತಿಯಿಂದ ಶರಣಾರ್ಥೆಂದು ಕೈಕೊಳಲು
ಬಿಡದೆ ಪರಿಹಾಸ್ಯದಿಂದದನರಿದು ಭೂಕಾಂತ ನಸುನಗುತ ಮತ್ತೊಂದನು ೫೨

ನೇಜಿಯಿಂದೀಡಿರಿದು ಬಸವ ಕೋ ವಡಿಯನೆನೆ
ರಾಜ ನೀಂ ಖಾತಿಸೆನಲರಮನೆಗೆ ಬರೆ ಬಸವ
ರಾಜನಾ ಸಭೆಯ ಮಧ್ಯದಿ ಕುಳಿತು ಶಿವಶೇಷವೆಂದೊಡೆಯ ಬಲಗೈಯಲಿ
ನೈಜದಿಂದಲ್ಲೆಂದ ಭಕ್ಷ್ಯನೆಡಗೈಯೊಳಗೆ
ವಾಜಿಯಿಂ ಪಿಡಿಯಲ್ಕೆ ಒಂದೆ ರೂಪೆಲೆ ಮಂತ್ರಿ
ಸೋಜಿಗವಲಾ ನಾಮಭೇದದಿಂದೇನಹುದು ಪೇಳೆನಲು ನಸುನಗುತಲಿ ೫೩

ಅರಸ ಕೇಳ್ ಶೇಷವೆಂದಾಕ್ಷಣಕೆ ಸುಧೆಯಹುದು
ನಿರುತದಿಂ ಪೂರ್ವನಾಮದಿ ಕರೆಯೆ ಪುಳವಹುದು
ಪರಿಕಿಸೆಂದೆನೆ ವಾಮಕರದ ವಡೆಯಿಂ ಪುಳುಗಳುದುರುತಿರೆ ಕೈದೊಳೆವುತ
ಹರಶೇಷವೆಂದಸಮ ಭಕ್ಷ್ಯಪೀಯೂಷಮಯ
ದಿರವಿನಿಂ ಪರಿರಮ್ಯಮಾಗಿರಲು ನೋಡುತ್ತ
ಬೆರಗಾಗಿ ಬಿಜ್ಜಳಂ ತಪ್ಪೆಂದು ಸೈಗೆಡೆದು ಮನ್ನಿಸಿದನಾ ಮಹಿಮನಂ ೫೪

ಕೃತಕದಿಂ ಅಕ್ಕನಾಗಮ್ಮಗಳನೊಳಗಿರಿಸಿ
ಕ್ಷಿತಿಪ ಬಸವೇಶನಂ ಕರೆವುತೀ ಮಂದಿರದಿ
ಪ್ರತಿರಹಿತ ಶಿವಪ್ರಸಾದಮದುಂಟು ಕೊಳ್ಳೆನಲು ಒಳಹೊಕ್ಕು ನೋಡುತ್ತಿರೆ
ಮತಿವಂತೆ ಅಕ್ಕನಾಗಮ್ಮಗಳು ನೆಲೆಸಿರಲು
ರತಿಯಿಂದೆ ಶಿಶುವಾಗಿ ಸ್ತನಪಾನವಂ ಮಾಡು
ತತಿಶಯದಿ ಮಲಗಿರಲು ಕಂಡು ಬಿಜ್ಜಳರಾಜ ವಿಸ್ಮಯದಿ ಕೊಂಡಾಡುತ ೫೫

ಘನಮಹಿಮ ಬಸವರಸ ಎನ್ನಯಪರಾಧವಂ
ಮನವೊಲಿದು ಸೈರಿಪುದು ಮತಿಹೀನನೆಂದು ಕರ
ವನಜಮಂ ಮುಗಿದು ಕೊಂಡಾಡುತಿರೆ ಕಾರುಣ್ಯದಿಂ ನೋಡಿ ಸಂತೈಸುತ
ಜನಪತಿಗೆ ನಂಬುಗೆಯನಿತ್ತು ಈ ಜಗದೊಳಗೆ
ಮನಸಿಜಾಂತಕಭಕ್ತ ದಂಡಾಧಿಪತಿ ಮೆರೆದ
ನೆನುತ ಮಹಲಿಂಗಮುನಿಪೋತ್ತಮಂ ಸೂಚಿಸಿದ ಕೇದಾರಭಾವಾಖ್ಯಗೆ ೫೬

ಧರಣೀಶನನುಚರರು ಬಂದು ದಣ್ಣಾಯಕನ
ಕರೆಕೊಂಡು ಪೋಗುತಿರೆ ಕಂಡು ಕಕ್ಕಯ್ಯಗಳು
ಕರಗಳಂ ಮುಗಿಯುತೆಲೆ ಬಸವರಸ ಶಿವಪ್ರಸಾದವ ಕೊಂಡು ಪೋಗೆಂದೆನೆ
ಭರದಿಂದೆ ಬರ್ಪೆನೆಂದೆನುತ ರಾಜಾಲಯದ
ವರ ಕಾರ್ಯಮಂ ತೀರ್ಚಿ ಮರಳಿಬರೆ ಕದವನಿ
ಕ್ಕಿರೆ ಕಂಡು ಪನ್ನೆರಡು ಬರಿಸನ್ನ ಕಾಯೆ ಬಳಿಕೊಂದು ದಿನ ಪಿಪ್ಪೀಲಿಕಂ ೫೭

ಶಿವಶೇಷಸಿಕ್ತವನು ಕೊಂಡು ಬರೆ ಕಂಡದನು
ನವಶರ್ಕರೆಯನಿತ್ತು ಶರಣೆಂದು ಕೈಕೊಂಡು
ಪ್ರವಿಮಲಾನಂದದಿಂದಂಶುಕದ ಸೆರಗಿನೊಳ್ ಭಕ್ತಿಯಿಂ ಬಂಧಿಸುತಲಿ
ತವಕದಿಂ ಬಂದು ನೈಜಾಲಯಕೆ ಬಸವೇಶ
ಶಿವಲಿಂಗಪೂಜೆಯಂ ಮಾಡುತಿರಲಾಕ್ಷಣದಿ
ಸುವಿವೇಕದಿಂದಕ್ಕನಾಗಮ್ಮಗಳು ಕಂಡು ಸೇವಿಸಲು ಸಂತೋಷದಿಂ ೫೮

ನನ್ನಿಯಿಂದಾ ಭಕ್ತಿಶೇಷದಿಂ ಜಗದೊಳಗೆ
ಚೆನ್ನಬಸವೇಶ್ವರಂ ಸಂಜನಿಸಿ ಪ್ರಮಥರೊಳು
ಮನ್ನಣೆಯ ಮಹಿಮ ತಾನೆಂದೆನಿಸಿ ನೆರೆಮೆರೆದ ಸರ್ವಜನಮರಿವಂದದಿ
ಸನ್ನುತಾಮಲಶೇಷಮಹಿಮೆಯುಂ ಬಣ್ಣಿಪಡೆ
ಪನ್ನಗಾಧೀಶಗರಿದೆಂದೆನುತ ಸುಗುಣಸಂ
ಪನ್ನ ಮಹಲಿಂಗಮುನಿಪೋತ್ತಮಂ ಸೂಚಿಸಿದ ಭೂಪಾಲತನುಜಾತಗೆ ೫೯

ಇಂತಸಮ ಶೇಷ ನಿರ್ಮಾಲ್ಯ ಪಾದಾಂಬುಗಳ
ಸಂತತಿಯ ನೆರೆನಂಬಿ ಸ್ವರ್ಗ ಮರ್ತ್ಯಂಗಳೊಳ್
ಚಿಂತಿತಾರ್ಥವ ಪಡೆದರೆಲೆ ಮಗನೆ ಕೇಳೆನಲು ಕರಪದ್ಮಗಳ ಮುಗಿಯುತ
ಕಂತುಮದಮರ್ದನ ಮಹಾಲಿಂಗಮುನಿವರ್ಯ
ಪಿಂತೆ ನಾ ಮಾಡಿರ್ದ ಪುಣ್ಯಫಲದೇಳ್ಗೆಯಿಂ
ಸಂತಸದಿ ಭವದಂಘ್ರಿಜಲ ಭಸ್ಮ ಶೇಷಗಳು ನಿರ್ಮಾಲ್ಯ ಸಿದ್ಧಿಸಿದುವು ೬೦

ದುಸ್ತರದ ಕಲ್ಮಷದ ರೋಗಮದು ನಷ್ಟಾಯ್ತು
ವಿಸ್ತರದಿ ತನ್ಮಹಿಮೆಯುಂ ಕೇಳ್ದು ಭೀಕರ ಸ
ಮಸ್ತ ಭವಕರ್ಮಗಳ ಬಾಧೆಯನು ನೆರೆಮೀರಿ ಧನ್ಯನಾದೆನು ಜಗದೊಳು
ಸ್ವಸ್ತಾಯ್ತು ಘೋರ್ಪಡೆಯರನ್ವಯಂ ನಿಮ್ಮ ಪಾ
ದಸ್ತವನದಿಂದೆನುತ ಕೇದಾರಭಾವ ನಿಜ
ಹಸ್ತಂಗಳಂ ಮುಗಿದು ಭಯಭಕ್ತಿಯಿಂ ಬಿಡದೆ ಕೀರ್ತಿಸುತಲಿಂತೆಂದನು ೬೧

ಮುನ್ನ ನಾಂ ಭವದಂಘ್ರಿಜಲಭಸ್ಮಶೇಷಗಳಿ
ಗಿನ್ನು ಬಾಯ್ದೆರೆವೆನಲ್ಲದೆ ಬಳಿಕ ಭಾವಿಪಡೆ
ಎನ್ನ ಒಡಲಾಸೆಯಿಂ ಪಸಿವಿನಾತುರದಿಂದಲನ್ನಕ್ಕೆ ಬಾಯ್ದೆರೆಯೆನು
ಚೆನ್ನಗಿರಿನಾಥ ಕೇಳೆಂದೆನುತ ಭಕ್ತಿಯಿಂ
ಬಿನ್ನೈಸಿ ಮಾಲೋಜಿ ಭೂಪಾಲ ಸತಿಸಹಿತ
ಮನ್ನಣೆಯ ಮಹಿಮನಿಂ ಬೀಳ್ಕೊಂಡು ಕೇದಾರಭಾವಾಖ್ಯ ಸಂಭ್ರಮದಲಿ ೬೨

ಚೆಂದದಿಂ ಮಂತ್ರಿಮಹನಿಯರೊಡನೆ ಸಂತಸದಿ
ಬಂದು ರಾಜಾಲಯದಿ ಭಕ್ತಿಪೂರ್ವಕದಿಂದೆ
ಕಂದರ್ಪಹರನಮಲಪಾದಾಂಬುಜಂಗಳ ಸೇವಿಸುತ ಸುಖಿಯಿರ್ದನು
ಸಂದ ಪರಮಾನಂದಮಯರೂಪ ಮಹಲಿಂಗ
ನಂದು ನಿಜಲೀಲೆಯಿಂದಿರ್ದನಾ ಛಾತ್ರದೊಳ
ಗೆಂದು ನಂದ್ಯಾದಿ ಸತ್ಪ್ರಮಥರಾಲಿಸುವಂತೆ ಶಿವನುಸುರ್ದನಾ ಗಿರಿಜೆಗೆ ೬೩

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿಂದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ನೀಗಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಿಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿರ್ಪರು ೬೪

ಅಂತು ಸಂಧಿ ೧೪ ಕ್ಕಂ ಪದ ೯೦೨ ಕ್ಕಂ
ಮಂಗಳಂ
ಶ್ರೀ

ಶ್ರೀ

# ಹತ್ತೊಂಬತ್ತನೆಯ ಸಂಧಿ

**ಸೂಚನೆ :** ಮಾಲೋಜಿಸುತಪುತ್ರನಾರಾಯಣಾಖ್ಯನಿಗೆ
ಬಾಲಗ್ರಹಂ ಸಮನಿಸಸುವಳಿಯೆ ಕರುಣದಿಂ
ಪಾಲಿಸಿದ ಪ್ರಾಣಮಂ ಮಹಲಿಂಗನೆಂದು ಮಿಗೆ ಮಹದೇವ ಸೂಚಿಸಿದನು

ನಕ್ಷತ್ರಪತಿಮಿತ್ರಹುತಭಕ್ಷ್ಯನೇತ್ರ ವರ
ದಕ್ಷಮುಖಶಿಕ್ಷ ಗೋಪತಿಲಕ್ಷ ಮದನಾಂಗ
ಕಕ್ಷ ದಾವಾಗ್ನಿವಿಷಲಕ್ಷಿತಮಹಾಕಂಠ ಹರ್ಯಕ್ಷಸಂಪೂಜಿತ
ಯಕ್ಷಪತಿಮಿತ್ರ ಸಹಸ್ರಾಕ್ಷಭವಶರದ ಸುರ
ಪಕ್ಷ ಸುಮನಾಳಿಸಂಪೂಜ್ಯ ಜಗದಾಧ್ಯಕ್ಷ
ಮೋಕ್ಷಜನವರದ ಶ್ರೀ ಚೆನ್ನವೀರೇಶ್ವರನೆ ಪಾಲಿಪುದು ತ್ರೈಲೋಕಮಂ ೧

ಚಿತ್ತೈಸು ಗಿರಿಜಾತೆ ಮಹಲಿಂಗ ಜಂಗಮದ
ಉತ್ತಮೋತ್ತಮ ಲೀಲೆಯಂ ಬಳಿಕ ಶ್ರೀಮೋದ
ಪತ್ತನಾಧಿಪರ ಭಕ್ತಿಯನಿರದೆ ಕೈಕೊಳುತ ಸಂತತಂ ಸುಖಮಿರುತಿರೆ
ಬಿತ್ತರದಿ ಮಾಲೋಜಿ ಮಹರಾಜ ಸಕಲ ಸಂ
ಪತ್ತುಗಳನನುಭವಿಸುತೆಲ್ಲಾಗಳುಂ ಮನದಿ
ಚಿತ್ತಜಾಂತಕರೂಪನಂಘ್ರಿಗಳ ಸ್ಮರಿಸುತ್ತೆ ಸೌಖ್ಯಾವಲಂಬನದೊಳು ೨

ಧಾರುಣಿಯ ಪಾಲಿಸುತ್ತಿರಲಾಗ ತನ್ನ ಸುಕು
ಮಾರಗೋವಿಂದಸುತನಾರಾಯಣಾಖ್ಯಂಗೆ
ಘೋರ ಬಾಲಗ್ರಹಂ ಬಂದು ಘಟಿಸುತ್ತೊಡನೆ ಬಾಧಿಸುತ್ತಿರಲಾಕ್ಷಣಂ
ನಾರಿಯರು ತಮತಮಗೆ ಮರುಗುತ್ತ ಮನದಿ ಬಾ
ಯಾರಿ ಹಂಬಲಿಸಿ ಹಲುಬುತ್ತಿರುವ ವಾರ್ತೆಯನು
ಭೂರಮಣಮಾಲೋಜಿಗೋವಿಂದರಾಜರಿಂ ಕೇಳ್ದಾಗ ನಿಟ್ಟಿಸುತಲಿ ೩

ಸಂತಾಪದಿಂ ಮನದಿ ಮಿಡುಕುತ್ತ ಶಿವಶಿವಾ
ಇಂತಾಯ್ತೆ ದುರ್ಘಟದ ರೋಗಮದು ಸಮನಿಸಿತು
ಎಂತು ಶಿಶುಚಂದ್ರ ಬದುಕುವನೆಂದು ಮಾಯಾವಲಂಬನದಿ ಮರುಗುತ್ತಲಿ
ಕಂತುಹರಮಹಲಿಂಗನಂಘ್ರಿಗಳ ಮರೆದು ಭೂ
ಕಾಂತ ಮೊದಲಾದ ಸಹಜಾತಸುಕುಮಾರಕರ್
ಕಾಂತೆಯರು ತಮತಮಗೆ ಮೈಮರೆದು ಚಿಂತಿಸಿದರೇನೆಂಬೆನಾಕ್ಷಣದೊಳು ೪

ಪಲತೆರದ ವೈದ್ಯರುಂ ಬಂದು ಭೇಷಜಗಳಂ
ಒಲಿದು ಕೊಡುತಿರೆ ಮೇಣು ಕೆಲರು ಮಂತ್ರಂಗಳಂ
ಬಲಿದು ಮಂತ್ರಿಸುತಿರಲು ಕೆಲರು ಯಂತ್ರಂಗಳಂ ಬರೆಬರೆದು ಕಟ್ಟುತಿರಲು
ಛಲದಿಂದೆ ವಿಪ್ರೋತ್ತಮರು ಬಂದು ವೇದಗಳ
ಗಳಹುತ್ತ ಜಪತಪಾನುಷ್ಠಾನ ಯಜ್ಞಾದಿ
ಗಳನೆಸಗುತಿರೆ ಪೋಗದಾರೋಗ ಬಲಿದಿತ್ತದೇನೆಂದು ಬಣ್ಣಿಸುವೆನು ೫

ನಟ್ಟಾಲಿಯಿಂ ನೋಡಿ ಚಿಟ್ಟನೇ ಚೀರುತಿರೆ
ನಟ್ಟಿಡಿದ ಕೈಕಾಲ್ಗಳಂ ಬಿಟ್ಟು ಬೀಳುತ್ತ
ಒಟ್ಟೈಸಿ ಮೈಮರೆದು ನಿಟ್ಟುಸುರನಿಕ್ಕದಲೆ ನಿಶ್ಚೇತನದಿ ತೋರುತ
ಅಟ್ಟಹಾಸಂಗೈದು ಪ್ರಾಣಸಂಕಷ್ಟದಿಂ
ತಟ್ಟನೇ ಕಳವಳಿಸಿ ಕಂಗೆಟ್ಟು ರಾಜಸುತ
ಕೆಟ್ಟ ಬಾಲಗ್ರಹದ ಚೇಷ್ಟೆಂಗೆ ಬೆದರಿ ಬಾಯ್ಬಿಟ್ಟು ಬಳಲುತ್ತಿರ್ದನು ೬

ಈ ಪರಿಯೊಳಂ ಬಿಡದೆ ಬಳಲುತಿರೆ ಬಾಲಕಂ
ಭೂಪತಿಯು ತನ್ನೊಳಗೆ ತಾನರಿವುತಿಂತೆಂದ
ಗೋಪಪ್ರಭಾ ಕೌಶಿಕನ ಕಣ್ಗೆ ಕಾಣದಂತಾತ್ಮದೋಷೋನ್ನತಿಯೊಳು
ದೀಪದುಪಮನಮಹಿಮೆಯಂ ತಿಳಿದು ತಿಳಿಯದೊಲ್
ವ್ಯಾಪಿಸಿದ ಮೋಹಾವಲಂಬನದ ತಾಮಸದಿ
ನಾ ಪರಮರೂಪನಂ ಮರೆದೆ ಗಡ ಭೂತಳದ ವೈದ್ಯರಿಂದೇನಾಹುದು ೭

ಎಂದು ನಿಜಸಹಜಾತಸುಕುಮಾರಕರ್ಬಳಿಕ
ಇಂದುಮುಖಿಯರ್ಸಹಿತ ಕನಕಮಯದಂದಳದಿ
ಕಂದನಂ ತಂದಿರಿಸಿ ಮಾಲೋಚಿ ಮಹರಾಜನರಮನೆಯಬಿಟ್ಟಾಕ್ಷಣಂ
ಇಂದುಧರ ಚಿದ್ರೂಪ ಮಹಲಿಂಗನಾಶ್ರಮಕೆ
ಚೆಂದದಿಂ ನಡೆಗೊಂಡು ಬಂದನಾ ಭಕ್ತಜನ
ಸಿಂಧುಚಂದ್ರನ ಪಾದಪದ್ಮಗಳ ಭಕ್ತಿಯಿಂ ಧ್ಯಾನಿಸುತ ಮಾನಸದೊಳು ೮

ಮುಕ್ತಿಭಾಮಿನಿಯ ಮಂದಿರದಂತೆ ಥಳಥಳಿಪ
ಮೌಕ್ತಿಕದಿ ನಿರ್ಮಿಸಿದ ಛಾತ್ರಾಂತರವ ಪೊಕ್ಕು
ಮುಕ್ತಪಿಂಗಲಜಟಾಪಟಲಶೋಭಿತಮೌಳಿ ಮಹಲಿಂಗನಂ ಕಾಣುತ
ಭಕ್ತಿಪೂರ್ವಕದಿಂದೆ ನಿಜಬಂಧು ಜನಸಹಿತ
ರಕ್ತಿಯಿಂದಿರದೆ ಸಾಷ್ಟಾಂಗಪ್ರಣಮಿತನಾಗಿ
ಯುಕ್ತಿಯಿಂದಂದಳದೊಳಿಹ ಬಾಲನಂ ತಂದು ಮುಂದಿರಿಸಿ ಕೈಮುಗಿವುತ ೯

ಬಾಲಚಂದ್ರಕಿರೀಟ ಚಿದ್ರೂಪ ಭವದೀಯ
ಬಾಲಕಂ ನಾರಾಯಣಾಖ್ಯನಿವಗಿಂದು ಘನ
ಬಾಲಗ್ರಹಂ ಬಂದು ಬಾಧಿಸಲು ಸರ್ವವೈದ್ಯರು ಯಂತ್ರಮಂತ್ರಂಗಳ
ಜಾಲಮಂ ಬಲ್ಲವರು ವೇದಾಗಮಜ್ಞರು ವಿ
ಶಾಲ ಸತ್ಕರ್ಮಗಳ ಮಾಡಲೇನಾದರುಂ
ಪೇಳಲಸದಳವಾದ ಗ್ರಹತಾನು ಪೋಗದಲೆ ಬಲಿದು ಬಳಲಿಸುತಿರ್ಪುದು ೧೦

ಸತ್ತು ಹುಟ್ಟುತ್ತಿರ್ಪ ಮನುಜರಿಂದೇನಹುದು
ಸತ್ತು ಚಿತ್ತಾನಂದ ನಿಮ್ಮ ಘನಮಹಿಮೆಯಾ
ಗೊತ್ತರಿದ ಮೇಲನ್ಯರಿಗೆ ಮತ್ತೆ ಮೋಹಿಸುವದಜ್ಞಾನವಿದು ಜಗದೊಳು
ಬಿತ್ತರದ ರೋಗಮಂ ಪರಿಹರಿಸಿ ತ್ವತ್ಪಾದ
ಭೃತ್ಯನಂ ಪಾಲಿಪುದು ಕರುಣದಿಂದೆನುತ ಭೂ
ಪೋತ್ತಮಂ ಸರ್ವಜನ ತಿಳಿವಂತೆ ಬಿನ್ನೈಸುತಿರಲಾಗ ಸುಕುಮಾರನ ೧೧

ಪ್ರಾಣಮದು ಪೋಗಲ್ಕೆ ಕಂಡು ಭೂಪಾಲಕನ
ರಾಣಿಯರು ಶೋಕಿಸುತ್ತಿರಲಾಗ ಭಕ್ತಜನ
ತ್ರಾಣ ಮಹಲಿಂಗ ಸಂತೈಸುತ್ತ ಸರ್ವರಿಗೆ ನಂಬುಗೆಯನಿತ್ತಾಕ್ಷಣಂ
ಏಣಧರನಾಜ್ಞೆಯಿದು ಭೂತಳದಿ ಭಾವಿಪಡೆ
ಊಣೆ ಸಮನಿಪುದೆಂದು ಸುಜ್ಞಾನದಿಂ ಪಂಚ
ಬಾಣಹರ ತಾನರಿದು ಬಳಿಕ ಚಿಂತಿಸುತಿರ್ಪ ಮಹರಾಜನಸ್ವಾಸ್ಥ್ಯಮಂ ೧೨

ಕಾರುಣ್ಯದಿಂ ನೋಡುತಲೆ ರಾಜ ನಿನ್ನ ಸುಕು
ಮಾರನಸುವಳಿ[೧]ಯದಿದೋ[೧] ಸಂತಾಪ ಬಿಡು ಬರಿದೆ
ಘೋರ ಜನ್ಮಾಂತರದಿ ನರಶರೀರವ ತಳೆದು ಬಂದಮೇಲಿನ್ನಿಳೆಯೊಳು
ಮಾರಹರನಾಜ್ಞೆಯಿಂ ಮೃತ್ಯುಸಮನಿಪುದು ಬಳಿ
ಕಾರಿಗಾದರು ಬಿಡದು ನಿನ್ನಂತರಂಗ ಸುವಿ
ಚಾರದಿಂದರಿದು ನೋಡೆಂದೆನುತ ಮುನಿಪೊತ್ತಮಂ ಬಿಡದೆ ಸೂಚಿಸುತಲಿ ೧೩

ಮೃಗತೃಷ್ಣಿಕಾಜಲದ ನಿಲವಿನಂತಂಬರದಿ
ಸೊಗಸುತಿಹ ಸುರಚಾಪದಂತಾಲಿವರಲಂತೆ
ಬಗೆಗೊಳಿಪ ಸಾಗರದಿ ಸಂಜನಿಪ ಬುದ್ಬುಧತರಂಗಗಳ ತೆರದಿಂದಲಿ
ಒಗೆದಲ್ಲಿ ಕಂಗೊಳಿಸಿ ಬಯಲಪ್ಪ ಮಾಳ್ಕೆಯಿಂ
ಬಗೆವಡೆಯು ಮಾಯಾವಲಂಬನಂ ತನ್ನಲ್ಲಿ
ಅಗಣಿತದರೂಪದಿಂದೊಗೆದು ರಚನೆಯದೋರಿ ಬಳಲಿಸುವುದೆಲೆ ರಾಜನೆ ೧೪

---

೧ ದೆಂಬ (ಕ.)

ದಿನಕರನ ಕಿರಣಗಳು ಬ್ರಹ್ಮಾಂಡವಲಯದೊಳ್
ಮಿನುಗುತ್ತ ಸರ್ವವ್ಯಾಪಕದಿಂದ ಪೂರೈಸಿ
ಜನಕೆ ಮಂಜುಲವಾಗಿ ನೆರೆ ಮೆರೆದು ತದ್ವನಜಸಖನಲ್ಲಿ ಬಯಲಪ್ಪವೊಲ್
ವನಜಾಕ್ಷಿ ಮೊದಲಾದ ಭೋಗಗಳು ತನ್ನ ಘನ
ಮನದ ಮಾಯಾವಲಂಬನದಿಂದ ರಂಜನೆಯ
ನನುಗೊಳಿಸಿ ಪೋದಮೇಲಾಮಾಯೆಯೊಳಗಡಗುತಿಪ್ಪುವೆಲೆ ಮಹರಾಜನೇ ೧೫

ಭಾವಿಪಡೆ ಬ್ರಹ್ಮಾಂಡ ಮಾಯೆಕೈದತ್ತಮಿದು
ಸಾವ ಮೀರುವ ತನುವನಾಂತಮೇಲಿನ್ನು ನಿಜ
ಶಾವಕಂ ಮೃತನಾದನೆಂದು ಬಳಲಲಿಬೇಡ ಸಾವಂತಕುಲಚಂದ್ರಮ
ತೀವಿರ್ದ ಮನದ ಸಂತಾಪಮಂ ಬಿಟ್ಟೀಗ
ಭೂವಲಯದೊಳಗಳಿವರಾರುಳಿವರಾರ್ ನೋಡು
ಭಾವಜಾಂತಕನಾಜ್ಞೆಯೇ ಕಾರಣಂ ಬಳಿಕ ಕೇಳೆಂಡ ಮುನಿರಾಜನು ೧೬

ಏಸು ಜನ್ಮಾಂತರದಿ ಸುಕುಮಾರನಾದನೊ
ಏಸು ಜನ್ಮಾಂತರದಿಪಿತನಾದನೋ ಬಳಿಕ
ಏಸು ಜನ್ಮಾಂತರದಿ ಬಂದ ಸುಖದುಃಖಗಳ ತಾನುಂಡುಮಡಿದಿರ್ದನೊ
ಏಸು ಜನ್ಮಾಂತರದಿ ನೀನವಗೆ ಜನಿಸಿದೆಯೊ
ಏಸು ಜನ್ಮಾಂತರದಿ ಜನಕನಾಗಿರ್ದೆಯೊ
ಏಸು ಜನ್ಮಾಂತರದೊಳಾರಿಂಗೆ ಪುಟ್ಟಿದನೊ ಭೂಮೀಶ ಚಿಂತಿಸದಿರು ೧೭

ಎಂದು ಕರುಣಾಮೃತಾಲಾಪಗಳನರುಹುತ್ತ
ಚೆಂದದಿಂ ಶ್ರೀ ಭಸ್ಮಮಂ ತಾಳ್ದು ಹಸ್ತದೊಳ್
ಸಂದ ಪಂಚಾಕ್ಷರಿಯ ಮಹಮನುವ ಜಪಿಸುತ್ತ ಮಹಲಿಂಗಮುನಿಚಂದ್ರನು
ಕಂದನ ಲಲಾಟದೊಳ್ ತಳಿಯಲ್ಕೆ ಪ್ರಾಣಮದು
ಬಂದು ಚೇತರಿಸುತ್ತ ನಿದ್ದೆ ತಿಳಿದೆದ್ದವೊಲ್
ಮುಂದೆಸೆಯೊಳೊಪ್ಪಿರಲು ಗೋವಿಂದರಾಜಾಖ್ಯ ಸಂತೋಷದೊಳಗೇಳುತ ೧೮

ಅಚ್ಚರಿಯ ಜಲಧಿಯೊಳಗಾಳುತ್ತಲೇಳುತ್ತ
ನಿಚ್ಚಲದ ಸಂತೋಷದಿಂ ರಾಜಪತ್ನಿಯರು
ಸಚ್ಚಿದಾನಂದ ಚಿನ್ಮಯರೂಪನಂಘ್ರಿಗಳಿಗೆರಗುತ್ತ ಮುಂಡಾಡುತ
ಸಚ್ಚರಿತ ಸಕಲ ಜಗದಾರಾಧ್ಯನೆಂದು ನೃಪ
ನುಚ್ಚವದಿ ನಿಜಬಂಧುಜನಜಾಲಸಹಿತ ಮನ
ಮೆಚ್ಚಿ ಮಹಲಿಂಗ ಮಹಿಮಾಂಬುನಿಧಿಚಂದ್ರ ಜಯಜಯತೆಂದು ಬಣ್ಣಿಸಿದರು ೧೯

ಆದಿಯೊಳು ವಜ್ರಬಾಹುಕನೆಂಬ ಧರಣೀಶ
ನಾದರದಿಮಿರಲವನ ಪತ್ನಿಯರು ತಮ್ಮೊಳು ವಿ
ರೋಧ ಭಾವದಿ ಬಾಳುತಿರೆ ಪಟ್ಟದಂಗನೆಯು ಗರ್ಭವಾಂತಿರಲಾಕ್ಷಣಂ
ಸಾಧಿಸುತ್ತವಳ ಕೊಲ್ಲುವೆನೆಂದು ಮತ್ಸರದಿ
ಭೇದಗುಣದಿಂ ಘೋರ ವಿಷ ಪಾಕದೊಳು ಬೆರಸಿ
ಮೋದದಿಂದಾ ಸವತಿ ನೀಡಲ್ಕೆ ಎಡೆವಿಡದೆ ಭುಂಜಿಸಿದಳಾ ಕಾಲದೊಳ್ ೨೦

ಘೋರತರಗರಳದುರಿ ಪೂರೈಸಿ ದೇಹದೊಳ್
ಸೇರಿ ಸಂಕಟ ಮಾಡುತಿರೆ ಕಂದಿ ಕುಂದುತ್ತ
ನಾರಿಮಣಿ ನವಮಾಸ ಗರ್ಭಿಣಿಯು ಪೊರಳುತ್ತ ನರಳುತ್ತ ಮಾನಸದೊಳು
ಮಾರಹರ ಪೊರೆಯೆಂದು ಮರಗುತಿಹ ಕಾಮಿನಿಯ
ಧಾರುಣೀಪತಿ ಮುಖ್ಯರುಂ ನೋಡಿ ಯೋಚಿಸಲು
ಆರರಿಯದಂತೆ ಸುಮ್ಮನೆ ಸವತಿ ತನ್ನೊಳಗೆ ಸಂತಸವನಾಂತಿರ್ದಳು ೨೧

ಆ ಸಮಯದೊಳು ರಾಜನರ್ಧಾಂಗಿ ಸಂಕಟದಿ
ಘಾಸಿಯಾಗುತ್ತರ್ಭಕನ ಪಡೆಯೆ ಪೂರ್ಣನವ
ಮಾಸದೊಳಗೇನೆಂಬೆನಾ ವಿಷಜ್ವಾಲೆ ಪಿಂಡಾಕೃತಿಯನಾಂತಂತೆವೊಲ್
ದಾಸಿಯರು ನೋಡಿ ಮರಮರಗುತ್ತ ಮಾನಸದಿ
ಮೋಸವಿದು ಘಟಿಸಿತ್ತು ಪಟ್ಟದಂಗನೆಗೆಂದು
ಓಸರಿಸದಾ ವಜ್ರಬಾಹುನೃಪಗರುಹಲ್ಕೆ ನೆರೆನೋಡಿ ವಿಸ್ಮಯದೊಳು ೨೨

ಭೂತಳದೊಳುಂಟಾದ ವೈದ್ಯರಂ ಕರೆಸುತ್ತ
ಸಾತಿಶಯದಿಂದ ಶತಸಾವಿರ ಸುಪೊನ್ನುಗಳ
ಪ್ರೀತಿಯಿಂದಿತ್ತು ಪರಮೌಷಧಿಯ ಮಾಡಿಸಲು ಪರಿಹರಿಸದಾ ರೋಗವು
ಭೀತಿಯೆಂಗೊಳಿಸುತ್ತೆ ಮಾತೆ ಸುತರಂ ಬಿಡದೆ
ಓತು ಕಾಡುತ್ತಿರಲು ಸರ್ವಜನ ಬೇಸತ್ತು
ಏಶೆರದೊಳಾದರೆಯು ಜೀವಿಸುವ ಹದನಿಲ್ಲ ಪ್ರಾರಬ್ಧವೆಂದೆನುತಿರೆ ೨೩

ಅಂಗದೊಳು ಪುಣ್ಣೊಡೆದು ದುರ್ಗಂಧ ನಾರುತಿರ
ಲಂಗನೆಯ ಸುಕುಮಾರಕನ ನೋಡಿ ಭೂಪಾಲ
ಹಿಂಗದಲಿ ಬೇಸತ್ತು ಬೆಂಡಾಗುತರಮನೆಯ ಬಿಟ್ಟಾಗ ಹೊರಹಾಕುತ
ತುಂಗ ಘೋರಾರಣ್ಯದೊಳು ಬಿಡದೆ ಕಳುಹಲ್ಕೆ
ಸಿಂಗ ಪುಲಿ ಕರಡಿ ಮುಂತಾದ ಮೃಗಜಾತಿಗಳು
ಸಂಗೊಳಿಸಿ ಕಾಡುತಿರೆ ಗಾಢಾಂಧಕಾರದೊಳ್ ತದ್ರಾಜನರ್ಧಾಂಗಿಯು ೨೪

ಮರುಗುತ್ತ ಮನದೊಳಗೆ ಶಿವಶಿವ ಮಹಾದೇವ
ಧರಣೀಶ ನಿಷ್ಕರುಣಿಯಾದನಕಟೆಂದೆನುತ
ತರಳನಂ ಮೈದಡವುತಪ್ಪುತ್ತೆ ದುಃಖದಿಂ ಪ್ರಾರಬ್ಧಮೆಂದೆನುತಲಿ
ತರಣಿ ತತ್ಸಮಯದಲಿ ಪೂರ್ವಾದ್ರಿಯಲಿ ಮಿರುಗು
ತಿರೆ ಮೆಲ್ಲನಾರೈದು ಬಳಲುತ್ತ ವಿಪಿನದಿಂ
ಬರುತಿರಲು ಬಟ್ಟೆವಿಡಿದಾಕ್ಷಣಂ ಬಳಿಕೋರ್ವ ವೈಶ್ಯೋತ್ತಮಂ ಕಾಣುತ ೨೫

ಎಲೆ ತಾಯೆ ನೀನಾರು ಪೇಳೆನುತ ಕೇಳಲ್ಕೆ
ಲಲನೆ ಮಮ್ಮಲ ಮರುಗಿ ಪೂರ್ವಾಪರಸ್ಥಿತಿಯ
ಒಲಿದು ಸಾರುತ್ತಿರಲು ಪದ್ಮಾಕರಂ ತಿಳಿದು ನಂಬುಗೆಯನಿತ್ತಾಕ್ಷಣಂ
ಬಳಲದಿರು ಬಾಲೆ ಬಾರೆಂದು ಕಾರುಣ್ಯದಿಂ
ನಿಲಯಕ್ಕೆ ಕರೆದೊಯ್ದು ವಿವಿಧೋಪಚಾರದಿಂ
ಸಲಹುತ್ತಮಿರಲೀರ್ವರಂ ರೋಗ ಪಲ್ಲಟಿಸಿ ಮೃತವಾದನಾ ಬಾಲನು ೨೬

ಹರಹರ ಮಹಾದೇವ ಎಂದು ಪೊರಳುತ ಬಾಲೆ
ತರಳನಂ ನೋಡಿ ಶೋಕಾಬ್ಧಿಯೊಳು ಮುಳುಗುತ್ತ
ಮರುಗಿ ಬಾಯಾರಿ ಚೀರುತಿರಲ್ಕೆ ಪದ್ಮಾಕರಂ ಕಂಡು ಕಡುದುಃಖದಿಂ
ಧರಿಯೊಳನ್ಯಾಯಮೆಂದೆನುತಿರುವ ಸಮಯದೊಳ್
ಪರಮಪುಣ್ಯಕರ ಶ್ರೀ ವೃಷಭಯೋಗೀಂದ್ರನುಂ
ಹರುಷದಿಂ ಬಂದನಲ್ಲಿಗೆ ಪೂರ್ವಪುಣ್ಯದಿಂದೇನೆಂಬೆನಚ್ಚರಿಯನು ೨೭

ಬಂದ ಮುನಿಪೋತ್ತಮನ ಪದಪದ್ಮಕೆರಗುತ್ತ
ಕಂದನಂ ತಂದು ಮುಂದಿರಿಸುತ್ತ ತನ್ಮಾತೆ
ಸಂದ ವೈಶ್ಯೋತ್ತಮಂ ಪದ್ಮಾಕರಂ ಬಿಡದೆ ಬಿನ್ನೈಸೆ ಕಾರುಣ್ಯದಿಂ
ಮುಂದುವರಿದಾ ವೃಷಭಯೋಗೀಂದ್ರ ಪರಸುತ್ತ
ಸುಂದರಾಂಗಿಯು ಬಿಡದೆ ಮೈದಡವುತೆಲೆ ತಾಯೆ
ಕುಂದದಿರು ದುಃಖದಿಂ ಪ್ರಾರಬ್ಧಕರ್ಮವನು ಮೀರುವರದಾರ್ ಜಗದೊಳು ೨೮

ಎಂದು ಸಂತೈಸುತ್ತ ಶ್ರೀಸಾಂಬನವತಾರ
ನಂದು ಚಿದ್ಭಸ್ಮಮಂ ಕರಕಂಜದೊಳಗಾಂತು
ಸಂದ ಪಂಚಾಕ್ಷರಿಯ ಜಪಿಸುತ್ತ ಮೃತವಾದ ಬಾಲಕನ ಸರ್ವಾಂಗದಿ
ಚೆಂದದಿಂ ಹೂಸಿ ಬಾಳಸ್ಥಳದಿ ಧರಿಸಲ್ಕೆ
ಮಂದಹಸನಂಗೈವುತೆದ್ದು ನಮಿಸುತ್ತಿರಲು
ಮುಂದುವರಿದಾನಂದ ಜಲಧಿಯೊಳಗಾಳುತಿರೆ ಶ್ರೀವೃಷಭಯೋಗೀಂದ್ರನು ೨೯

ರಾಜಪತ್ನೀ ದೇಹದೊಳಗೆ ಶ್ರೀಭಸ್ಮವನು
ನೈಜದಿಂ ತಳೆಯಲ್ಕೆ ಥಳಥಳಿಸುತೊಪ್ಪುತ್ತ
ಭೂಜನಂ ಕೊಂಡಾಡುತಿರೆ ರೋಗ ಬಯಲಾಗೆ ಪದ್ಮಾಕರಂ ಮುದದೊಳು
ರಾಜಿತಾಮಲಮೂರ್ತಿ ಶ್ರೀವೃಷಭಯೋಗೀಂದ್ರ
ಸೋಜಿಗವಲಾ ನಿಮ್ಮ ಮಹಿಮೆ ತ್ರೈಜಗದೊಳಗೆ
ಮಾಜಹರಬಲ್ಲನೆಂದೆನುತ ಕೊಂಡಾಡುತಿರೆ ತನ್ಮುನಿಪನಿಂತೆಂದನು ೩೦

ಎಲೆ ವೈಶ್ಯಪತಿ ನಂಬು ಭದ್ರಾಯು ಬಾಲನಂ
ಲಲನೆಯಂ ಪರಿಪಾಲಿಸುತ್ತಿರಲು ನಾ ಬಂದು
ಒಲಿದು ಪೇಳುವೆ ನಿನಗೆ ರಾಜಕಾರ್ಯವನೆಂದು ಶ್ರೀವೃಷಭಯೋಗೀಂದ್ರನು
ಕಲಿತ ಕಾರುಣ್ಯದಿಂ ಭದ್ರಾಯುವಂ ಪರಸಿ
ಜಲಜಾಕ್ಷಿಯಂ ನೋಡಿ ನಂಬುಗೆಯನಿತ್ತಸವು
ಕಲಿಮಲಾಪಹನಿಂತು ಘನಮಹಿಮೆಯಂ ಮೆರೆದನೆಂದೆಂಬ ಸತ್ಕಥೆಯನು ೩೧

ಪ್ರಾಣಮಂ ಪಾಲಿಸಿದರೆಂಬುವದ ಸಕಲ ಪೌ
ರಾಣದೊಳು ಕೇಳ್ದು ಬಲ್ಲೆವು ಕಥೆಯ ಭೂತಳದಿ
ಕಾಣೆವು ಕಣಾ ಬಳಿಕ ಮೃತವಾದ ಬಾಲನಿಗೆ ಸರ್ವಜನನೋಳ್ಪಂದದಿ
ಊಣೆಯಿಲ್ಲದೆ ಹರಣಮಂ ಕೊಟ್ಟ ಸದ್ಭಕ್ತ
ತ್ರಾಣ ಸರ್ವೇಶ ಸದಮಲರೂಪ ಹತಪಂಚ
ಬಾಣ ಮಹಲಿಂಗನೆಂದೆನುತ ಭೂಪತಿಮುಖ್ಯರುಂ ಬಿಡದೆ ಬಣ್ಣಿಸುತಿರೆ ೩೨

ಎಲೆ ದೇವ ಘೋರ್ಪಡೆಯ ವಂಶಪಾರಂಪರೆಯ
ಒಲವಿನಿಂ ಪಾಲಿಪುದು ಕೂರ್ಮಪೃಥುನ್ಯಾಯದೊಳು
ಸಲೆ ನಿಮ್ಮ ನಂಬಿರ್ದ ಸೇವಕರನೆಂದೆನುತ ಭೂಪಾಲ ಕೊಂಡಾಡಲು
ಮಲನಾಶ ಕಾರುಣ್ಯದಿಂ ನೋಡುತಲೆ ರಾಜ
ಫಲಮಾಯ್ತು ನಿಜವಂಶವಲ್ಲರಿಯು ಧಾತ್ರಿಯೊಳ್
ಬಳಿಕಿನ್ನು ಭಯವಿಲ್ಲಮೆಂದೆನುತ ಪರಸಲ್ಕೆ ನಮಿಸುತ್ತ ಭಯಭಕ್ತಿಯಿಂ ೩೩

ಸಂತಸದ ಸಾಗರದೊಳೇಳುತ್ತ ಭೂಪಾಲ
ಕಂತುಹರನಂಘ್ರಿಯಂ ಧ್ಯಾನಿಸುತ ಬೀಳ್ಕೊಂಡು
ಸಂತಸದಿ ತಿರುಗುತ್ತ ಪತ್ನಿಬಂಧುಗಳೊಡನೆ ಮಹಲಿಂಗ ಘನಮಹಿಮನ
ಅಂತರಿಸದಾಕ್ಷಣದಿ ಪೊಗಳುತ್ತ ಬಿಡದೆ ತ
ನ್ನಂತರಂಗದಿ ಮೆಚ್ಚಿ ಪೌತ್ರ ನಾರಾಯಣನ
ಭ್ರಾಂತ ಬಾಲಗ್ರಹಂ ನಷ್ಟಾಯ್ತುಮೆಂದೆನುತ ಬಂದು ರಾಜಾಲಯದೊಳು ೩೪

ಪರಮ ವೈಭವದಿಂದೆ ಪರಿಣಾಮಿಸುತ್ತಸಮ
ಗುರುವರನ ಮಹಿಮೆಯಂ ಸರ್ವರಿಗೆ ಪೇಳುತ್ತ
ಧರಣೀಶ ಸದ್ಧರ್ಮದಿಂದಲಾಳುತ್ತಿರಲು ಮಹಲಿಂಗ ಜಗದಾರ್ಯನು
ಪರಮಾನುಭವಗೋಷ್ಠಿಯಿಂದೆ ತಚ್ಛಾತ್ರದೊಳ್
ಹರಭಕ್ತರಂ ಬಿಡದೆ ಪಾಲಿಸುತ ಸುಖಮಿರ್ದ
ಗಿರಿಜಾತೆ ಲಾಲಿಸೆಂದೆನುತಾಗ ನಂದಿಮುಖ ಪ್ರಮಥರಿಗೆ ಸೂಚಿಸಿದನು ೩೫

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದೆ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೩೬

ಅಂತು ಸಂಧಿ ೧೯ ಕ್ಕಂ ಪದ ೮೩೮ ಕ್ಕಂ
ಮಂಗಳಂ
ಶ್ರೀ

ಶ್ರೀ

# ಇಪ್ಪತ್ತನೆಯ ಸಂಧಿ

ಸೂಚನೆ : ಮಾಲೋಜಿರಾಜನಿಗೆ ಶ್ರೀಚರಣತೀರ್ಥಮಂ
ಲೀಲೆಯಿಂದಿತ್ತು ವರ ಸ್ವರ್ಗಗಾಮಿನಿಯೆಂಬ
ಲೋಲಹಯಮಳಿಯೆ ಪ್ರಾಣವ ಕೊಟ್ಟು ನೆರೆಮೆರೆದ ಮಹಲಿಂಗನೀ
ಜಗದೊಳು

ಏಣಶಿಶುಪಾಣಿಧೃತ ಶ್ರೀರುಂಡಮಾಲಾಂಕ
ಬಾಣವರದಾತ ಭವದೂರ ಭಕ್ತೌಘಸಂ
ತ್ರಾಣ ಮುನಿಜನಪಕ್ಷ ರುಕ್ಷಪತಿ ಶಕಲಾಂಗ ಮಸ್ತಶಾಮರ ಸನ್ನುತ
ಜಾಣಬಾಣಮಯೂರವರದಾತ ಜಗದೀಶ
ಕ್ಷೋಣಿಬೃದ್ಧರಧರ್ಮ ಫಣಿನಾಥಸೂತ್ರ ಹರಿ
ಬಾಣ ಚಿದ್ರೂಪ ಶ್ರೀಚೆನ್ನವೀರೇಶ್ವರನೆ ಪಾಲಿಪುದು ತ್ರೈಲೋಕಮಂ ೧

ಹೈಮವತಿ ಲಾಲಿಪುದು ಮಹಲಿಂಗ ಜಂಗಮದ
ರಾಮಣೀಯಕ ಮಹಿಮೆಯಂ ಬಿಡದೆ ಭೂತಳದಿ
ಪ್ರೇಮದಿಂ ಮೋದಪುರಿ ಛಾತ್ರಾಂತರಾಳದೊಳ್ ಪರಮಸುಖದಿಂದಿರ್ದನು
ಭೂಮಿಪತಿ ಮಾಲೋಜಿರಾಜನತಿಭಕ್ತಿಯಿಂ
ಕಾಮಹರ ಮಹಲಿಂಗಜಂಗಮದ ಶ್ರೀಪಾದ
ತಾಮರಸಮಂ ಬಿಡದೆ ಧ್ಯಾನಿಸುತ ಸಂತತಂ ಮೆರೆದಿರ್ದನೊಂದಿನದೊಳು ೨

ಶ್ರೀಪಾದತೀರ್ಥವಂ ಸೇವಿಸುವ ನೇಮದಿಂ
ಭೂಪಾಲನಿರುತಿರಲು ಬಳಿಕೊಂದು ದಿಸದಲ್ಲಿ
ತಾ ಪಾನಮಂ ಮಾಡುತಿರೆ ಪರಮಕಲಧೌತಮಯವಾದ ಮಣಿಕಲಶದಿ
ತಾಪಸೋತ್ತಮನವನ ನಂಬುಗೆಯ ಪರಿಕಿಸುವ
ದೀ ಪರಿಯೊಳೆಂದೆನುತ ತಚ್ಚರಣತೀರ್ಥಮಂ
ರೂಪಿಲ್ಲದಂತೆಸಗೆ ಕಂಡು ಕಡುಭೀತಿಯಿಂ ಮಾನಸದಿ ಚಿಂತಿಸುತಲಿ ೩

ನೇಮ ತಪ್ಪುವದೆಂದು ಸೇವಕನ ಕಳುಹಲ್ಕೆ
ಪ್ರೇಮದಿಂ ಬಂದು ತನ್ಮುನಿಪನಂಘ್ರಿಗೆ ನಮಿಸಿ
ಕಾಮಹರ ನಿಮ್ಮ ಚರಣೋದಕವುಮಿಲ್ಲೆಂದು ಮಾಲೋಜಿ ಮಹರಾಜನು
ಹೇಮಮಯ ಪಾತ್ರೆಯೊಳ್ ತರವೇಳ್ದನೆಂದೆನಲು
ಭೂಮಿಪನ ಭಕ್ತಿಯಂ ಮಗುಳೆ ನೋಡುವೆನೆನುತ
ಆ ಮಹಿಮ ನಸುನಕ್ಕು ಬರಿ ನೀರುಮಂ ಕೊಟ್ಟು ಕಳುಹಲ್ಕೆ ತಲ್ಲೀಲೆಯಿಂ ೪

ತಿಳಿಯದಾ ಸೇವಕಂ ತಂದೀಯಲಾಕ್ಷಣಂ
ಕಲಧೌತಮಯವಾದ ಪಾತ್ರೆಯಂ ಕೊಂಡಾಗ
ಇಳೆಯಾಣ್ಮನರಿವುತ್ತ ಮಹಲಿಂಗಜಂಗಮದ ಚರತೀರ್ಥಮಿದು ಅಲ್ಲವು
ಜಲವೆಂದು ತನ್ಮುನಿಪನಾಶ್ರಮಕೆ ತಾ ಬಂದು
ಒಲಿದುಸಾಷ್ಟಾಂಗಪ್ರಣಿತನಾಗಿ ಸಮ್ಮುಖದಿ
ಕಲಧೌತ ಪಾತ್ರೆಯಂ ಮುಂದಿಡುವುತೆಲೆ ದೇವ ನಿಷ್ಕೃಪೆಯಿದೇಂ ಕಾರಣಂ ೫

ಮೆಚ್ಚಿರ್ದ ಸೇವಕರ ಮೇಲೆ ನಿರ್ದಯವೇಕೆ
ಸಚ್ಚಿದಾನಂದ ವರಮೂರ್ತಿಯೆನೆ ನಸುನಗುತ
ನಿಚ್ಚಲದ ನಿನ್ನ ನಿಜಭಕ್ತಿಯಂ ಪರಿಕಿಸುವ ಕಾರಣದಿಮಿಂತಾಯಿತು
ಬೆಚ್ಚದಿರು ಎಂದಭಯವಿತ್ತು ತತ್ಪಾತ್ರೆಯೊಳ
ಗಚ್ಚ ಪಾದೋದಕವ ಕೊಡಲು ಭಯಭಕ್ತಿಯಿಂ
ಮುಚ್ಚಿಕೊಂಡರಮನೆಗೆ ಬಂದು ಸೇವಿಸುತಾಗ ಪರಮ ಸುಖದಿಂದಿರ್ದನು ೬

ಮತ್ತೊಂದು ದಿನದಲ್ಲಿ ಮಹರಾಜನೇರುತಿಹ
ಬಿತ್ತರದ ಸ್ವರ್ಗಗಾಮಿನಿಯೆಂಬ ತುರಗಮದು
ತತ್ತರಿಸಿ ಚಾಂದಣಿಯ ಬೇನೆಯಿಂ ಬಿದ್ದೊಡನೆ ಸಂಕಟದಿ ಪೊರಳಾಡುತ
ಮತ್ತೆ ಪರಮೌಷಧಿಯ ಮಾಡಿದರೆ ರೋಗಮದು
ಒತ್ತರಿಸಿ ಕಾಡುತ್ತ ವೃದ್ಧಿಯಾಗುತ್ತಿರಲು
ಚಿತ್ತದೊಳು ಮರಗುತಿರೆ ಮಾಲೋಜಿ ಭೂಪಾಲನಸುಗಳೆದುದೇನೆಂಬೆನು ೭

ಆ ವಾರ್ತೆಯನು ರಾಜಸುಕುಮಾರಕರ್ ಪೋಗಿ
ಭಾವಜಾಂತಕಮೂರ್ತಿ ಮಹಲಿಂಗನಡಿಗೆರಗಿ
ದೇವ ಚಿತ್ತೈಸು ಭೂಪಾಲನೇರುವ ವಾಜಿ ಸ್ವರ್ಗಗಾಮಿನಿ ಎಂಬುದು
ತೀವಿದ ಮಹಾರೋಗದಿಂದಳಿಯೆ ಕಂಡಾಗ
ಭಾವದೊಳು ಬಿಡದೆ ಶೋಕಿಸುತಿರ್ಪನೆಂದೆನಲು
ಪಾವನಾಮಲಮೂರ್ತಿಯಾ ರಾಜಮಂದಿರಕೆ ನಡೆಗೊಂಡ ಕಾರುಣ್ಯದಿಂ ೮

ಭೂಮೀಶನೇಂ ಧನ್ಯನೋ ಜಗದಿ ಭಾವಿಪಡೆ
ಕಾಮಾರಿ ಮಹಲಿಂಗ ಜಂಗಮದ ಕೃಪೆಯೆಂತೊ
ಈ ಮಹಿತ ಘೋರ್ಪಡೆಯರನ್ವಯಕೆ ತಾ ದೈವನೆಂದೆಂಬುದಂ ಬೀರುತ
ಪ್ರೇಮದಿಂ ಬಂದಾಗ ಸರ್ವಜನ ನೋಡುತಿರೆ
ವ್ಯೋಮಗಾಮಿನಿಯೆಂಬ ಹಯದ ಭಾಳಸ್ಥಳದಿ
ಆ ಮಹಿಮ ತನ್ನ ಪದಪದ್ಮಮಂ ಸೋಂಕಿಸಲು ಏನೆಂಬೆನಚ್ಚರಿಯನು ೯

ಹೇಂಕರಿಸುತಾ ಹಯಂ ಶಫದಿಂದೆ ಭೂಮಿಯಂ
ಹೂಂಕಾರದಿಂ ಬಡಿವುತೇಳಲ್ಕೆ ಸ್ವರ್ಗದೊಳ್
ಶಂಕಾಯಮಾನದಿಂದುಚ್ಚೈಶ್ರವಂ ಕೇಳ್ದು ಬೆದರಲ್ಕೆ ಭೂಪಾಲನು
ಕಿಂಕರ್ಯವೃತ್ತಿಯಿಂದಾನಂದ ಜಲಧಿಯೊಳು
ತೇಂಕಾಡುತಲೆ ದೇವ ಮದ್ರಾಜವೈಭವಕೆ
ಸಂಕೇತದೊಳಗೊಂದು ಸ್ವರ್ಗಗಾಮಿನಿಯಲ್ಲದಿಲ್ಲೀಗ ವರ ತೇಜಿಗಳ್ ೧೦

ಇನ್ನೆಸೆವ ಜಾತ್ಯದೊಳ್ ಸಂಭವಿಸಿ ನೆರೆಮೆರೆದ
ಬಣ್ಣನದ ಸೌಂದರ್ಯ ಸುಗುಣಮಾಲಿನಿಯೆಂಬ
ಚೆನ್ನೆಸೆವ ಹಯಮುಂಟು ಕೈಕೊಳ್ವುದೆಂದೆನುತ ನಮಿಸಲ್ಕೆ ಭೂಪಾಲನು
ಮನ್ನಿಸುತ್ತಾಕ್ಷಣದಿ ಮಹಲಿಂಗ ಜಗದಾರ್ಯ
ಉನ್ನತದಿ ಪರಸುತ್ತ ಬಂದು ತಮ್ಮಾಶ್ರಮದಿ
ಸನ್ನುತಾಮಲಮೂರ್ತಿ ಮೆರೆದಿರ್ದ ಪುರಜನಂ ಕೊಂಡಾಡುತಿರೆ ಭಕ್ತಿಯಿಂ ೧೧

ಸೌಂದರ್ಯಸುಗುಣಮಾಲಿನಿಯೆಂಬ ತತ್ತುರಗ
ಕಂದರ್ಪದರ್ಪಹರನವತಾರನಾಶ್ರಮದಿ
ಇಂದು ಗುರುವಾರದೊಳಗುಪವಾಸಮಂ ಮಾಡುತಿರುತಿರ್ದುದೇನೆಂಬೆನು
ಹಿಂದದರ ಜನ್ಮಾಂತರದ ಪುಣ್ಯಮೆಂತುಂಟೊ
ಇಂದುಧರ ತಾ ಬಲ್ಲ ಎಂದು ಜನ ಪೊಗಳುತಿರೆ
ಚೆಂದದಿಂದಾಹಯಂ ಹರಿಣಾಕ್ಷಿಯೆಂದೆನಿಸಿ ಮೆರೆದಿರ್ದುದೆಲ್ಲಾಗಳುಂ ೧೨

ಆ ತುರಗ ಲೋಕಸನ್ನುತವಾಗಿ ಸರ್ವಗುಣ
ಜಾತಮಾಲಿನಿ ಎಂಬ ನಾಮದಿಂದುಚ್ಚಿಷ್ಟ
ಪ್ರೀತಿಯಿಂ ಮುಟ್ಟದಲೆ ಮಹಲಿಂಗ ಜಂಗಮದ ಚಿತ್ತವೃತ್ತಿಯನರಿವುತ
ಓತು ವರಭಕ್ಷ್ಯ ಭೋಜ್ಯಾದಿಗಳನುಂಡು ನಿಜ
ಜಾತಿಯೊಳು ಹಯಶಿರೋಮಣಿಯೆಂದು ಸಂತತಂ
ನೀತಿಯಿಂ ಬಾಳುತ್ತ ಮನಕೆ ಮಂಜುಲವಾಗಿ ಮೆರೆದಿರ್ದುದೇಂ ಪುಣ್ಯಮೋ ೧೩

ಇಂತಸಮ ಮಹಿಮೆಗಳ ಬೀರುತ್ತ ಮಹಲಿಂಗ
ಸಂತಸದಿ ಮೋದಪುರ ಭಾತ್ರಾಂತರಾಳದೊಳ್
ಸಂತತಂ ಸದ್ಭಕ್ತರನು ಬಿಡದೆ ಪಾಲಿಸುತ ಪರಮಾನುಭವಗೋಷ್ಠಿಯಿಂ
ಭ್ರಾಂತಮಾಯಾವಿಡಂಬನನಾಗಿ ಮೆರೆದಿರ್ದ
ಕಾಂತೆ ಕೇಳೆಂದೆನುತ ಗಿರಿಜಾತೆಯೊಳ್ಪೇಳ್ದ
ಕಂತುಹರ ನಂದ್ಯಾದಿ ಪ್ರಮಥರಾಲಿಸುವಂತೆ ಮುನಿಪೋತ್ತಮನ ಲೀಲೆಯಂ ೧೪

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲಸೌಭಾಗ್ಯದಿಂ
ಮದನಹರಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೧೫

ಅಂತು ಸಂಧಿ ೨೦ ಕ್ಕಂ ಪದ ೬೫೩ ಕ್ಕಂ
ಮಂಗಳಂ
ಶ್ರೀ

ಶ್ರೀ

## ಇಪ್ಪತ್ತೊಂದನೆಯ ಸಂಧಿ

ಸೂಚನೆ : ಸಮರದೊಳ್‌ಯುವರಾಜರಾಜರ್ಗೆ ಮೈದೋರಿ
ಶ್ರಮವನೀಡಾಡವರ್ಗಳುತ್ಸಾಹವಿಮ್ಮಡಿಸಿ
ಶಮನಾರಿ ಮಹಲಿಂಗ ಜಯವಿತ್ತನಾ ಪಾತ್ರಿಪರಗಣೆಯ ವರದುರ್ಗದಿ

ಶ್ರೀಗಿರಿಸುತಾಲಪನಕಂಜಾತದಿನನಾಥ
ನಾಗಮುಖಶರಜನ್ಮತಾತ ಜಗವಿಖ್ಯಾತ
ಭೋಗಿಶಯನಾಕ್ಷಿಪದ ಭವಶೈಲಪುರುಹೂತ ಭಕ್ತೌಘಕಲ್ಪದ್ರುಮ
ಆಗಮಸುಭೇದ್ಯಮಹಿಮಾಂಬರಸುಕೇಶ ವರ
ನಾಗಸಂಕುಲಭೂಷ ನಗಧರ್ಮ ಪರಮೇಶ
ಯೋಗಿಜನಸಂಪೂಜ್ಯ ಶ್ರೀಚೆನ್ನವೀರೇಶ ಪಾಲಿಪುದು ತ್ರೈಲೋಕಮಂ ೧

ಚಿತ್ರೈಸು ಗಿರಿಜಾತೆ ಮಹಲಿಂಗ ಜಂಗಮದ
ವೃತ್ತಿಯಂ ಪೇಳಲಸದಳವಿಂದು ಭೂತಳದಿ
ಸತ್ಯಶಿವಶರಣರಂ ಪಾಲಿಸುತ ಪರಮಾನುಭವಗೋಷ್ಠಿಯಿಂ ಸಂತತಂ
ಉತ್ತಮೋತ್ತಮವಾದ ಮಹಿಮೆಗಳ ಬೀರುತ್ತ
ಚಿತ್ತಜಾಂತಕನಸಮ ಲೀಲೆಗಳ ಸಾರುತ್ತ
ಚಿತ್ತದೊಳ್ ನಲವೇರಿ ಮೆರೆದಿರ್ದನಾ ಪುರದೊಳೇನೆಂದು ಬಣ್ಣಿಸುವೆನು ೨

ಬಳಿಕೊಂದು ವಾಸರದಿ ಶ್ರೀಮಂತರಾಜ್ಞೆಯಿಂ
ಇಳೆಯಾಣ್ಮ ಮಹಲಿಂಗನಾಜ್ಞೆಯಿಂ ಬೀಳ್ಕೊಂಡು
ಛಲದಿಂದ ಚತುರಂಗ ಬಲಸಹಿತ ನಡೆಗೊಂಡು ಪರರಾಜರಂ ಜಯಿಸುತ
ಕಲಿತನದ ಪೆರ್ಮೆಯಿಂ ಕದನಲಂಪಟರೆನಿಪ
ಬಲವಂತ ರಾಹುತರ ಸಂದಣಿಯ ಮಧ್ಯದೊಳ
ಗುಲಿವ ಕಹಳಾಧ್ವನಿಯ ಸಂಭ್ರಮದಿ ಬರುತಿರ್ದನೇನೆಂದು ಬಣ್ಣಿಸುವೆನು ೩

ಸ್ವರ್ಗಗಾಮಿನಿಯೆಂಬ ವಾಜಿಯಂ ಕುಣಿಸುತ್ತ
ಭಾರ್ಗವನ ಪ್ರತಿಯೆನಿಪ ಘನಯುದ್ಧರಂಗದೊಳ್
ಭೋರ್ಗರೆವ ಭೇರಿ ತಮ್ಮಟ ಕಹಳೆ ಶಬ್ದಗಳ್ ದಿಗ್ವಾಲ ಪೂರೈಸಲು
ಆರ್ಗಿವನ ಸಾಹಸಂ ಧಾತ್ರಿಯೊಳಗಿಲ್ಲೆಂದು
ಸ್ವರ್ಗಮಾರ್ಗದಿ ನೋಡಿ ಖೇಚರರ್ ಪೊಗಳುತಿರೆ
ನಿರ್ಗತ ಮಹಾಶೌರ್ಯದಿಂ ಭರದಿ ಬರುತಿರ್ದನಾರ್ಭಟವನೇನೆಂಬೆನು ೪

ಆ ರಾಜತನುಜಾತ ಗೋವಿಂದ ಸುಕುಮಾರ
ಮಾರಾರಿಮಹಲಿಂಗಪದದರ್ಶನವ ಮರೆದು
ಭೂರಿಸಂಭ್ರಮದಿಂದೆ ಹಿಂದುಳಿದೆನೆಂದೆಂಬ ಭರದಿಂದೆ ಬರುತಿರ್ದನು
ವಾರೈಸಿ ರಾಹುತರ್ ಕೆಲಬಲದಿ ಬಳಿವಿಡಿದು
ಪೂರೈಸಿ ನಡೆಗೊಂಡು ವಾಜಿಗಳ ಕುಣಿಸುತ್ತ
ಭಾರೈಸಿ ಭೂತಳಂ ಕಂಪಿಸುತ್ತಿರೆ ಬಂದ ಬಲಮಧ್ಯದೊಳಗೊಪ್ಪುತ ೫

ಮಾರಾಂತ ಪ್ರತಿಭಟರ ಶಿರಸಂಗಳಂ ಖಡ್ಗ
ಧಾರೆಯಿಂದಿಳುಹುವೆಂ ಪಾತ್ರಿಪರಗಣ ದುರ್ಗ
ದಾ ರಮ್ಯರಾಜರಂ ಕೊಂದು ಕೂಗುವೆನೆಂದು ಗೋವಿಂದ ಮಹರಾಜನು
ಧೀರತನದಿಂ ಪಿತನ ಬಲದೊಳಗೆ ಬರುತಿರಲು
ಧಾರುಣಿಯು ಕಂಪಿಸುತ್ತಿರಲಾಗ ಕಹಳೆಗಳ್
ಚೀರಿದವದೇನೆಂಬೆನದ್ಭುತವನೀ ಜಗದಿ ಬಣ್ಣಿಸುವ ಕವಿಯಾವನು ೬

ಇದೆ ಬಂದನಿದೆ ಬಂದ ರಣಶೂರ ಬಹದೂರ
ನಿದೆ ಬಂದನಿದೆ ಬಂದ ವೈರಿವನದಾವಾಗ್ನಿ
ಇದೆ ಬಂದನಿದೆ ಬಂದ ಕಲ್ಗುದರಿ ಶಿವನಮನೆ ಸಾವಂತಕುಲತಿಲಕನು
ಇದೆ ಬಂದನಿದೆ ಬಂದ ಪರರಾಯರನು ಸ್ವರ್ಗ
ಸದನಕ್ಕೆ ಕಳುಹಲ್ಕೆ ಮ್ಹಾಲೋಜಿ ಮಹರಾಜ
ನಿದೆ ಬಂದನಿದೆ ಬಂದ ಗೋವಿಂದಭೂಪಾಲನೆಂದು ಕಹಳೆಗಳೊದರಲು ೭

ಕೇಳುತ್ತ ಪರರಾಯರಾಕ್ಷಣದಿ ದುರ್ಗದೊಳ
ಗೇಳುತ್ತ ಬರೆ ಮುಂದುವರಿದು ಚೆನ್ನಾಳಿಯೊಳ್
ಪೇಳುತ್ತ ಭಾಷೆಯಂ ಲಟಕಟಿಸಿ ಬರೆ ದುರ್ಗದಾಳುವೇರಿಯ ಮೀರುತ
ಬೀಳುತ್ತ ತಮ್ಮೊಳಗೆ ಪಲ್ಲಟಿಸಿ ಪ್ರತಿಭಟರ್
ತಾಳುತ್ತ ಜಯಶೀಲದಿಂದಾಗ ಕಾದುತಿರೆ
ಮಾಲೋಜಿ ಮಹರಾಜ ಗೋವಿಂದ ಧರಣಿಪರ್ ನೋಡಲ್ಕೆ ಸಮ್ಮುಖದೊಳು ೮

ಗಜಬಜಿಸಿ ತಮ್ಮೊಳಗೆ ಉಬ್ಬಿದರ್ ಕೊಬ್ಬಿದರ್
ಮಝುಬಾಪು ಎಂದು ಸಲೆ ಕೂಗಿದರ್ ತೇಗಿದರ್
ಭುಜಶೌರ್ಯದಿಂದಾಗ ಚೀರಿದರ್ ಮೀರಿದರ್ ಚುಂಗಾಣಿಯೊಳ್ ಕರೆವುತ.
ನಿಜದಿಂದ ಖಡ್ಗದಿಂ ಕುಟ್ಟಿದರ್ ಮೆಟ್ಟಿದರ್
ರುಜುವಾಗಿ ಸಮ್ಮುಖದಿ ಚುಚ್ಚಿದರ್ ಮೆಚ್ಚಿದರ್
ಗಜರುತ್ತ ಗರ್ವದಿಂ ಹಾರಿದರ್ ಕೇರಿದರ್ ಪರಬಲವನೇನೆಂಬೆನು ೯

ಮಿತ್ತ ಬಿತ್ತರದಿಂದೆ ಒತ್ತಿದರ್ ಮುತ್ತಿದರ್
ಕತ್ತಿಗಳ ಕಿತ್ತಾಗ ಸೀಳಿದರ್ ಹೋಳಿದರ್
ಚಿತ್ತದೊಳ್ ಮದವೇರಿ ನೋಡಿದರ್ ಕೋಡಿದರ್ ಮುಂಬಲದಿ ಮಾರಾಂತರಂ
ನೆತ್ತರಮನಂಗದೊಳ್ ಸುರಿಸಿದರ್ ಬೆರೆಸಿದರ್
ಸುತ್ತಿರಿಸಿ ಬಂದಾಗ ಕೆಡಹಿದರ್ ಕೊಡಹಿದರ್
ಸತ್ತವರ ಮೆಟ್ಟುತ್ತ ಹಾರಿದರ್ ಹೋರಿದರ್ ಭೂಪಾಲಕನ ಬಲದವರ್ ೧೦

ಹಿಂದಿರುಗಿ ಬಂದಾಗ ಕಡಿಯುತ್ತ ಜಡಿಯುತ್ತ
ಕಂದರಗಳಂ ಬಿಡದೆ ಕೆಡಹುತ್ತ ತಡಹುತ್ತ
ಮುಂದುವರಿದಾರ್ಭಟದಿ ಬೊಬ್ಬಿಡುತ ಹುಬ್ಬಿಡುತ ನೆರೆಕಾದುವಾರ್ಭಟವನು
ಕುಂದದಲಿ ನೋಡುತ್ತ ಗೋವಿಂದರಾಜ ನಿಜ
ತಂದೆಯನು ಬೀಳ್ಕೊಡುವ ಸಮಯವರಿದಾಕ್ಷಣದಿ
ಬಂಧುರ ಮಹಾನಿಯರ ಸಂಹರಿಸಿ ತಮ್ಮೊಳಗೆ ಕಣ್ಸನ್ನೆಯಂ ಮಾಡಿದರ್ ೧೧

ರಣರಾಹುತರ್ ಬಳಿಕ ಧುಮುಕಿದರ್ ವಾಜಿಗಳ
ಕುಣಿಸುತ್ತ ಮಿಂಚುತಿಹ ಕರವಾಳಮಂ ಜಡಿದು
ಮಣಿಸುತ್ತ ತೂಣಿಯಂ ಕಡಿಕಂಡಮಂ ಮಾಡಿದದುರ್ಗವನ್ನೇರುತ
ಅಣೆವುತ್ತ ಪ್ರತಿಭಟರ ಶಿರಸಂಗಳಂ ತರಿದು
ರಣರಂಗದೊಳಗಪ್ಸರಾಂಗನೆಯರೊಡವೆರೆಯೆ
ಸೆಣಸುತ್ತಮಿರೆ ಕಂಡು ಗೋವಿಂದ ಶಮಸೂರ ಕೋಪಾಗ್ನಿಯಿಂ ನುಡಿದನು ೧೨

ದುರ್ಗಮಂ ಕೈಸೆರೆಯಗೊಳ್ವೆನೆನುತಿರಲಾಗ
ಭರ್ಗನವತಾರ ಮಹಲಿಂಗ ಜಂಗಮನಾಥ
ಅರ್ಗಲಮಹಾರೂಪಮಂ ತೋರೆ ಸಮ್ಮುಖದಿ ಕಂಡಾಗ ಕೌತುಕದೊಳು
ನಿರ್ಗತ ಮಹಾಶೌರ್ಯದಿಂದುರ್ಬಿ ಮಾಲೋಚಿ
ಸ್ವರ್ಗಗಾಮಿನಿಯೆಂಬ ವಾಜಿಯಂ ಬೋಳೈಸಿ
ಭರ್ಗನಂ ನೋಡೆಂದು ತನುಜಂಗೆ ಸೂಚಿಸಲ್ ಕೊತ್ತಳದ ಶಾಲಾಗ್ರದೊಳ್ ೧೩

ಕಂಡತುಳ ಶೌರ್ಯದಿಂದೀ ಮಹಿಮನಮಲಪದ
ಪುಂಡರೀಕಕೆ ಮುನ್ನ ನಮಿಸಿ ಬರಲಿಲ್ಲ ಭೂ
ಮಂಡಲಾಧಿಪ ಕೇಳು ತಪ್ಪೆನ್ನದೀ ರಣದಿ ಜಯವೆಂತೊ ಭಾವಿಸುವಡೆ
ಖಂಡೇಂದುಧರರೂಪ ಜಯತೆಂದು ತಲೆವಾಗಿ
ಕಂಡೆಯುವನೆತ್ತುತ್ತ ಕಲಿತನದ ಪೆರ್ಮೆಯಿಂ
ಖಂಡಿಸುವೆ ನಾನರಿಯನೆಂದು ಘುಲ್ಲವಿಸುತ್ತ ಹರಿಣಲಂಘನವವಾಜಿಯಂ ೧೪

ಹರಹರಾ ಮಹಲಿಂಗನೆನ್ನುತ್ತ ಮನದೊಳಗೆ
ಪರಿಪೂರ್ಣ ಮಹಿಮನೆಂಬುದು ಸತ್ಯವೀರಣದಿ
ಬರಲಿಂದು ಪರಭೂಮಿಪಾಲನಂ ಕೊಂದೀಗ ಪಾತ್ರಿಪರಗಣೆದುರ್ಗಮಂ
ಭರದಿಂದೆ ಕೈಸೆರೆಯಗೊಳ್ಳದಿರೆ ನಾನಿಮ್ಮ
ಪರಮ ಸೇವಕನಲ್ತು ಘೋರ್ಪಡೆಯರನ್ವಯದ
ತರಳನಲ್ಲೆಂದು ತಂದೆಯ ನೋಡಿ ತಲೆವಾಗುತಾ ತುರಗಮಂ ಹಸ್ತದಿಂ ೧೫

ಥಪ್ಪರಿಸಿ ವಾಘೆಯಂ ನೆಗಹಲ್ಕೆ ತವಕದಿಂ
ದುಪ್ಪರಿಸಿ ಕೋಟೆಯನು ತೆನೆಗಳಂ ಶಫಗಳಂ
ಕೊಪ್ಪರಿಸಿ ದುರ್ಗದೊಳ್ ಲಂಘಿಸುತ್ತಾಕ್ಷಣದಿ ಕೈವಾಸವಂಗೊಳ್ಳುತ
ನಿಷ್ಪ್ರಸರದಿಂದಾಂತ ವೈರಿಗಳ ಸಂಹರಿಸಿ
ತಪ್ಪದಾರಾಜನಂ ಕಂಡು ರಣರಂಗದೊಳ್
ಒಪ್ಪದಿಂದಪ್ಸರೆಯರೊಳ್ ನೆರೆಸಬೇಕೆಂಬ ಸಮಯದೊಳ್ ಸುಕುಮಾರನ ೧೬

ಕಂಡು ನೆರೆ ಕೇಳ್ದನೆಲೆ ನೀನಾವ ಧರೆಯ ಭೂ
ಮಂಡಲಾಧಿಪನ ತನುಜಾತ ಪೆಸರೇಂ ಜಗದಿ
ಚಂಡಪ್ರತಾಪಕ್ಕೆ ಮೆಚ್ಚಿದೆಂ ಮಝುಭಾಪು ಈ ರಾಜಸಂಕುಲದೊಳು
ದಿಂಡುಗೆಡಹುತ್ತಸಮ ವರಸೇನೆ ಭರದಿಮುಂ
ಕೊಂಡು ಪುರದುರ್ಗಮಂ ಕೈಸೆರೆಯಗೊಂಡೆ ಗಡ
ಪಂಡಿತನಲಾ ರಣದಿ ಎಂದೆನುತ ಕೇಳಲ್ಕೆ ಸುಕುಮಾರನಿಂತೆಂದನು ೧೭

ಆರೆಂಬುದಂ ನೀನು ಕೇಳ್ದರಿಯಲಾ ಮರುಳೆ
ದೂರಲ್ಲ ಮೋದಪುರಿ ಕಲ್ಗುದರೆ ಸಾವಂತ
ಧಾರುಣೀಶರ ಮಧ್ಯದೊಳ್ ಮಾನ್ಯರೆಂದೆನಿಪ ಮಾಲೋಜಿ ಭೂಪಾಲನ
ಕಾರುಣ್ಯಪುತ್ರನಾಂ ಕದನಕರ್ಕಶಹೃದಯ
ನಾರೈದು ನೋಡೆನ್ನ ಸಾಹಸವನೀ ಜಗದಿ
ನೀರೇಜನೇತ್ರನ ಸುನಾಮ ಸಂದಿಹುದೆನುತ ಭುಜಶೌರ್ಯದಿಂದಾಕ್ಷಣಂ ೧೮

ಜಡಿಯಲ್ಕೆ ಖಡ್ಗದಿಂ ಮೈದೆಗೆದು ಪರರಾಯ
ಸಿಡಿಯಲ್ಕೆ ಖೇಚರರ್ ಮಝುಭಾಪುರೆಂದೆನುತ
ಕಡಿಯಲ್ಕೆ ಸಾವಂತ ಸಮರದೊಳಗಾರಾಯ ನಡೆಯಲ್ಕದೇನೆಂಬೆನು
ಮತ್ತ ಪ್ರತಿಭಟರೊತ್ತಿ ಕಾದುತ್ತ ತವಕದಿಂ
ಬಿತ್ತರದ ಕೋಟೆಯಂ ಕೈಸೆರೆಯಗೊಂಡೆನುತ
ಮತ್ತೆ ಮಾರಾಯನಂ ಕೊಲ್ವೆನೆಂದೆನುತಾಗ ಮುತ್ತಿತ್ತು ಮೂದಲಿಸಲು ೧೯

ಖೇಚರಾಂಗನೆಯೆಂಬ ಹಯದ ಕಡಿವಾಣಮಂ
ಸೂಚಿಸಲು ಸುರಮಾರ್ಗಕೇರ್ವಂತೆ ಹೂಂಕರಿಸೆ
ರೋಚಕದ ಭಾವದಿಂದಾ ದುರ್ಗಮಂ ಮೀರಿ ಪಾರುತ್ತ ಪರಬಲದೊಳು
ಗೋಚರಿಸದಾ ಹಯಂ ಭ್ರಮಿಸುತಿರೆ ಮಾರ್ತಂಡ
ರೋಚಿಯಿಂ ಸಂಘಟಿಸೆ ಖಡ್ಗಮದು ಕೈದಪ್ಪೆ
ನಾಚುತ್ತಮಿರೆ ತಿಳಿದು ಬಂದಾಗ ರಣದೊಳಗೆ ಮಹಲಿಂಗಮುನಿಪೊತ್ತಮಂ ೨೦

ಚಿತ್ತದೊಳ್ ಶೌರ್ಯಾಗ್ನಿ ಮುಂಬರಿವುತಿರೆ ನೋಡಿ
ಚಿತ್ತಜಾಂತಕಮೂರ್ತಿ ಮಹಲಿಂಗಜಯತೆಂದು
ಉತ್ತಣೀಬಲದೊಳಗೆ ಗೋವಿಂದ ಸುಕುಮಾರ ಸಿಕ್ಕಿದನಲಾ ಎನುತಲಿ ೨೧

ದಿವ್ಯಶಸ್ತ್ರವನಿತ್ತನೇಂ ಕರುಣಿಯೋ ಜಗದಿ
ಭವ್ಯರೀ ಬಲ್ಲರೀ ಮಹಿಮೆಯಂ ರಣದೊಳಗೆ
ನವ್ಯಮಿದು ಎಂದು ಮಾಲೋಜಿ ಭೂಪತಿ ಮೆಚ್ಚಿ ಮನದೊಳಗೆ ತಲೆದೂಗುತ
ಅವ್ಯಯನಲಾಲರೂಪ ತೋರ್ದನೆಂದಾಗ ನಿಜ
ಸವ್ಯಾಪಸವ್ಯಮಂ ನೋಡುತ್ತ ಭಕ್ತಜನ
ಸೇವ್ಯನಂ ಕಾಣದತಿ ನೊಂದು ರಣ ಮಧ್ಯದೊಳ್ ವೈರಿಗಳ ಸಂಹರಿಸುತಾ ೨೨

ಬರುತಿರಲು ಮಾರಾಂತ ರಾಹುತರ ಕಡಿಯುತ್ತ
ಭರದಿಂದೆ ಪ್ರತಿಭಟರ ಸಮ್ಮುಖದಿ ತಡೆಯುತ್ತ
ಇರಿಯಿರಿದು ಮಾವುತರ ಕೆಡಹುತ್ತ ಕೆಲಬಲದಿ ಜಡೆಯುತ್ತ ಕಾಲಾಳ್ಗಳಂ
ತರಿವುತ್ತಮಿರೆ ಭರದಿ ಸ್ವರ್ಗಗಾಮಿನಿಯ ಘನ
ಖುರದ ಹತಿಯಿಂ ಬೀಳುತಿರಲತ್ತ ಬೊಬ್ಬಿಡುವ
ಪರಬಲದ ಮಧ್ಯದೊಳಗೊರ್ವನೇ ಸುಕುಮಾರನಸುವಳಿದನೇನೆಂಬೆನು ೨೩

ತನುಜಾತನೆಲ್ಲಿರ್ಪನೆಂದು ನೋಡುತ್ತಿರಲು
ಘನತರದ ಶೌರ್ಯದಿಂದರಿರಾಯರಂ ಗೆಲ್ದು
ವಿನುತಾಪ್ಸರಾಂಗನೆಯರಾಲಿಂಗದೊಳ್ ಮೆರೆಯೆ ಸುರರು ಪೂಮಳೆಗರೆಯಲು
ಆನಂದದಿಂ ದೇವದುಂದುಭಿಯು ಮೊಳಗುತಿರೆ
ಜನಪತಿಯು ಕಂಡು ಮಝಭಾಪೆನುತ ಮೆಚ್ಚಿನಿಜ
ಮನದೊಳಗೆ ಚಿಂತಿಸುತ ಮಹನಿಯರ ಮರಣಕ್ಕೆ ಜಯಭೇರಿಯಂ ಪೊಡೆಸುತ ೨೪

ಹರಿಣಲಂಘನೆಯೆಂಬ ಹಯಸಹಿತ ಸುಕುಮಾರ
ಧುರದಲ್ಲಿ ಜಯಲಕ್ಷ್ಮಿಯಂ ಒಲಿಸಿ ತವಕದಿಂ
ಸುರಪುರದ ವೇಶ್ಯೆಯರ ಹೊಂದಿದನಲಾ ತನ್ನ ಮಹನಿಯರ ಸಹಿತೀಕ್ಷಣಂ
ಹರಹರಾ ಮಹಲಿಂಗಶರಣಾಗತರ್ಗೆಂದು
ಧರೆಯೊಳಚ್ಚರಿಯಲ್ತು ಜಯವಾಯ್ತು ಸಾಕು ತವ
ಚರಣದರ್ಶನವಿಲ್ಲದಲಿ ಬಂದ ಯುವರಾಜ ಗೋವಿಂದ ತಾನಳಿದನು ೨೫

ಅಳಿದರೇಂ ಫಲವಾಯ್ತು ದುರ್ಗಮಂ ಸೆರೆಗೊಂಡ
ಇಳೆಯೊಳಗೆ ಘೋರ್ಪಡೆಯರನ್ವಯದ ಕೀರ್ತಿಕುಜ
ಫಲವಾಯ್ತು ಮಝಭಾಪುರೇ ಎಂದು ತನುಜ ಗೋವಿಂದನಂ ಕೊಂಡಾಡುತ
ಇಳೆಯಾಣ್ಮ ಘೋರ್ಪಡೆಪತಾಕಮಂ ನಿಶ್ಚೈಸಿ
ಬಲಸಹಿತ ಭೇರಿದುಂದುಭಿ ಮೊಳಗುತಿರಲಂದು
ಬಳಿಕನ್ನರಾಯರಿಗೆ ಬೀಳ್ಕೊಟ್ಟು ಬರುತಿರ್ದನೇನೆಂಬೆನದ್ಭುತವನು ೨೬

ಶ್ರೀರಾಜ್ಯಮಂ ಸೆಳೆದೆನೆಂದೆಂಬ ಬಿಂಕಮದು
ಮಾರಾಜ ಮಹಲಿಂಗನಂ ಕಂಡ ಹರುಷಮದು
ಮಾರಾಂತ ಪರಬಲವನಿಕ್ಕಿರ್ದ ಮಾನಮದು ಪಾತ್ರಪರಗಣಿದುರ್ಗದ
ಭೂರಮಣನಂ ಕೊಂದ ಸುತನೆಂಬ ಗರ್ವಮದು
ಈ ರಾಜಮಂಡಲದಿ ಸಾನೆಂಬ ದಮಕಮದು
ಪೂರೈಸಿ ಮನದೊಳಗೆ ಬರುತಿರ್ದುದೇನೆಂಬೆ ಮಾಲೋಜಿಭೂಪಾಲನ ೨೭

ಇತ್ತ ರಾಜಾಲಯದಿ ದುಃಸ್ವಪ್ನಗಳು ತೋರಿ
ಮತ್ತಕಾಶಿನಿಯರುಂ ಮರುಗುತ್ತಮಿರೆ ಮನದಿ
ಚಿತ್ತಜಾಂತಕಮೂರ್ತಿ ಮುನ್ನ ತಾನರಿದಿರ್ದ ಗೋವಿಂದ ಸುಕುಮಾರನ
ವೃತ್ತಿಯಂ ತಿಳಿದು ಸುಮ್ಮನೆಯಿರ್ದನೀ ಜಗದಿ
ಮೃತ್ಯುಹರನೇಬಲ್ಲನಾತನ ಸುಮಹಿಮೆಯಂ
ಮತ್ತಾರಿಗರಿದೆಂದು ಮಹಮೇರುವಾಸದೊಳ್ ಗಿರಿಜಾತೆಯೊಳ್ ಪೇಳ್ದನು ೨೮

ಅತ್ತ ಭೂಪಾಲಕನ ಘನತರದ ಜಯಶೀಲ
ವೃತ್ತಿಯಂ ಕೇಳುತಿರೆ ಪುರದೊಳಗೆ ಸರ್ವಜನ
ಮಿತ್ತ ಬಲಸಹಿತ ಘನವಾದ್ಯದರ್ಭಟದಿಂದೆ ಮಹಲಿಂಗ ಮುನಿಚಂದ್ರನ
ಉತ್ತಮದ ಶ್ರೀಪಾದಮಂ ಕಾಣ್ಬೆನೆಂದು ನಿಜ
ಚಿತ್ತದೊಳ್ ನಲವೇರಿ ಬಂದು ನಮಿಸುತ್ತ ತವ
ಭೃತ್ಯ ಗೋವಿಂದ ಸುಕುಮಾರಕಂ ಸುರಪುರಪ ನೆರೆಸಾರ್ದ ರಣರಂಗದೊಳ್ ೨೯

ಯುದ್ಧದೊಳ್ ಮಹಲಿಂಗ ನಿಜರೂಪ ತೋರ್ದುದಂ
ಸಿದ್ಧ ಖಡ್ಗವ ತನ್ನ ಕೈಗಿತ್ತು ಸಾರ್ದುದಂ
ಉದ್ಧಟ ಪರಾಕ್ರಮಿಗಳುಂ ಜಯದಿ ಸುರಪುರದ ಗಣಿಕೆಯರ ನೆರೆಸಾರ್ದುದಂ
ಸಿದ್ಧ ಶ್ರೀದುರ್ಗಮಂ ತಾ ಬಿಡದೆ ಸೆಳೆದುದಂ
ಬಿದ್ದು ಸಮರಾಂಗಣದಿ ಪರರಾಯನಳಿದುದಂ
ಗೆದ್ದು ಸೇನಾರ್ವದಿಂ ತಾನುಳಿದು ಬಂದುದಂ ಮುನಿಜಾಲಸಂಪೂಜ್ಯನೊಳ್ ೩೦

ಎಂದು ನಿಜ ಪೂರ್ವಾಪರಸ್ಥಿತಿಯ ಬಿನ್ನೈಸ
ಲಂದು ಮಹಲಿಂಗಜಂಗಮ ಕೇಳ್ವುತೆಲೆ ರಾಜ
ಸಂದುದು ಕಣಾ ದೇವ ಸಿಂದುಧರನಾಜ್ಞೆಯಿಂ ಜಯಮೆಂದು ಪರಸುತ್ತಲಿ
ಚೆಂದದಿಂ ಬೀಳ್ಕೊಡಲು ಬಂದು ಜಯಶೀಲದಿಂ
ಮಂದಿರವನೊಳಪೊಕ್ಕು ಸೇನೆಯಂ ಕಳುಹುತ್ತ
ಸುಂದರಾಂಗನೆಯರತಿ ಧುಃಖಮಂ ಸಂತೈಸಿ ಸುಖದಿಂದಲಿರುತಿರ್ದನು ೩೧

ಇಂತಸಮ ಮಹಿಮೆಗಳ ತೋರುತ್ತ ಮಹಲಿಂಗ
ಸಂತತಂ ಮೋದಪುರ ಛಾತ್ರಾಂತರಾಳದೊಳ್
ಸಂತಸದಿ ಮೆರೆವುತ್ತ ನೆಲಸಿರ್ದನೆಂದೆನುತ ಗಿರಿಜಾತೆಯೊಳ್ ಶಂಕರಂ
ಅಂತರಿಸದಲಿ ಪೇಳುತಿರೆ ನಂದಿ ಮುಖ್ಯಗಣ
ಸಂತತಿಯು ಕೇಳ್ವಂತೆ ಕೈಲಾಸ ಮಂದಿರದಿ
ಕಂತುಮದಮರ್ದನ ಮಹಾದೇವನಿರುತಿರ್ದನೇನೆಂದು ಬಣ್ಣಿಸುವೆನು ೩೨

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದೆ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿ ಕರ್ಮಗಳ ಮೀರಿ ಸಕಲಸೌಭಾಗ್ಯದಿಂ
ಮದನಹರಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೩೩

ಅಂತು ಸಂಧಿ ೨೧ ಕ್ಕಂ ಪದ ೬೮೬ ಕ್ಕಂ

ಮಂಗಳಂ

ಶ್ರೀ

ಶ್ರೀ

# ಇಪ್ಪತ್ತೆರಡನೆಯ ಸಂಧಿ

**ಸೂಚನೆ :** ಲೀಲೆಯಿಂದಮೃತೇಶಲಿಂಗಮಂ ನೆಲೆಗೊಳಿಸಿ
ಮಾಲೋಜಿಭೂಪತಿಯುಪರಸುತ್ತ ಮಹಲಿಂಗ
ಬಾಲಾಖ್ಯದೇಶಾಧಿಪತಿ ಭಕ್ತಿಗೋಸುಗದಿ ಬೆಳಗಲಿಗೆ ದಯಮಾಡಿದರ್

ಶ್ರೀಗಿರಿಸುತಾವದನಚಂದ್ರಬ್ಜಾಲಚಕೋರ
ಯೋಗಿಜನ ಹೃತ್ಪದ್ಮ ದಿನಕರಾಂತಕದೂರ
ನಾಗಕುಂಡಲಕಲಿತ ಕರ್ಣಕರ್ಮವಿಹಾರ ಕರುಣಾಮೃತದಪೂರಗ
ಭೋಗಿಶಯನಾಕ್ಷಿಪದಪತ್ರ ಧರ್ಮವಿಹಾರ
ನಾಗವದನ ಕುಮಾರ ಪ್ರೀತ ನಿಗಮಾಳಿನುತ
ಭೂಗಗನ ಸಂಪೂಜ್ಯ ಶ್ರೀಚೆನ್ನವೀರೇಶ ಪಾಲಿಪುದು ತ್ರೈಜಗವನು ೧

ಚಿತ್ತೈಸು ಗಿರಿಜಾತೆ ಮಹಲಿಂಗಜಂಗಮುದ
ವೃತ್ತಿಯಂ ಬಳಿಕೊಂದು ವಾಸರದಿ ತನ್ನಮಲ
ಚಿತ್ತದೊಳ್ ಸುಜ್ಞಾನದಿಂದರಿದು ನೋಡುತ್ತ ಯೋಗಿಗುರುಲಿಂಗಾರ್ಯನಾ
ಉತ್ತಮೋತ್ತಮವಾದ ಶ್ರೀಪಾದಮಂ ನೆನೆದು
ಸತ್ತುಚಿತ್ತಾನಂದನೊಳ್ ಬೆರೆಯಬೇಕಿನ್ನು
ಮೃತ್ಯುಹರನಾಜ್ಞೆ ಸಮನಿಸಿತೆಂದು ಪರಮಾನುಭವಗೋಷ್ಠಿಯಿಂದಿರ್ದನು ೨

ಅಮರಾಪಗಾಜೂಟನಮೃತೇಶಲಿಂಗಮಂ
ವಿಮಲ ಧಾತ್ರ್ಯಂತರದಿ ನೆಲೆಗೊಳಿಸುತಂ ಬಳಿಕ
ಪ್ರಮುದದಿಂ ಪರಮಭಕ್ತಾಳಿಯುಂ ಪಾಲಿಸುತ ಪರಮಾತ್ಮಚಿದ್ರೂಪನು
ಸುಮನಾಳಿ ಸಂಸೇವ್ಯನಾಗಿ ಸತ್ಕೀರ್ತಿಯಿಂ
ದಮರಾಳಿ ಕೊಂಡಾಡುತಿರೆ ಸ್ವರ್ಗಮರ್ತ್ಯಾದಿ
ರಮಣೀಯತರಮಹಿಮನಿರಲಾಗ ಭೂಪಾಲ ಬಂದಾಗ ತಲ್ಲಿಂಗಮಂ ೩

ಬಲವಂದು ನಮಿಸುತ್ತ ಭಯಭಕ್ತಿಭಾವದಿಂ
ಬಳಿಕ ಮಹಲಿಂಗನಡಿಗೆರಗುತ್ತ ಕೈಮುಗಿದು
ಇಳೆಯೊಳಗೆ ನಾ ಕಂಡೆನಮೃತೇಶಲಿಂಗಮಂ ನಿಮ್ಮ ಘನತರ ಮಹಿಮೆಯಂ
ಜಲಜಭವ ಜಲಜಾಕ್ಷ ಶಕ್ರಾದಿಗಳು ಬಿಡದೆ
ಒಲಿದು ಪೂಜಿಪ ಲಿಂಗಮಂ ತಂದಿರೆಂದೆನುತ
ಇಳೆಯಾಣ್ಮ ಧನ್ಯನಾದೆನುಯೆಂದು ಮೆಚ್ಚುತ್ತ ಮನದೊಳಗೆ ಕೊಂಡಾಡುತ ೪

ಕಲಿಮಲಾಪಹಮೂರ್ತಿ ಮುನಿಜಾಲಸಂಪೂಜ್ಯ
ಚೆಲುವಾಯ್ತು ತತ್ಪುರದೊಳಮೃತೇಶಲಿಂಗಮಂ
ಒಲವಿನಿಂ ತೋರ್ದಿರಿನೆ ನಸುನಗುತ ಮನದೊಳಗೆ ಭೂಪಾಲಗಿಂತೆಂದನು
ನಲಿದು ತಲ್ಲಿಂಗಮಂ ನಂಬಿ ಪೂಜಿಪುದಿಂದು
ಕಲಿತ ಶ್ರೀಚೆನ್ನಗಿರಿ ಕ್ಷೇತ್ರಕ್ಕೆ ಪೋಪೆವೆನೆ
ಇಳೆಯಾಣ್ಮ ಕೇಳುತ್ತ ನಿಮ್ಮಗಲಿ ನಾನೆಂತು ಜೀವಿಸುವೆನೀ ಜಗದೊಳು ೫

ಎಂದು ದೈನ್ಯೋಕ್ತಿಯಿಂ ಕೈಮುಗಿದು ಬಿನ್ನೈಸ
ಲಂದು ಕಾರುಣ್ಯದಿಂ ನೋಡುತೆಲೆ ಭೂಪಾಲ
ಸಂದುದು ಕಣಾ ದೇವ ಸಿಂಧುಧರನಾಜ್ಞೆಯಿಂದೀ ಲೀಲೆ ಭೂತಳದೊಳು
ಚೆಂದದಿಂ ಚೆನ್ನಗಿರಿ ಕ್ಷೇತ್ರದೊಳ್ ನೆಲಸಿರ್ಪೆ
ಸಂದೇಹ ಬಿಡು ಮನದಿ ತಂತುಪಟನ್ಯಾಯದೊಲ್
ಸಂದಿರ್ಪೆ ನಿನ್ನೊಳಗೆ ಸದ್ಧರ್ಮದಿಂದಿರದೆ ನಾನೆಂದು ಪೂಜಿಸುತಿರೆ ೬

ಕೂರ್ಮಪೃಥಕನ್ಯಾಯದಂತೆ ಭೂಭಾಗದೊಳ್
ಪ್ರೇಮದಿಂ ಬಿಡದೆ ಘೋರ್ಪಡೆಯರಂ ಪಾಲಿಪುದು
ಕರ್ಮಹರನೆಂದೆನುತ ಬಿನ್ನೈಸೆ ಕರುಣದಿಂ ಸಂದೇಹ ಬಿಡು ಭೂಪತಿ
ಭರ್ಮಗಿರಿಮಂದಿರನ ಸಾವಂತಲಾ ನಿನಗೆ
ವರ್ಮಸ್ಥರಿಲ್ಲ ಸುಖದಿಂದಿರ್ಪುದೆಂದೆನುತ
ಶರ್ಮದ ಸದಾನಂದ ಮಹಲಿಂಗ ಹರಸುತ್ತ ಬೀಳ್ಕೊಡಲು ನಮಿಸುತ್ತಲಿ ೭

ಗಜರದನದಂತಲಾ ಮಹಿಮರಾಡಿದ ನುಡಿಯು
ನಿಜವೆಂದು ನಂಬುತ್ತ ಮನದೊಳಗೆ ಭಕ್ತಿಯಿಂ
ಕುಜನಪತಿ ಬಣ್ಣಿಸುತ ಬಂದು ರಾಜಾಲಯದಿ ಪರಮಸುಖದಿಂದಿರ್ದನು
ವೃಜಿನಸಂಹರನಿತ್ತ ಸುಜ್ಞಾನದಿಂದರಿದು
ಸುಜನ ಸನ್ನುತಯೋಗಿ ಗುರುಲಿಂಗಜಂಗಮವ
ಭಜಿಸುತ್ತ ಬರುತಿರ್ದ ಪರಮವೈಭವದಿಂದೆ ಮಹಲಿಂಗನಾಸಮಯದಿ ೮

ಆನೆಕಾಲೆಂಬ ದೇಶಾಧಿಪತಿ ಬಂದೊಡನೆ
ಮಾನನಿಧಿ ಮಹಲಿಂಗನಡಿಗೆರಗುತೆಲೆ ದೇವ
ಭೂನಾಥ ಮಾಲೋಜಿರಾಜನಂ ಪಾಲಿಸಿದ ತೆರದಿಂದೆ ಕಾರುಣ್ಯದಿಂ
ನಾಂ ನಿಮ್ಮ ಸೇವಕಂ ರಕ್ಷಿಸೆಂದೆನಲಾಗ
ಸಾನುರಾಗದ ಭಕ್ತಿಯಿಂ ಬಿಡದೆ ಬಿನ್ನೈಸೆ
ಮೌನೀಶ ಮಹಲಿಂಗ ಶಿವನಾಜ್ಞೆಯೆಂದೆನುತ ಮಾನಸದಿ ನಿಶ್ಚೈಸುತ ೯

ಬಂದು ದೇಶಾಧಿಪನ ಭಕ್ತಿಯಂ ಕೈಕೊಳಲು
ಸಂದ ಸಂಸ್ಥಾನದತ್ತಣ ಬ್ರಹ್ಮಹತ್ಯಮದು
ಚೆಂದಗೆಟ್ಟಾಕ್ಷಣದಿ ನಾಪೋಪೆನೀ ಮಹಿಮನಾವ ಕಡೆಯಿಂ ಬಂದನೋ
ಎಂದು ಬಿಟ್ಟೋಡುತಿರಲಾ ದೊರೆಯು ಮನಗಂಡು
ಇಂದುಧರ ಚಿದ್ರೂಪನಡಿಗೆರಗುತೆಲೆ ದೇವ
ಹೊಂದಿದ ಮಹಾದ್ರೋಹ ಬಯಲಾದುದೇನೆಂದು ಬಣ್ಣಿಸುವೆ ಭೂತಳದೊಳು ೧೦

ವಂಶಪಾರಂಪರಂ ಬ್ರಹ್ಮಹತ್ಯಂ ಸಾರ್ದು
ಕಂಸಾರಿ ಮೊರೆಹೊಕ್ಕರುಂ ಬಿಡದೆ ಕಾಡುತಿರೆ
ಸಂಶಯವದಿಲ್ಲೀಗ ಬಿಟ್ಟೋಡಿತೆಲೆ ದೇವ ನೀವಿರ್ಪುದೀ ಗ್ರಾಮದೊಳ್
ಹಂಸವಲ್ಲಭ ನಿಮ್ಮ ಮಹಿಮೆಯುಂ ನಂಬಿದೆಂ
ಹಂಸಾಕ್ಷನಂ ಬಿಟ್ಟಿನಲ್ಲದಲಿ ಮನ್ಮನೋ
ಹಂಸದೊಳು ಮಾರಾರಿಯಂ ಭಜಿಪೆನೆಂದೆನುತ ಕೊಂಡಾಡುತಿಂತೆಂದನು ೧೧

ಚೆನ್ನಗಿರಿ ಪಟ್ಟಣವ ನಿರ್ಮಿಸಿದ ತೆರದಿಂದೆ
ಎನ್ನಲ್ಪ ಭಕ್ತಿಯುಂ ಕೈಕೊಳ್ಳುವದೆಂದೆನುತ
ನನ್ನಿಯಿಂ ನಿಜಭೂಮಿಯುಂ ಕೊಟ್ಟು ನಮಿಸುತ್ತವರ ಲಿಂಗಮುದ್ರೆಗಳನು
ಉನ್ನತದಿ ನೆಲೆಗೊಳಿಸಿ ದಾನಪತ್ರಂಗಳಂ
ಮನ್ನಿಸುತ ಕೊಟ್ಟು ನಮಿಸುತ್ತಿರುತ ಭಕ್ತಿಯಿಂ
ಧನ್ಯನು ಕಣಾ ದೊರೆಯೆ ನೀನೆಂದು ಮಹಲಿಂಗನಳ್ಕರಿಂ ಕೈಕೊಂಡನು ೧೨

ಬಸವ ಪಟ್ಟಣವ ನಿರ್ಮಿಸುತಲ್ಲಿ ಮಹಿಮೆಗಳ
ವಿಸರಮಂ ಬೀರುತ್ತ ದೊರೆಯ ಸದ್ಭಕ್ತಿಗಿಂ
ದಸಮಾಕ್ಷನವತಾರನಿರಲಾಗ ತತ್ಪುರದಿ ಸದ್ಭಕ್ತ ಸನ್ಮಾನನು
ಅಸಮ ಶಿವಪದಪದ್ಮ ಪಂಕೇಜಷಟ್ಪದಂ
ಮಿಸುಪ ಸದ್ಗುಣಮಾಲ ಶಿವಶಾಸ್ತ್ರಕೋವಿದಂ
ಬಸವೇಶನಾಮದಿಂದಿರುತಿರ್ದ ಗುರುಲಿಂಗ ಜಂಗಮವ ಪೂಜಿಸುತ್ತ ೧೩

ಆತನರ್ಧಾಂಗಿ ಶಿವಶರಣಜನಸಂಪ್ರೀತೆ
ಪೂತೆ ಪತಿಭಕ್ತಿಸಂಜಾತೆ ಪಾಪೌಘವರ
ಧೂತೆ ತಾನೆಂದೆನಿಪ ಭಕ್ತಿಯಿಂ ಪತಿಯೊಡನೆ ಕೈಮುಗಿದು ಸೂಚಿಸಿದಳು
ಭೂತಳದಿ ಸಂಪೂಜ್ಯ ಮಹಲಿಂಗ ಜಂಗಮವು
ಸಾತಿಶಯದಿಂ ಸೋಮವಾರವಾಗಿಹುದಿಂದು
ಆತಂಗೆ ಬಿನ್ನೈಸಿ ಕರತರ್ಪುದೆಂದೆನಲು ಬಸವಾಖ್ಯ ಸಂತಸದೊಳು ೧೪

ಪೋಗಿ ಸದ್ಭಕ್ತಿಯಿಂದಾ ಮಹಿಮನಡಿಗೆರಗು
ತಾಗಮ ಸುಭೇದ್ಯ ಮಹಲಿಂಗ ಜಂಗಮನಾಥ
ರಾಗದಿಂದೆನ್ನ ಬಿನ್ನಪಕೆ ದಯಮಾಳ್ಪುದೆನೆ ಕಾರುಣ್ಯದಿಂ ಬಂದನು
ಯೋಗಿಸಂಪೂಜ್ಯನಂಘ್ರಿಗಳ ಭಜಿಸುತ್ತಮಿರ
ಲಾಗ ಮಂದಿರದೊಳಗೆ ಪರಿಪಾಕಮಂ ಮಾಡಿ
ರಾಗಪಲ್ಲವಪಾಣಿ ಮಡಿನೀರ ತರಲೆಂದು ಭರದಿಂದ ಬಂದಾಕ್ಷಣಂ ೧೫

ಕೂಪದೊಳಗಿಳಿದು ನೀರ್ದುಂಬುತಿರೆ ಕಾಲ್ದಪ್ಪಿ
ರೂಪವತಿ ಮುಳುಗುತ್ತ ಮಹಲಿಂಗನೆನೆ ಕೇಳಿ
ತಾಪತ್ರಯಾರಣ್ಯದಾವಾಗ್ನಿ ಮಹಲಿಂಗನರಿದಾಗ ಮಾನಸದೊಳು
ಆ ಪರಮ ಸದ್ಭಕ್ತೆ ಪದಪೂಜೆ ಮಾಡುತಿರೆ
ತಾ ಪೋಗಿ ಕೈವಿಡಿದು ಕಡೆದೆಗೆಯೆ ಸರ್ವಜನ
ವ್ಯಾಪಿಸುತ ನೋಡುತಿರೆ ನೀರ್ಮೊಗೆದುಕೊಂಡಾಗ ಶಾಂತಾಯಿ ಸದ್ಭಕ್ತಿಯಿಂ ೧೬

ಹಿಂಗದಲಿ ಬಂದಂಘ್ರಿಜಲವ ಸೇವಿಸುತಿರಲು
ಮಂಗಲಮಯಾಂಗ ನಸುನಗುತಿರಲು ಭಕ್ತಿಯಿಂ
ದಂಗನೆಯು ಪರಿಪಾಕಗಳ ಸುಮ್ಮನೆಡೆಮಾಡೆ ಸೇವಿಸಲ್ ತತ್ಶೇಷಮಂ
ಅಂಗಜಾರಿಯ ಭಕ್ತ ಬಸವಾಖ್ಯ ಭುಂಜಿಸಲ್
ಪಿಂಗಲಜಟಾಪಟಲ ಬಳಿಕ ಕಾರುಣ್ಯರಸ
ಸಂಗೊಳಿಸುತಿರೆ ಹೃದಯದೊಳ್ ಕೇಳ್ದನೆಲೆ ತಾಯೆ ತಡವಾದುದೇಂ ಕಾರಣಂ ೧೭

ಸರ್ವವ್ಯಾಪಕರೂಪ ವಿಸ್ಮಯವಲಾ ಜಗದಿ
ಸರ್ವಜನ ತಿಳಿವಂತೆ ನೀ ಬಂದು ಕೂಪದೊಳ್
ಪೂರ್ವರೂಪವ ತೋರಿ ಕೈಪಿಡಿದು ಕಡೆದೆಗೆದು ಬಂದಿಲ್ಲಿ ನೀವಿರ್ಪುದು
ಸರ್ವೇಶನೇ ಬಲ್ಲನೆಂದು ಸತಿಪತಿಗಳುಂ
ಉರ್ವಿ ಕೊಂಡಾಡುತಿರೆ ತತ್ಪುರದ ಮಧ್ಯದೊಳ್
ಗರ್ವಹರ ಮಹಲಿಂಗ ಪೂರ್ಣಕಾರುಣ್ಯದಿಂ ಬಸವೇಶನಂ ನೋಡುತ ೧೮

ಹರಭಕ್ತ ನಿನ್ನ ನಿಶ್ಚಲಭಕ್ತಿ ಧೈರ್ಯಕ್ಕೆ
ಕರುಣರಸ ಹೊರಸೂಸಿತಿನ್ನು ಜಂಗಮದಲ್ಲಿ
ಹರುಷದಿಂ ಪರಮಸೇವಕನಾಗಿ ನಂಬಿದರೆ ನಿಜವಂಶಪಾರಂಪರಂ
ಪರಿಪಾಲಿಸುತ್ತಿರ್ಪೆನಿದು ಸಹಜ ಭೂತಳದಿ
ಪರಮಪಂಡಿತರಾಗಿ ಜನಿಸಿ ಬಾಳುವರೆಂದು
ಪರಮಾತ್ಮ ಚಿದ್ರೂಪ ಮಹಲಿಂಗ ಪರಸಲ್ಕೆ ನಮಿಸುತ್ತ ಸತಿಪತಿಗಳು ೧೯

ನಂಬಿ ಶ್ರೀ ಮಹಲಿಂಗ ಜಂಗಮದ ಪಾದಮಂ
ಬೆಂಬಿಡದೆ ಸೇವಿಸುತ್ತಿರಲಾಗ ಭಕ್ತಿಯಿಂ
ಕುಂಭಿನಿಯು ತಿಳಿವಂತೆ ತದ್ಭಕ್ತನಾಲಯದಿ ಪರಮಾನುಭವಗೋಷ್ಠಿಯಿಂ
ಅಂಬುಜಾಂತಕನಾಶನಿರಲೊಂದು ದಿನದಲ್ಲಿ
ಅಂಬರಾಲಕನಸಮ ಲೀಲೆಗಳ ಬಸವಾಖ್ಯೆ
ನಿಂಬಿನಿಂ ಪೇಳುತಿರೆ ಕೇಳುತ್ತ ಕಾರುಣ್ಯಮಯನಿರ್ದನಾ ಪುರದೊಳು ೨೦

ಮತ್ತೊಂದು ದಿನದಲ್ಲಿ ಶಿವಯೋಗನಿದ್ರೆಯಿಂ
ಸತ್ತುಚಿತ್ತಾನಂದರೂಪನಿರೆ ಸ್ವಪ್ನದೊಳ್
ಉತ್ತಮೋತ್ತಮವಾದ ರಾಮಲಕ್ಷ್ಮಣರೆಂಬ ಲಿಂಗಗಳು ಬಂದಾಕ್ಷಣಂ
ಚಿತ್ತಜಾಂತಕಮೂರ್ತಿ ನಮಗೆ ಪೂಜಾರ್ಪಣವು
ಎತ್ತನೋಡಿದಡಿಲ್ಲದೀ ಪಾಳು ದೇಗುಲದಿ
[1]ನಿ[1]ತ್ಯಕ್ರಮಿಲ್ಲಿಂದು ಉದ್ಧರಿಸಬೇಕೆಂದು ಪೇಳುತ್ತ ಸರ್ವಜ್ಞನೊಳ್ ೨೧

ರಾವಣನ ಕೊಂದಿರ್ದ ದ್ರೋಹಕ್ಕೆ ರಾಮ ತಾಂ
ಕೋವಿದರ ಮುಖದಿಂದ ಕೇಳ್ದು ಸನ್ಮಾನದಿಂ
ಭೂವಲಯದೊಳಗಂದು ಬಹುಲಿಂಗಜಾಲಮಂ ನೆಲೆಗೊಳಿಸುತಾ ಸಮಯದಿ
ಪಾವನಾಮಲತಾಣಮೆಂದು ನಮ್ಮೀರ್ವರಂ
ತೀವಿದುತ್ಸಾಹದಿಂ ಸ್ಥಾಪನಂಗೈಯುತ್ತ
ಸೇವಿಸುತ ಸರ್ವಕರ್ಮಾತೀತನೆಂದೆನಿಸಿ ಮುಕ್ತನಾದನು ಜಗದೊಳು ೨೨

---

೧ ಉ (ಕ.) ವ (ಚ.)

ಈ ಕಾಲದೊಳು ನಮ್ಮನುದ್ಧರಿಸಬೇಕೆಂದು
ಆ ಕಾಲದೊಳು ಪೇಳಿ ಬಯಲಾಗೆ ಲಿಂಗಗಳು
ನಾಕಾಪಗಾಜೂಟನಾಜ್ಞೆ ಸಮನಿಸಿತೆಂದು ಸುಜ್ಞಾನದಿಂದರಿವುತ
ಲೋಕೈಕಸಂಪೂಜ್ಯ ಶಿವಯೋಗನಿದ್ರೆಯಿಂ
ದೇಕಾಂತದೊಳಗೆದ್ದು ಬಸವೇಶಭಕ್ತಗಂ
ಆ ಕಾಂತ ಸ್ವಪ್ನಸೂಚನೆ ಪೇಳೆ ಕೇಳುತ್ತ ಮನ್ನಾಥ ಮಹಲಿಂಗನೇ ೨೩

ಸತ್ಯಮೀ ಭಾಷಣಂ ರಾಮಲಕ್ಷ್ಮಣರೆಂಬ
ನಿತ್ಯಲಿಂಗಂಗಳುಂ ಪೂಜಾರ್ಪಣೆಲ್ಲದಲೆ
ಗೊತ್ತಿನೊಳಗಿಹವೆಂದು ನಮಿಸುತ್ತ ಪೇಳಲ್ಕೆ ಮಹಲಿಂಗಮುನಿಚಂದ್ರನು
ಮೃತ್ಯುಹರನಾಜ್ಞೆ ನಿಜವೆಂದೆನುತ ಮನದೊಳಗೆ
ಭೃತ್ಯಜನಪರಿಪಾಲ ಸರ್ವಜನ ತಿಳಿವಂತೆ
ಉತ್ತಮೋತ್ತಮವಾದ ರಾಮಾಖ್ಯಲಿಂಗಮಂ ತತ್ಪುರದಿ ನೆಲೆಗೊಳಿಸುತ ೨೪

ಲಕ್ಷಣೋಚಿತವಾದ ಲಕ್ಷ್ಮಣೇಶ್ವರನೆಂಬ
ಲಕ್ಷಿತ ಸುಲಿಂಗಮಂ ಕಾಲಾರಿ ಕ್ಷೇತ್ರದೊಳ್
ಪಕ್ಷದಿಂ ನೆಲೆಗೊಳಿಸಿ ಪ್ರಭುಲಿಂಗವೆಂದೊಡನೆ ಪೇಳುತ್ತ ಕಾರುಣ್ಯದಿಂ
ಅಕ್ಷಯ ಮಹಾರಾಮಲಿಂಗಕ್ಕೆ ಜಗಮರಿಯೆ
ಮೋಕ್ಷದಾಯಕಮಹಾಲಿಂಗನೆಂದೆನುತಿರಲು
ಸುಕ್ಷಣದೊಳಿಂತಸಮ ಮಹಿಮೆಗಳದೋರುತ್ತ ಮೆರೆದಿರ್ದನೇನೆಂಬೆನು ೨೫

ಕಂತುಮರ್ದನ ಮಹಾಲಿಂಗನಾ ಪುರದೊಳಗೆ
ಸಂತತಂ ಸಕಲ ಮಹಿಮೆಗಳ ತೋರುತ್ತಿರಲ್
ಸಂತಸದಿ ದೇಶಾಧಿಪತಿಮುಖ್ಯರುಂ ಬಿಡದೆ ಕೀರ್ತಿಸಲು ಭಯಭಕ್ತಿಯಿಂ
ಚಿಂತಿತ ಪದಾರ್ಥಗಳ ಪಾಲಿಸುತ ಭಕ್ತರಿಗೆ
ಭ್ರಾಂತಹರ ಮೆರೆದಿರ್ದನೆಂದು ಗಿರಿಜಾತೆಯೊಳ
ಗಿಂತು ಪೇಳುತ್ತಿರ್ದ ನಂದ್ಯಾದಿ ಪ್ರಮಥರಾಲಿಸುವಂತೆ ಪರಮಾತ್ಮನು ೨೬

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮನನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೨೭

ಅಂತು ಸಂಧಿ ೨೨ ಕ್ಕಂ ಪದ ೧೦೧೩ ಕ್ಕಂ
ಮಂಗಳಂ
ಶ್ರೀ

*

ಶ್ರೀ

# ಇಪ್ಪತ್ತುಮೂರನೆಯ ಸಂಧಿ

**ಸೂಚನೆ :** ಚೆನ್ನಗಿರಿ ಕ್ಷೇತ್ರಕ್ಕೆ ಬಂದು ಮುನಿಪೋತ್ತಮಂ
ನನ್ನಿಯಿಂ ಸರ್ವಭಕ್ತಾಳಿಯಂ ಪಾಲಿಸುತ
ಸನ್ನುತಾಮಲಮೂರ್ತಿ ಶಿವಯೋಗದೊಳ್ ಬಿಡದೆ ಸನ್ನಿಹಿತನಾಗಿರ್ದನು

ಉಕ್ಷಪತಿಲಕ್ಷಣ ತರಕ್ಷಭಸಿತಾಂಗ ಮುನಿ
ಪಕ್ಷ ವರ ಭಕ್ಷಪತಿ ಲಕ್ಷಿತಜಟಾಜೂಟ
ಯಕ್ಷಪತಿಮಿತ್ರ ಪಕ್ಷಭಕ್ಷಣ ಮಹಾಮಹಿಮ ಫಾಲಾಕ್ಷಸದ್ರಾಜಿತ
ದಕ್ಷಮುದಕಕ್ಷ ಹುತಭಕ್ಷ ಹರಿರ್ಯಕ್ಷಪದ
ರಾಕ್ಷಸಶಿರೋಪಕ್ಷ ದಾಕ್ಷಾಯಣೀಕಾಂತ
ಸಕ್ಷಮ ಸದಾನಂದ ಮೋಕ್ಷದಾಯಕ ಚೆನ್ನವೀರೇಶ ರಕ್ಷಿಸುವದು ೧

ಲಾಲಿಸೆಲೆ ಗಿರಿಜಾತೆ ಮಹಲಿಂಗಜಂಗಮದ
ಲೀಲೆಯಂ ತತ್ಪುರದಿ ಸರ್ವಭಕ್ತಾಳಿಯಂ
ಪಾಲಿಸುತ ದೇಶಾಧಿಪತಿಮುಖ್ಯರುಂ ಬಿಡದೆ ಪರಸುತ್ತ ಒಂದಿನದೊಳು
ಲೋಲ ಶ್ರೀ ಚೆನ್ನಗಿರಿಗೇಳ್ತಂದು ಮನದೊಳಗೆ
ಬಾಲಚಂದ್ರಕಿರೀಟನಂ ಬಿಡದೆ ಭಜಿಸುತ್ತ
ಕಾಲಕಲ್ಪವಿದೂರ ಬಸವೇಶ ಭಕ್ತನಿಂ ಶಿವಲೀಲೆಯಂ ಕೇಳುತ ೨

ಭಕ್ತಜನಮಧ್ಯದೊಳ್ ಭವದೂರ ನೆಲೆಗೊಂಡು
ರಕ್ತಿಯಿಂದಿರಲು ತಚ್ಛಾತ್ರಾಂತರಾಳದೊಳ್
ಮುಕ್ತಪಿಂಗಲಜಟಾಜೂಟಶೋಭಿತಮೌಳಿ ಮಹಲಿಂಗ ಸರ್ವಾತ್ಮಕಂ
ಯುಕ್ತಿಯಿಂ ನಸುನಗುತಮಿರೆ ಕಂಡು ಸರ್ವರುಂ
ಮುಕ್ತಿದಾಯಕ ನೀವು ನಕ್ಕುದೇಂ ಕಾರಣ ವಿ
ರಕ್ತಕುಲಪಂಚಾಸ್ಯ ವಿಸ್ಮಯವಲಾ ಜಗದೊಳೆಂದೆನುತ ಬಿನ್ನೈಸಲು ೩

ಕಳ್ಳನೋರ್ವನು ಬಂದು ಚೆನ್ನಗಿರಿದುರ್ಗದೊಳ
ಗುಳ್ಳ ಸನ್ನುತಚೆನ್ನಗಿರಿಲಿಂಗ ಧರಿಸಿರ್ದ
ಸಲ್ಲಲಿತವಸ್ತ್ರಾದ್ಯಲಂಕಾರಗಳ ಬಿಡದೆ ಕೊಂಡೀಗ ಭರದಿಂದಲಿ
ಸಳ್ಕೊರೆದು ಪೋಗುತಿಹನದಕಂಡು ಲಿಂಗದೊಳ್
ಸುಳ್ಳಲ್ಲ ನಗೆದೋರಿತಿಂದವನ ಕರೆಕೊಂಡು
ಕೊಲ್ಲದಲೆ ತರ್ಪುದೆಂದೆನುತಾಗ ಪೇಳಲ್ಕೆ ಪೋಗುತ್ತ ಘನದುರ್ಗದಿ ೪

ತುಡುಗೆಲ್ಲಮಂ ಕೊಂಡು ಬರುತಿರಲು ಭಯದಿಂದೆ
ಗಡಹದೊಳ್ ಕಂಡವನ ಕಡು ತವಕದಿಂ ಪಿಡಿದು
ಜಡಿಯುದಲೆ ಕರೆತಂದು ಕೊಡಲಾಗ ನಡುಗುತ್ತ ಮಹಲಿಂಗಮುನಿಪಾಲನ
ಅಡಿಗಳ್ಗೆ ನಮಿಸುತ್ತ ಬಡವನೆಲೆ ದೇವ ನಾ
ಒಡಲಕಿಚ್ಚಿಗೆ ಬಂದು ಮೃಡಲಿಂಗ ಭೂಷಣವ
ನೆಡೆವಿಡದೆ ಎಳೆದೊಯ್ಯುತಿಹ ಪಾಪಿಯಂ ನೋಡಿ ಪಾಲಿಪುದು ಕರುಣಾಬ್ಧಿಯೆ ೫

ಎಂದೆನುತೆ ಭಯದಿಂದ ಮುಂದುವರಿದಾಕ್ಷಣವೆ
ನೊಂದು ಮನದೊಳು ಕಂದಿ ಕುಂದುತ್ತಮಿರೆ ಕಂಡು
ಸಂದ ತಲ್ಲಿಂಗ ವರ ವಸ್ತ್ರಭೂಷಣಗಳಂ ಕಳ್ಳಂಗೆ ಕಾರುಣ್ಯದಿಂ
ಹಿಂದಕ್ಕೆ ಕೊಡಲಾಗ ಕಂಪಿಸುತ್ತಿಲೆ ದೇವ
ಇಂದು ನಾವೊಲ್ಲೆನುತ ಸೈಗೆಡೆದಿರಲು ಕಂಡು
ಮಂದಹಸಿತಾಸ್ಯದಿಂ ಮಹಿಮಾಕರಂ ನೋಡಿ ನಂಬುಗೆಯನೀವುತ್ತಲಿ ೬

ಮತ್ತೆ ಪೊಸವಸ್ತ್ರದ್ರವ್ಯಂಗಳಂ ತರಿಸಿ ಕರ
ಕಿತ್ತು ಕಳುಹಲ್ಕೆ ಭೀತಿಯನುಳಿದು ಭರದಿಂದ
ಚಿತ್ತದೊಳು ನಲವೇರಿ ಕಳ್ಳ ಪೋದನು ಬಳಿಕ ತನ್ನ ಮಂದಿರಕತ್ತಲು
ಸತ್ಯ ಶಿವಯೋಗೀಶನೇಂ ಕರುಣಿಯೋ ಜಗದಿ
ಮೃತ್ಯುಹರನೇ ಬಲ್ಲನೆಂದು ಸರ್ವರು ಪೊಗಳೆ
ಚಿತ್ರಜಾಂತಕರೂಪನಿರುತಿರ್ದನಾಪುರದೊಳೇನೆಂದು ಬಣ್ಣಿಸುವೆನು ೭

ಬಳಿಕೊಂದು ದಿನದಲ್ಲಿ ಭಕ್ತಿಯಿಂದೋರ್ವಬಲೆ
ಮಲಹರಾತ್ಮಕನಡಿಗೆ ನಮಿಸುತ್ತ ದೇವ ನಾ
ನಿಳೆಯೊಳಗೆ ಮಕ್ಕಳಿಲ್ಲದೆ ಬಾಳ್ದೆನರುವತ್ತು ವರುಷಪರಿಯಂತರದೊಳು
ತಿಳಿಯುತ್ತ ಜನರೆಲ್ಲ ಹುಟ್ಟುಬಂಜೆಯಿದೆಂದು
ಪಳಿವುತ್ತಮಿರಲಾಗ ನಾಚುತ್ತ ಮನದೊಳಗೆ
ಒಲಿದು ನಿಮ್ಮಡಿಕೂರ್ತು ವ್ರತವನಾಚರಿಸಿದರೆ ವರ್ಷದೊಳು ಫಲವಾದುದು ೮

ಈತನೇ ನಿಮ ಸುಕುಮಾರನೆಂದೆನುತಾಗ
ಪ್ರೀತಿಯಿಂ ಮಹಲಿಂಗನೆಂದು ಪೆಸರಿಟ್ಟಿರ್ಪ
ಓತು ಪಾಲಿಪುದೆಂದು ಕೊಂಡಾಡುತಿರೆ ನೋಡಿ ಕಾರುಣ್ಯದಿಂ ಪರಸುತ
ಭೂತನಾಥಂ ಕೊಟ್ಟ ಮೇಲಿನ್ನು ತಾಯೆ ನಿನ
ಗೇತರದು ಚಿಂತೆ ಬಿಡು ಪೋಗೆಂದು ಬೀಳ್ಕೊಡಲು
ಈತನ ಲೀಲೆ ಪೊಸತೆಂದೆನುತ ಭಕ್ತಜನ ಕೊಂಡಾಡುತಿಂತೆಂದರು ೯

ಪೂರ್ವದಲಿ ರೇವಣಾಸಿದ್ಧೇಶನೆಂದೆಂಬ
ಪೂರ್ವಪುರುಷನು ಮೊರಡಿಗೌಡ ಸುಗ್ಗಲಿಯರಿಗೆ
ಶರ್ವನಾಣತಿಯಿಂದೆ ವೃದ್ಧತ್ವದೊಳು ಬಂದು ಸೂತಕಿಲ್ಲದ ಕಾಲದಿ
ಸರ್ವಾತ್ಮಗತನೆನಿಪ ಸಿದ್ಧರಾಮೇಶನಂ
ಸರ್ವಜನಮರಿವಂತೆ ಪಾಲಿಸಿದನೆಂದು ನೆರೆ
ಸಾರ್ವ ಚಾರಿತ್ರಮಂ ಕೇಳ್ದು ಬಲ್ಲೆವು ಜಗದಿ ಬಳಿಕೀಗ ಮಹಲಿಂಗನು ೧೦

ಕೊಟ್ಟನೀ ಕಾಮಿನಿಗೆ ನಿಜನಾಮಬಾಲನಂ
ಬಟ್ಟಬಯಲಾದ ಪರಬೊಮ್ಮಾತ್ಮನೀ ಜಗದಿ
ಗಟ್ಟಿಗನಲಾ ಎಂದು ಕೊಂಡಾಡುತಿರೆ ಮತ್ತೆಮಹಲಿಂಗ ಜಗದಾರ್ಯನು
ಹುಟ್ಟುಹೊಂದಿಲ್ಲದ ಸದಾನಂದಮಯ ಕರ್ಮ
ಬಟ್ಟೆಯನು ಮೀರಿರ್ದ ಭಾವಜಾಂತಕಮೂರ್ತಿ
ನೆಟ್ಟನಾ ಛಾತ್ರಾಂತರಾಳದೊಳ್ ಮೆರೆದಿರ್ದ ಪರಮಾನುಭವಗೋಷ್ಠಿಯಿಂ ೧೧

ಇಂತಿರುವ ಯೋಗಿ ಗುರುಲಿಂಗೇಶನಂ ಬಿಡದೆ
ಸಂತತಂ ಸ್ಮರಿಸುತ್ತಲಿರಲೊಂದು ದಿನದಲ್ಲಿ
ಕಂತುಹರನಾಜ್ಞೆಯಿಂ ನೇತ್ರೌಘಮಂ ತೆಗೆದು ಶಾಂಡಿಲ್ಯಕುಜಮೂಲದೊಳ್
ಭ್ರಾಂತಹರನಿಟ್ಟಿರಲು ಭಾವ ತಿಳಿಯದೆ ಮುಗುಳೆ
ಸಂತಸದಿ ಸಿದ್ಧಾಯಿ ನಮಿಸುತ್ತ ಭಕ್ತಿಯಿಂ
ಅಂತಕಾಂತಕ ನಿಮ್ಮ ಪಿಂಗಲಜಟಾಪಟಲ ಕಾಣದಿರ್ಪವು ಶಿರದೊಳು ೧೨

ಬಲುಕಾಲ ನಂಬಿರ್ದೆ ನಾ ನಿಮ್ಮ ಕಾರುಣ್ಯ
ದೊಲುಮೆಯುಳ್ಳವಳಿನ್ನ ಮುಂದೆ ನೀ ಪೇಳದಿರಿ
ಬಳಿಕ ತನ್ನೇತ್ರಮಂ ದಯಮಾಡಿ ಕೊಡದಿರಲು ನಿಮ್ಮಡಿಗೆ ಮತ್ಪ್ರಾಣಮಂ
ಛಲದಿಂದ ಕೊಟ್ಟಪೆಂ ಸತ್ಯಮೀ ಭಾಷಣಂ
ಮಲಹರಾತ್ಮನೆ ಎಂದು ಜಲಜಾಕ್ಷಿ ಮನದೊಳಗೆ
ಬಳಲುತ್ತ ಬಿನ್ನೈಸಿ ಭೋಜನಂಗೈಯದಿರೆ ತಿಳಿದಾಗ ಸರ್ವಾತ್ಮಕಂ ೧೩

ಅಚ್ಚರಿಯಲಾ ತಾಯೆ ಬಿಡು ನಿನ್ನ ಪಂಥಮಂ
ಮಚ್ಚಿದೆನು ಶಾಂಡಿಲ್ಯಮೂಲದೊಳಗಿಹುದೆಂದು
ಬಚ್ಚಬರಿ ಪರಬೊಮ್ಮ ತರಿಸುತ್ತ ಕೊಡಲಾಗ ತಾನುಂಡು ಸಂತಸದೊಳು
ನಿಶ್ಚಲದಿ ನಂಬಿ ಪೂಜಿಸುತಿರ್ದಳಾ ಬಾಲೆ
ಸಚ್ಚರಿತ ಮಹಲಿಂಗ ಜಂಗಮದ ಲೀಲೆಯಿದು
ಪೊಚ್ಚಪೊಸತೆಂದು ಸರ್ವರು ಪೊಗಳೆ ಒಪ್ಪಿದನು ಭೂತಳದೊಳಾ ಮಹಿಮನು ೧೪

ಇಂತೆಸೆವ ಮಹಿಮೆಗಳ ಬೀರುತ್ತ ಚೆನ್ನಗಿರಿ
ಪ್ರಾಂತದೊಳು ಮಹಲಿಂಗ ಜಂಗಮಂ ಮೆರೆವುತ್ತ
ಭ್ರಾಂತಮಾಯಾರಹಿತನೆಂದೆನಿಸಿ ಶಿವಯೋಗನಿದ್ರೆಯೊಳು ನೆರೆಸಂದಿರೆ
ಕಂತುಮದಮರ್ದನ ಮಹಾದೇವ ತಾ ಮುನ್ನ
ಅಂತರಿಸದಲಿ ಪೇಳ್ದ ಭಾಷೆಯಂ ನೆನೆದಾಗ
ಸಂತಸದಿ ನಿಜರೂಪಮಂ ತೋರ್ದ ಸ್ವಪ್ನದೊಳಗೇನೆಂದು ಬಣ್ಣಿಸುವೆನು ೧೫

ಪಿಂಗಲಜಟಾಪಟಲ ತಿಂಗಳಕಳಾಭರಣ
ಸಂಗತ ಮಹಾದೇವ ಗಂಗೋತ್ತಮಾಂಗ ಸುಪ
ತಂಗ ಮರುತಾಪ ವಿಧುಪೇತ ವರ ಪಂಚಮುಖ ಸಿತಕಂಠ ಶ್ರೀಶೈಲಜಾ
ಲಿಂಗಿತಕಳೇವರ ಭುಜಂಗಪತಿಸೂತ್ರ ಮಾ
ತಂಗಚರ್ಮಾಂಬರದ ದಶಬಾಹುಸಂಕಲಿತ
ಮಂಗಲಮಯಾಂಗ ನಿಜರೂಪಮಂ ತೋರಿಸಿದನೇನೆಂಬೆನಚ್ಚರಿಯನು ೧೬

ಶೂಲವಜ್ರಖಡ್ಗವರಪರಶುನಂಬಿಗಿಯು
ವ್ಯಾಲಪಾಶಂಘಂಟೆಶಣಿವರದ ಕರಗಳಿಂ
ದಾಲಲಿತ ಘನರುಂಡಮಾಲೆಯಿಂ ಕಂಪಾಣಿ ಮೃಗ ಢಕ್ಕೆ ಖಟ್ವಾಂಗದಿ
ನೀಲಾಂಗನೇತ್ರಪೂಜಿತಪಾದ ಸ್ಮರಭಸ್ಮ
ಲೋಲ ವ್ಯಾಘ್ರಾಜಿನದ ಥಲದಿಂದಲೆಸೆವ ಸುವಿ
ಶಾಲ ರೂಪವ ತೋರ್ದನಾ ಕಾಲದೊಳು ಸಾಂಬ ಮಹಲಿಂಗ ಜಗದಾರ್ಯಗೆ ೧೭

ರೂಪಮಂ ಕಂಡಾಗ ಶಿವಯೋಗನಿದ್ರೆಯೊಳ
ಗೀ ಪರಿಯಲೀಂ ಪೊಸತು ಶ್ರೀಗಿರಿಸುತಾಕಾಂತ
ಪಾಪಹರ ನೀ ಬಂದ ಕಾರಣವ ಪೇಳೆನಲು ನಸುನಗುತ ಗಂಗಾಧರಂ
ತಾಪತ್ರಯಾಂಬೋಧಿಬಾಡಬಂ ಮಹಲಿಂಗ
ಭೂಪವಿತ ವ ಮಾಡಲೋಸುಗದಿ ನಾ ನಿಮ್ಮ
ರೂಪಮಂ ಕಳುಹಿರ್ದೆ ಸಾಕಿನ್ನು ಲೀಲೆಯಿದು ಪರಿಪೂರ್ಣ ತಾನಾದುದು ೧೮

ಎಂದೆನುತ ಪೇಳಲ್ಕೆ ಶ್ರೀಶೈಲಜಾವರನ
ಮಂದಹಸಿತಾಸ್ಯದಿಂ ನೋಡುತ್ತ ಮನ್ನಾಥ
ಸಂದುದು ಕಣಾ ನಿಮ್ಮ ಕಾರುಣ್ಯದಿಂ ಲೀಲೆ ಸಾಕಿನ್ನು ಭೂತಳದೊಳು
ಮುಂದಿನ್ನು ಪರಿಪಾಲಿಸುತ್ತಿರುವ ತಾಣಮಂ
ಚೆಂದದಿಂ ಸೂಚಿಸುವದೆಂದು ಬಿನ್ನೈಸುತಿರ
ಲಿಂದುಧರ ಮೆಚ್ಚಿ ಮನವೊಳಗೆ ಮುನಿಪೋತ್ತಮನ ಮಾತಿಂಗೆ ಸಂತಸದಲಿ ೧೯

ಜನನಮರಣಗಳಿಲ್ಲದಿಹ ಜಂಗಮಕ್ಕಿನ್ನು
ತನುಗುಣವದೆಲ್ಲಿಹುದು ಚೆನ್ನಗಿರಿ ಮಧ್ಯದೊಳ್
ಮನಸಿಜಾಂತಕಮೂರ್ತಿ ಶಿವಯೋಗದೊಳ್ ಬೆರೆದುಮಿರ್ಪುದೆಂದಾಕ್ಷಣದೊಳು
ಕನಸಿನೊಳ್ ಪೇಳ್ದು ಪರಸುತ್ತ ಬಯಲಾಗಲ್ಕೆ
ಘನಮಹಿಮ ಶಿವಯೋಗನಿದ್ರೆಯಿಂದೆಚ್ಚತ್ತು
ವಿನುತ ಶ್ರೀ ಚೆನ್ನಗಿರಿನಾಥನಾಲಯಮಿಂದು ಪರಿರಮ್ಯವಾಗಿರ್ಪುದು ೨೦

ಲಿಂಗದೊಳು ನೆಲೆಸಿರ್ಪ ಮಹಲಿಂಗ ಜಂಗಮಂ
ಅಂಗಜಾರಿಯ ಭಕ್ತರಂ ಪರಸುತಾಕ್ಷಣದಿ
ತುಂಗ ಶ್ರೀ ಚೆನ್ನಗಿರಿಗೆಯ್ತಂದು ನೆಲೆಸಿರ್ದ ಸರ್ವಸಂಗವನಳಿವುತ
ಮಂಗಲಮಹಾಮಹಿಮಯೋಗಿ ಗುರುಲಿಂಗನಂ
ಪಿಂಗದಲೆ ಹೃತ್ಕಮಲಮಧ್ಯದೊಳ್ ಧ್ಯಾನಿಸು
ತ್ತಂಗ ಗುಣಗಳ ಮೀರಿ ಮೆರೆದಿರ್ದನಾ ಮಹಿಮನೇನೆಂದು ಬಣ್ಣಿಸುವೆನು ೨೧

ಶ್ರೀಶೈಲಜಾಕಾಂತನೇಂ ಕರುಣಿಯೋ ಬಳಿಕ
ಈ ಶೈಲದೊಳಗಿರ್ಪುದೆಂದೆನುತ ನೆರೆ ಪೇಳ್ದ
ಭೂಶೈಲವಲ್ಲಲಾ ಬಣ್ಣಿಪಡೆ ಬಳಿಕಿನ್ನು ಭೂಮಂಡಲದ ಭಾಗದಿ
ಶ್ರೀಶೈಲಮೆಂದೆನುತ ಭಾವಿಸುತ ಮಹಲಿಂಗ
ನಾ ಶೈಲಧರ್ಮನಂ ಸ್ಮರಿಸುತ್ತ ಘನಕೆಘನ
ಶ್ರೀಶೈಲವಾಸ ಸೂಚಿಸಿದಂತೆ ನೆಲಸಿರ್ದನೇನೆಂಬೆನಚ್ಚರಿಯನು ೨೨

ಪಿಂಗಲಜಟಾಪಟಲರಂಜಿತಮಹಾಲಿಂಗ
ಸಂಗತ ಶಿವಾಕ್ಷಿಮಣಿಮಾಲೆಧೃತ ಕಂಠದಿಂ
ತುಂಗ ಶ್ರೀ ಭಸ್ಮಲೇಪನಕಾಯ ತ್ರ್ಯಪುಂಡ್ರಸಂಕಲಿತ ೧[ಸಿರಿನೊಲಸಿನ]೧
ಪಿಂಗದಿಹ ಜಪದಕ್ಷಮಾಲೆಸನ್ನಿಹಿತಕರ
ದಿಂಗಿತವನರಿದು ಬಿಡದುಪಚರಿಪ ಶಿವಮಂತ್ರ
ಕಂಗೊಳಿಪ ಯೋಗವಟ್ಟಿಗೆ ವೇತ್ರ ಕಂಡಲದಿ ಮೆರೆದಿರ್ದನಾ ಮಹಿಮನು ೨೩

ಅಷ್ಟಾಂಗಯೋಗ ಲಕ್ಷಣಸಹಿತ ಶೀಲಂಗೆ
ನಿಷ್ಠೆಯಿಂ ಮಾಳ್ಪುದೇಂ ಕಾರಣಂ ಭಾವಿಪಡೆ
ಸೃಷ್ಟಿರಕ್ಷಣ್ಯಲಯರಹಿತಂಗೆ ಜರೆ ಜನ್ಮ ಸುಖ ದುಃಖಗಳ ಮಾರ್ಗದ
ಭ್ರಷ್ಟ ಕಲ್ಪನೆಯ ಪೇಳುವದು ನಿಜವಲ್ಲೆನುತ
ಶಿಷ್ಟಜನಪರಿಪಾಲ ಮಹಲಿಂಗ ಜಂಗಮಂ
ಶ್ರೇಷ್ಠನೆಂದೆನಿಸಿ ಮೆರೆದಿರ್ದ ನಿಜಲೀಲೆಯಿಂದಾ ಮಹಿಮನೇನೆಂಬೆನು ೨೪

ಪಂಚೇಂದ್ರಿಧರ್ಮಗಳನತಿಗಳೆದು ಘನಮಹಿಮ
ಪಂಚವಿಷಯಾತೀತ ಪಾವನಾತ್ಮಕದೇವ
ಪಂಚತತ್ತ್ವವಿಚಾರ ಪಂಚಶರಸಂಹಾರ ಪರಿಪೂರ್ಣ ಸರ್ವಾತ್ಮಕ
ಸಂಚಿತಾಗಾಮಿಪ್ರಾರಬ್ಧಮಾರ್ಗವಿದೂರ
ಪಂಚಾಸ್ಯನವತಾರ ಪರಬ್ರಹ್ಮಸುಖಸಾರ
ಪಂಚಾಕ್ಷರಾಕಾರ ಪರಮೇಶ ಮೆರೆದಿರ್ದ ನಿಜಲೀಲೆಯಿಂ ಗಿರಿಯೊಳು ೨೫

ನಿರುಪಮ ನಿರಾಲಂಬ ನಿಗಮಾಗಮಾತೀತ
ನಿರಘ ನಿರಹಂಕಾರ ನಿರ್ಮಲ ನಿರಾತಂಕ
ನಿರುಪಾಧಿಕಂ ನಿತ್ಯ ನಿಷ್ಕಳ ನಿರಾವರಣ ನಿರ್ಮಾಯ ನಿರುಪಾಧಿಕ
ನಿರುಪಾಯ ನಿರ್ಲಕ್ಷ್ಯ ನಿರ್ಭೇದ್ಯ ನಿರ್ದ್ವಂದ್ವ
ಪರಮಾತ್ಮ ಪರಬ್ರಹ್ಮ ಪರಿಪೂರ್ಣ ಪರಮೇಶ
ಮರಣಹರ ಮಹಲಿಂಗ ಮೆರೆದಿರ್ದನಾ ಗಿರಿಯೊಳೇನೆಂದು ಬಣ್ಣಿಸುವೆನು ೨೬

---

೧ ಪರಪಾದದ (ಕ. ಚ.)

ಯಮನಿಯಮಧ್ಯಾನಧಾರಣಮುಖ್ಯಯೋಗಗಳ
ಕ್ರಮವನರಿದಾ ಮಹಿಮ ನಿಜಲೀಲೆಯಿಂದೊಡನೆ
ಪ್ರಮುದದಿಂದಾಚರಿಸುತುನ್ಮನಿಯ ಮಧ್ಯದೊಳ್ ಥಳಥಳಿಸಿ ನೆರೆಮಿಂಚುವ
ಕಮಲಾಪ್ತಕೋಟಿ ಸಂಕಾಶಮಂ ಕೀಳ್ಪಡಿಪ
ವಿಮಲ ಪರಬ್ರಹ್ಮದೊಳ್ ಸ್ವೈರೆರಿದ ಸುಖದಿಂದೆ
ರಮಿಸುತ್ತ ಮಹಲಿಂಗ ಜಂಗಮಂ ಮೆರೆದಿರ್ದನಾ ಪುಣ್ಯಮಯ ಗಿರಿಯೊಳು ೨೭

ಶಿಲದೊಳಗೆ ತೈಲಮುಂ ಕುಸುಮದೊಳು ಪರಿಮಳಂ
ಜಲದೊಳಗೆ ಶೀತೋಷ್ಣಗಳು ಪಾಲಿನೊಳಗಿನಿದು
ಕಲಧೌತದೊಳು ಛಾಯೆ ನೆಲೆಗೊಂಡ ತೆರದಿಂದೆ ಮಹಲಿಂಗ ಮುನಿಚಂದ್ರನು
ಒಲಿದು ಬ್ರಹ್ಮಾನಂದದೊಳ್ ಬೆರೆದ ಸುಖದಿಂದೆ
ಸುಳುವಡಗಿ ಸ್ಥಾಣು ವೃಕ್ಷನ್ಯಾಯದಿಂದಿರ್ದ
ಬಳಿಕ ಬಣ್ಣಿಪುದೆನುತ ತದ್ಗಿರಿಯ ಮಧ್ಯದೊಳು ಗಿರಿಜಾತೆ ಲಾಲಿಸುವದು ೨೮

ಇಂತೆಂದು ಮಹಲಿಂಗ ಜಂಗಮದ ಲೀಲೆಯಂ
ಕಂತುಮದಮರ್ದನ ಮಹಾದೇವ ಪ್ರಮಥಗಣ
ಸಂತತಿಯ ಮಧ್ಯದೊಳು ಪರಿಪೂರ್ಣಮಾಯ್ತೆನುತ ಶ್ರೀಶೈಲಜಾಕಾಂತೆಯೊಳ್
ಸಂತಸದಿ ಪೇಳುತಿರೆ ಕೇಳುತ್ತ ಭಕ್ತಿಯಿಂ
ದಂತಗಿಸದಾಕ್ಷಣದಿ ನಮಿಸುತ್ತ ಕೀರ್ತಿಸಲು
ಅಂತಕಾಂತಕ ದೇವನೊಪ್ಪಿರ್ದ ಕೈಲಾಸಮಂದಿರದೊಳೇನೆಂಬೆನು ೨೯

ಇದು ಬಸವಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಂ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮುದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿಕರ್ಮಗಳ ಮೀರಿ ಸಕಲಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಿಪಥದೊಳಗಿಪ್ಪರು ೩೦

ಅಂತು ಸಂಧಿ ೨೩ ಕ್ಕಂ ಪದ ೧೦೪೩ ಕ್ಕಂ

ಮಂಗಳಂ

ಶ್ರೀ



ಮಹಲಿಂಗಮುನಿನಾಥನ ಮಠ

ಶ್ರೀ

# ಇಪ್ಪತ್ತನಾಲ್ಕನೆಯ ಸಂಧಿ

ಸೂಚನೆ : ಇಂಧುಧರ ಪೇಳ್ದ ಮಹಲಿಂಗಲೀಲೆಯು ಬಿಡದೆ
ನಂದಿ ಮೊದಲಾದ ಪ್ರಮಥರು ಕೇಳ್ದು ಭಕ್ತಿಯಿಂ
ವಂದಿಸುತ ಅಗಜಾತೆ ಸಹಿತ ಕೈಲಾಸದೊಳಗೊಪ್ಪಿರ್ದರೇನೆಂಬೆನು

ಶ್ರೀನಗಸುತಾಬಾಹುಕಲ್ಪವಲ್ಲರಿಮೂಲ
ಸ್ಥಾನ ಸಂಜನಿತ ಸರ್ವೋದ್ಗಮ ಸುಗುಚ್ಛಮಧು
ಪಾನ ಸಂಭ್ರಮ ಭ್ರಮದ್ಭ್ರಮರಾಯಮಾನ ನಯನದ್ವಯಾಮಲ ಶಂಕರ
ಮೌನಿಜನ ಮಾನಸಾಂಭೋಜ ಭಾಸ್ಕರರೂಪ
ಕಾನನಾಂಬುಜ ಕಲಿತ ಕರಪದ್ಮ ಕರ್ಮಹರ
ಭೂನುತಾಮಲಮೂರ್ತಿ ಶ್ರೀಚೆನ್ನವೀರೇಶ ಪಾಲಿಪುದು ತ್ರೈಲೋಕಮಂ ೧

ಹೈಮವತಿ ಚಿತ್ತೈಸು ಮಹಲಿಂಗ ಜಂಗಮಂ
ಪ್ರೇಮದಿಂದಾ ಶೈಲಮಧ್ಯದೊಳ್ ಬಿಡದೆ ನಿ
ಷ್ಕಾಮಿಯಾಗಿರ್ದನೇಂ ಮಹಿಮನೋ ಶಿವಯೋಗನಿದ್ರೆಯೊಳು ನೆರೆಮರೆಯುತ
ಭೂಮಹಿತ ತ್ರಿವಿಧಭ್ರಾಂತಿಯನಳಿದು ಸಂಚಲದ
ಸೀಮೆಯನು ಮೀರಿ ಪರಬ್ರಹ್ಮದೊಳ್ ಸೇರಿ ಘನ
ವ್ಯೋಮಮಂಡಲದಂತೆ ನಿರ್ಮಾಯ ಗುಣರಹಿತ ನಿಶ್ಚಲದಿ ಮೆರೆದಿರ್ದನು ೨

ಜಯ ಜಯ ಮಹಾಲಿಂಗ ಮೂರ್ತಿ ಜಂಗಮನಾಥ
ಜಯ ಜಯ ನಿಜಾನಂದ ತ್ರೈಲೋಕ ವಿಖ್ಯಾತ
ಜಯ ಜಯ ಜರಾಮರಣ ಸಂಹರಣ ಸರ್ವೇಶ ದುಷ್ಕರ್ಮವನಪಾವಕ
ಜಯ ಜಯ ಚಿದಾಕಾರ ಸತ್ಕೀರ್ತಿ ವಿಸ್ತಾರ
ಜಯ ಜಯ ನಿರಾಲಂಬ ಯೋಗಿಜನ ಸಕುಟಂಬ
ಜಯ ಜಯ ಸದಾಮಹಿತ ಶೀಲಸದ್ಗುಣಮಾಲ ಸದ್ಭಕ್ತಜನ ಸೇವಿತ ೩

ತ್ರಾಹಿ ಮಾಂ ಶರ್ಮದ ಸದಾ ಮಹಿತ ಮಹಲಿಂಗ
ತ್ರಾಹಿ ಮಾಂ ಸದ್ಭಕ್ತಜನ ಬಂಧು ಮಹಲಿಂಗ
ತ್ರಾಹಿ ಮಾಂ ಶರಣಾಗತಾರ್ಥಿ ಸನ್ನುತಶೀಲ ಸರ್ವಜ್ಞ ಸರ್ವಾತ್ಮಕ
ತ್ರಾಹಿ ಮಾಂ ನಿರ್ಲೇಪ ನಿತ್ಯ ನಿರಹಂಕಾರ
ತ್ರಾಹಿ ಮಾಂ ಶಾಂತಿ ದಾಂತಿ ವಿಹಾರ ಚಿತ್ಸಾರ
ತ್ರಾಹಿ ಮಾಂ ಸಕಲೈಕನಾಥ ಗುರು ಮಹಲಿಂಗ ಮುನಿನಾಥ ಸರ್ವಾತ್ಮಕ ೪

ಶರಣು ಶಾಶ್ವತಮೂರ್ತಿ ಮಹಲಿಂಗ ಜಗದೀಶ
ಶರಣು ಶರಣಾಂಬೋಧಿ ಕಾಲಹರ ಸರ್ವೇಶ
ಶರಣು ಸಚ್ಚರಿತ ಮಹಲಿಂಗ ಮನ್ನಾಥ ಸದ್ಭಕ್ತರಿಗೆ ಸುರಪಾದಪ
ಶರಣು ಮಹಲಿಂಗ ಮನ್ನಾಥ ಮಾಯಾಧ್ವಂಸ
ಶರಣು ಶಂಕರ ಹೃದಯ ಸಂತೋಷಕರ ರೂಪ
ಶರಣು ಭವಸಾಗರಮಹಾಭೈತ್ರ ಮಹಲಿಂಗ ಶರಣಾಗು ಸಂತಸದೊಳು ೫

ಪರಿಪೂರ್ಣಮಹಿಮ ನಿಮ್ಮಸಮಕಾರುಣ್ಯದಿಂ
ಪರಮಲೀಲೆಯ ಪೇಳ್ದೆನಿದು ಜಗದಿ ಪೂಜ್ಯಮಾ
ಗಿರುವಂತೆ ಕಾರುಣ್ಯಮಂ ಕರೆದು ಪಾಲಿಪುದು ಭೂತಳದ ಸದ್ಭಕ್ತರೊಳ್
ತರಣಿತಾರಾಧಿಪತಿ ನಭಗಳಿರ್ಪನ್ನೆಬರ
ಶರಣ ಮಹಲಿಂಗ ಜಂಗಮ ನಿನ್ನ ವರಕೃತಿಯು
ಮೆರೆದಿರಲಿ ಮನ್ನಾಥ ಮರಣಹರ ಮದನಾಶ ಮಾರಾರಿ ಮಹಿಮ್ಮಾಕರ ೬



ಮಹಲಿಂಗ ಮುನಿನಾಥನ ಗದ್ದುಗೆ

ನಂದಿರೇಣುಕದಾರುಕಾದಿ ಭೃಂಗೀಶ ಗಣ
ವೃಂದ ಪದಪದ್ಮಮಕರಂದಮತ್ತಾಳಿಯಾ
ಗಿಂದು ಮನ್ಮಾನಸಂ ರವಿಃಸುತಿರೆ ಎಡೆವಿಡದೆ ಶ್ರೀಪ್ರಮಥಗಣನಾಥರಂ
ಚೆಂದದಿಂ ಬಣ್ಣಿಸುತ ಮಹಲಿಂಗ ಜಂಗಮದ
ಸಂದಲೀಲೆಯ ಪೇಳ್ದೆನಿದು ಜಗದಿ ಕೋವಿದರ್
ಮಂದ್ಮೆಪ ಭಕ್ತಿಯಿಂದಾಲಿಸುಗೆ ಭೂತಳದಿಯನುದಿನಂ ಸಂತಸದೊಳು ೭

ಭದ್ರಮಯ ಬ್ರಹ್ಮಾಂಡ ಮಂಡಲಮಹಾಪೂಜ್ಯ
ಕ್ಷುದ್ರ ಪಾಪಾಳಿಹರ ಪಾವನ ಮಹಾಶೀಲ
ಚಿದ್ರಮಣ ಕಾಲಕವರ್ಮಾರಣ್ಯಸಪ್ತಾರ್ಚಿಸಮರೂಪನೆಂದೆನಿಸುವ
ರುದ್ರಾದಿವರರುದ್ರರಂಘ್ರಿಯಂ ಭಜಿಸಿ ಭೂ
ರುದ್ರ ಮಹಲಿಂಗನ ಸುಲೀಲೆಯಂ ಪೇಳ್ದೆನಿದು
ಸದ್ರಸಿಕ ಜನರ ಕರ್ಣಾಭರಣಮೆಂದೆನಿಸಿ ರಂಜಿಸಲು ಭೂತಳದೊಳು ೮

ಬಿಸಲಾಕ್ಷ ಬ್ರಹ್ಮಾದಿಗಳ ಪದವ ಲೆಕ್ಕಿಸದೆ
ಅಸಮಾಕ್ಷನವತಾರ ದುರಿತೌಘಸಂಹಾರ
ಕುಸುಮಶರಮದಭಂಗ ಹೃತ್ಪದ್ಮಸುಪತಂಗ ಸುರಜಾಲಸಂಪೂಜಿತ
ವಿಸುಪಸಮ್ಯಜ್ಞಾನಸಂಪೂರ್ಣರೆಂದೆನಿಪ
ವೃಷಭಯೋಗಾಚಾರ್ಯರಸಮ ಕಾರುಣ್ಯದಿಂ
ಒಸೆದು ಮಹಲಿಂಗಲೀಲೆಯ ಪೇಳ್ದೆನಿದು ಜಗದಿ ಸುಶ್ರಾವ್ಯಮಾಗಿರ್ಪುದು ೯

ಶ್ರೀಗಿರಿಸುತಾವರನ ಪಾದಪಂ ಭಕ್ತಿಯಿಂ
ದಾಗಮವಿಧಾನದಿಂದೆಡೆವಿಡದೆ ಭಜಿಸುತ್ತ
ಭೂಗಗನದಿಗ್ಪುರಿತ ಸತ್ಕೀರ್ತಿಯಿಂ ಬಳಿಕ ಪುರಸಹಿತ ಕೈಲಾಸಕೆ
ಪೋಗಿ ಶಿವ ಸಾಮಿಪ್ಯದೊಳ್ ಬೆರೆದು ಸಂತತಂ
ರಾಗದಿಂ ನೆಲಸಿರ್ಪ ಶ್ರೀಪುರಾತರ ಬಲದಿ
ಸಾಗಿಸಿದ ಮಹಲಿಂಗ ಕೃತಿಯು ರಂಜಿಸುತಿರ್ಕೆ ಮೃಡಭಕ್ತ ಸಂತಾಣದೊಳ್ ೧೦

ಇಂದ್ರಭೋಗಾದಿಗಳು ತೃಣವೆಂದು ಧಿಕ್ಕರಿಸಿ
ಚಂದ್ರಧರನರ್ ಒಲಿಸಿ ಸಾರೂಪ್ಯದೊಳ್ ನಿಂದ
ಸಾಂದ್ರತರ ತೇರಸರ ಷೋಡಶರ ಕಾರುಣ್ಯದಿಂ ಲೀಲೆಯಿಿದ ಪೇಳ್ದೆನು
ಚಂದ್ರತಾರಾಮಂಡಲಂಬರಗಳಿರ್ಪನ್ನ
ರುಂದ್ರಮಾಗಿರಲಿ ಭೂತಳದ ಸತ್ಕವಿಜಾಲ
ಚಂದ್ರಮುಪಾಲಿಸುಗೆ ಲಾಲಿಸುಗೆ ಸಂತತಂ ಕಾರುಣ್ಯದಿಂ ನೋಡುತ ೧೧

ಪಶುಪತಿಯ ಸಮರೂಪನೆಂದೆನಿಪ ಸತ್ಕೀರ್ತಿ
ಪ್ರಸರರಂಜಿತ ಪರಮ ಸದ್ಧರ್ಮ ಸನ್ನಿಹಿತ
ವಿಸುಪ ಸಮ್ಯಜ್ಞಾನ ಸಂಪೂರ್ಣ ಸುಖಧಾಮ ಸುತ್ರಾಮ ಮುಖದೇವತಾ
ವಿಸರ ಸಂಪೂಜ್ಯ ವಿಲಯಾತೀತ ವರ ಮಹಿಮ
ಅಸಮಾಕ್ಷನಂ ಒಲಿಸಿ ಸಾಯುಜ್ಯದೊಳ್ ನಿಂದ
ರಸಿಕ ತೇರಸರಂಘ್ರಿಯಂ ಬಿಡದೆ ಬಣ್ಣಿಸುತ ನಿರ್ಮಿಸಿದೆ ಸಲ್ಲೀಲೆಯಂ ೧೨

ಬಸವಾದಿ ಪ್ರಮಥರ ಸುಪದಪದ್ಮದೊಳ್ ಮುದಿತ
ಮಿಸುಪ ಷಟ್ಪದನೆನಿಪ ಬಸವ ಸುಕುಮಾರಕಂ
ಒಸೆದು ನಿರ್ಮಿಸಿದ ವರಲೀಲೆಯಿದು ಭೂತಳದಿ ಸಂಸೇವ್ಯಮಾಗಿರ್ಪುದು
ರಸಿಕಾವತಂಸನೆಂದೆನಿಪ ಸದ್ಭಕ್ತಜನ
ವಿಸರಕ್ಕೆ ಸಂತಸವ ನೆರಪುತ್ತ ಸಂತತಂ
ಅಸಮಾಕ್ಷನವತಾರ ಮಹಲಿಂಗ ಜಂಗಮದ ಕಾರುಣ್ಯದಿಂ ಮೆರೆವುದು ೧೩

ಕಾವ್ಯಮಿದು ಕಿರಿದಾದೊಡೇಂ ಜಗದಿ ಸಂಕಲಿತ
ಭವ್ಯಕುಲತಿಲಕ ಮಹಲಿಂಗ ಜಂಗಮನಾಥ
ನವ್ಯಯ ಮಹಾಮಹಿಮೆಯಿಂದೆನ್ನ ಕಬ್ಬಮಿದು ಸತ್ಕೀರ್ತಿಯಿಂ ಮೆರೆಯುತ
ಸೇವ್ಯಮಾಗಿರ್ಪುದೀ ಭೂತಳದ ಕವಿಗಳ್ಗೆ
ನವ್ಯಮೆಂದೆನಿಪಂತೆ ಪೇಳ್ದ ವರ ಲೀಲೆ ಸು
ಶ್ರಾವ್ಯಮಾಗಿರಲಿ ಸದ್ಭಕ್ತರೊಳ್ ಸೋಲೂರ ಯತಿವರನ ಕಾರುಣ್ಯದಿಂ ೧೪

ಗೀರ್ವಾಣ ಕರ್ನಾಟ ಉಭಯ ಶಾಸ್ತ್ರಂಗಳೊಳ್
ಗೀರ್ವಾಣ ಗುರುವಿನಂ ಧಿಕ್ಕರಿಪ ಸೋಲೂರ
ಪೂರ್ವ ಪುರುಷೋತ್ತಮನ ವೀರಕ್ತಕುಲತಿಲಕ ಶ್ರೀಚೆನ್ನವೀರೇಂದ್ರನ
ಪೂರ್ಣ ಕಾರುಣ್ಯದಿಂ ನಾ ಪೇಳ್ದ ಕಾವ್ಯಮಿದು
ಶರ್ವನಾಣತಿಯಿಂದ ಸಂಪೂರ್ಣವಾಯ್ತಿಂದು
ಸರ್ವ ಭಕ್ತೋತ್ತಮರು ಪಾಲಿಸುಗೆ ಲಾಲಿಸುಗೆ ಭೂತಳದಿ ಸಂತಸದೊಳು ೧೫

ಜಾಣ ಬಾಣ ಮಯೂರ ವರ ಕಾಳಿದಾಸ ಶಿವ
ಪ್ರಾಣಕೇಶವ ಸೋಮ ಭೀಮ ಹರಿಹರ ದೇವ
ಏಣಧರಧರಪದ್ಮ ಷಟ್ಚರಣ ಬಾಲೇಂದುಪುರ ಷಡಕ್ಷರಿದೇವನ
ಪ್ರೇಣುತೀಶ್ವರ ಪದ್ಮರಸ ರಾಘವೇಶನುರೆ
ಮಾಣದಲಿ ಬಣ್ಣಿಸುತ್ತಿರಗಿ ಭೂತಳದಿ ಮ
ತ್ಪ್ರಾಣನಾಯಕನೆನಿಪ ಮಹಲಿಂಗಲೀಲೆಯಂ ನಿರ್ಮಿಸಿದೆನತಿಭಕ್ತಿಯಿಂ ೧೬

ಶಿವಕವಿತ್ವವದಲ್ಲದನ್ಯ ಕಲ್ಪನೆಗಳಂ
ವಿವರಿಸದೆ ಮಾನಸದಿ ಮರೆದೊಮ್ಮೆ ಭಕ್ತಿಯಿಂ
ಭವರಹಿತನಂ ಬಿಡದೆ ಧ್ಯಾನಿಸುವ ಕಬ್ಬಿಗರ ಶ್ರೀಪರಮ ಕಾರುಣ್ಯದಿಂ
ಕುವಲಯ ಮಹಾಪೂಜ್ಯ ಮಹಲಿಂಗ ಮನ್ಮನದೊ
ಳವಿರತಂ ನಿಂದು ನುಡಿಸಿದ ತೆರದಿ ನಿರ್ಮಿಸಿದೆ
ಸುವಿವೇಕದಿಂ ನೋಡಿ ತಪ್ಪಿರಲು ತಿದ್ದುವದು ಕರ್ನಾಟ ಶಾಸ್ತ್ರಜ್ಞರು ೧೭

ಸಾರತರ ಕರ್ನಾಟ ಗೀರ್ವಾಣ ಶಾಸ್ತ್ರಗಳ
ಸಾರಮಂ ತಿಳಿದ ಸರ್ವಜ್ಞ ಮಹಿಮಾಂಭೋಧಿ
ಸಾರಂಗಧರನೆನಿಪ ಸೋಲೂರ ಶ್ರೀಚೆನ್ನವೀರೇಂದ್ರ ವೀರಕ್ತನ
ಕಾರುಣ್ಯದಿಂ ಪೇಳ್ದ ಕಾವ್ಯಮಿದು ಜಗದೊಳಗೆ
ತಾ ರಮ್ಯಮಾಗಿರಲಿ ಸರ್ವ ಭಕ್ತಾಳಿಯೊಳ್
ಸೂರಿಜನರಾನಂದದಿಂ ನೋಡಿ ಪೇಳುವದು ಮಹಲಿಂಗನ ಸುಲೀಲೆಯಂ ೧೮

ಶ್ರೀಗಿರಿಸುತಾಪಾಂಗಚಂದ್ರಬಿಂಬಚಕೋರ
ನಾಗಮುಖ ಶರಜಾತತಾತ ಗಣವಿಖ್ಯಾತ
ಯೋಗಿಜನ ಮಾನಸಾಲಯ ಪರಂಜ್ಯೋತಿ ಗುರು ಪರಮಾತ್ಮಪಚಾನನಂ
ನಾಗಕುಂಡಲಕಲಿತಕರ್ಣಕಾಮಾಂಜಮನ
ನಾಗ ನಗಧರಪಕ್ಷ ಸಮುದಮುದವರ ಪ್ರೇಮ
ಭೋಗಿವರಸೂತ್ರ ಸುಜನಾಳಿ ಸನ್ನುತ ಪಾತ್ರ ಜಯಜಯತು ಗಂಗಾಧರ ೧೯

ಸಾರಂಗಚಕ್ರವರದಾಮ್ನಾಯ ಹಂಸ ಧೃತ
ಸಾರಂಗಮುಕುಟಾಂಕ ಶಮನಾರಿ ಕರ್ಮಹರ
ಸಾರಂಗಪಾಣಿ ಧೃತ ಸಾರಂಗದೈತ್ಯಮದ ಸಾರಂಗ ಪಂಚಾನನ
ಸಾರಂಗವಾಹ ಮುಖ ಸುರಜಾಲ ವರದಾತ
ಸಾರಂಗಮುಖದರ್ಪ ಸಂಹರಣ ಹರಿನೇತ್ರ
ಸಾರಂಗಪದಪದ್ಮ ಸಂಕಲಿತ ಸರ್ವೇಶ ಮಾಮವತು ಕಾರುಣ್ಯದಿಂ ೨೦

ಹಂಸಭವ ಕಂಪಾಣಿ ಹಂಸಾಕ್ಷ ಸತ್ಪ್ರೇಮ
ಹಂಸಜನ ಮಾನಸಾಂಭೋಜವಿಕಸಿತ ದಿವ್ಯ
ಹಂಸ ಹಂಸಾತ್ಮಭವಮುದಕುಂಭಿಹರ್ಯಕ್ಷ ಹಂಸಕಾಯಕಮರ್ದನ
ಹಂಸರಥ ಮಿತ್ರ ಸತ್ಕವಿಜಾಲನುತಿ ಪಾತ್ರ
ಹಂಸಕಾಯುವಿಮಾಯ ಮಖನಾಶ ಗುಣಕೋಶ
ಹಂಸಾಕ್ಷರಂಜಿತ ಪದಾಂಭೋಜ ಪಾಲಿಪುದು ಸದ್ಭಕ್ತಸಂತಾನಮಂ ೨೧

ಇಂದು ಮಂದಾರ ಹರಿಚಂದನಾಮೃತ ಸಿಂಧು
ಕುಂದ ಕುವಿಶಾಭ ಸುರಸಿಂಧು ಮಂದಾಕಿನೀ
ದಂದಶೂಕವರೇಣ್ಯ ಪ್ರಾಲೇಯ ಬಲರಾಮ ಶಾರದಾಂಬುದ ಪಾರದೆ
ವೃಂದಾರಕಾಶ್ವ ಗೋವಿಂದರಥಕುಕ್ಷಿ ಸಿತ
ಮಂದಾರ ನಾರದ ಮರುದ್ಧಯ ಮಹಾಗೌರ
ನಂದ ಕೀರ್ತಿವಿರಾಜ ಶ್ರೀಚೆನ್ನವೀರೇಶ ಪಾಲಿಪುದು ತ್ರೈಜಗವನು ೨೨



ಶ್ರೀ ಮಹಲಿಂಗೇಶ್ವರ ಗುಡಿ

ಈ ಲೀಲೆಯನು ಕೇಳ್ದ ಸದ್ಭಕ್ತಸಂತತಿಗೆ
ಬಾಲೇಂದುಧರನಷ್ಟಭೋಗಂಗಳಂ ಬಳಿಕ
ಲೋಲ ಭಕ್ತಿಜ್ಞಾನ ವೈರಾಗ್ಯ ಕೀರ್ತಿಗಳ ನೆರವುತ್ತ ಭೂತಳದೊಳು
ಪಾಲಿಸುತ ಕಾರುಣ್ಯದಿಂ ಕಡೆಗೆ ತನ್ನ ಸುವಿ
ಶಾಲ ಪದವಿಯನಿತ್ತು ನಂದ್ಯಾದಿ ಪ್ರಮಥಗಣ
ಜಾಲದೊಳಗಿರಿಸುತ್ತ ಸಂತತಂ ನೆರೆಮೆರೆವ ಸಿದ್ಧಾಂತವಿದು ಜಗದೊಳು ೨೩

ಶ್ರೀಪುರಾತರ ಪರಮ ಕಾರುಣ್ಯದೇಳ್ಗೆಯಿಂ
ದೀ ಪರಾತ್ಪರ ಮಹಿಮ ಮಹಲಿಂಗಲೀಲೆಯಂ
ಭೂಪಂಡಿತರ ಪಾದಪದ್ಮಂಗಳಂ ಬಿಡದೆ ಮನ್ಮಾನಸಾಂಭೋಜದೊಳ್
ವ್ಯಾಪಿಸುತ್ತಿರೆ ಭಕ್ತಿ ಭಾವದಿಂ ಸ್ಮರಿಸುತ್ತ
ನಾ ಪೇಳ್ವೆನಿದು ಜಗದಿ ಸೇವ್ಯವಾಗಿರಲಿನ್ನು
ತಾಪತ್ರಯಾರಣ್ಯದಾವಾಗ್ನಿ ಮೋದಪುರಿ ಮದ್ವಾನಿ ಗುರುನಾಥನ ೨೪

ಮಡಿವಾಳ ತಂದೆಗಳ ವಂಶಪಾರಂಪರಂ
ಬಿಡದೆ ಸಂಭವಿಸಿರ್ದ ವೀರಮಾಹೇಶ್ವರರ
ಕಡು ರಮ್ಯತರವಾದ ಕಾರುಣ್ಯದಿಂ ಪೇಳ್ದೆ ಮಹಲಿಂಗ ವರಲೀಲೆಯಂ
ಪೊಡವಿಯೊಳು ಮೃಡಭಕ್ತರಾಲಿಸುಗೆ ಭಕ್ತಿಯಿಂ
ಜಡಜಭವ ಸೃಷ್ಟಿಯಿರ್ಪನ್ನೆಬರ ಜಗದೊಳಗೆ
ಮೃಡ ಮಹಾದೇವನಾಣತಿಯಿಂದೆ ರಂಜಿಸುಗೆ ಕೋವಿದರ ಸಂತಾನದೊಳ್ ೨೫

ಪರಮಸಂಪದಗಳಿಂ ಪರಿಪೂರ್ಣವಾಗಿರಲಿ
ಸುರಭಿಗಳ್ ಸುಧೆಯ ಕರೆಯುತ್ತಿರಲಿ ಸರ್ವರೊಳ್
ಪರಿಪೂರ್ಣಭಕ್ತಿ ಸಮ್ಯಜ್ಞಾನ ವೈರಾಗ್ಯ ವರ್ಧಿಸಲಿ ವರ್ಷಾಗಮಂ
ಸುರಿವುತ್ತ ಸುಕ್ಷೇಮದಿಂದಿರಲಿ ಬೆಳೆಗಳಿಂ
ವರಕುಸುಮ ಪಲ್ಲವದ ಫಲಭಾರದಿಂದಿಡಿದು
ಪರಿರಮ್ಯವಾಗಿರಲಿ ತರುಗಳಿಂ ಮತ್ಕಾವ್ಯ ಲಾಲಿಸುವ ಭೂತಳದೊಳು ೨೬

ಚಂದ ಮನ ಶಾಂತಿ ಸೂರ್ಯನ ತೇಜ ಪಾವಕನ
ರುಂದ್ರಪ್ರತಾಪಮುಂ ಶರಧಿ ಗಾಂಭೀರ್ಯ ಶೈ
ಲೇಂದ್ರನ ಮಹಾಧೈರ್ಯ ಗೀಷ್ಪತಿಯ ವಾಗ್ಜಾಲ ಸುರಕುಜದ ವರದಾನಮುಂ
ಸಾಂದ್ರಧಿಂದೆಡೆವಿಡದೆ ಸಿದ್ಧಿಸುಗೆ ಯೋಗಿಕುಲ
ಚೆಂದ್ರನ ಸುಲೀಲೆಯಂ ಕೇಳ್ವ ಭಕ್ತರಿಗೆ ದಿವಿ
ಜೇಂದ್ರನಹ ಪದವಿ ಕೈಸಾರ್ದು ಸಂತಸದಿಂದೆ ಜೀವಿಪರು ಭೂತಳದೊಳು ೨೭

ನಿರಘ ನಿರಹಂಕಾರ ನಿರ್ಮಲ ನಿರಾತಂಕ
ಪರಮಪಾವನ ಪರಾತ್ಪರ ಮಹಿಮ ಕ್ಷೀರಾಬ್ಧಿ
ಹರಿಣಾಂಕ ಸಮರೂಪ ಸರ್ವಾತ್ಮಕಂ ಕಲುಷಜಗದಾಳಿ ಝುಂಝಾನಿಲ
ಕರಣಜನ ಸಂತಾನ ಸಕಲಾಗಮಾಳಿನುತ
ಶಿರುತ ನಿರ್ಗುಣನೆನಿಪ ಮಹಲಿಂಗ ಗುರುವರನ
ಸರಸಲೀಲೆಯ ಭಕ್ತಿಯಿಂ ಬಿಡದೆ ಭೂತಳದಿ ನಿರ್ಮಿಸಿದರಾರೆಂದೆನೆ ೨೮

ಪಂಚಾಸ್ಯನಮಳ ನವಮಂಜುಳದಿ ಸಂಜನಿತ
ಪಂಚವಕ್ತ್ರಗಣೇಶನಿಂ ಬಿಡದೆ ಸಂಭವಿಸಿ
ಪಂಚಪದ ಜಾತಿ ವರ್ಣಾಶ್ರಮಾದಿಯುತನಾಗಿ ಭೂತಳದಿ ಕಂಗೊಳಿಸುವ
ಅಂಚಿತ ಶ್ರೀ ತೋಂಡಿಕಟ್ಟಿಗ್ರಾಮಾಧಿಪತಿ
ಪಂಚಶರಹರ ಭಕ್ತನುಂ ರಾಮಲಿಂಗಾಖ್ಯ
ಸಂಚಿತಾನ್ವಯ ಪರಮ ಮಾಕಂದವನಚೈತ್ರ ವೇದಾಂತ ವರಕೋವಿದಂ ೨೯

ಬಸವರಾಜನ ಗೋತ್ರ ಕಂಜಾತವನಸೂರ್ಯ
ಸಸಮ ಕರ್ನಾಟ ಶಾಸ್ತ್ರವಿಚಾರ ಸಂಪನ್ನ
ರಸಿಕಾವತಂಸ ಶಿವಬಸವೇಶಸುದರಾಬ್ಧಿಪೂರ್ಣೇಂದು ಸಮನೆನಿಸುವ
ಬಸವ ಸುಕುಮಾರ ತಾಂ ನಿರ್ಮಿಸಿದ ಲೀಲೆಯಿದು
ಬಸವಾದಿಪ್ರಮಥರ ಮಹಾಕರುಣದಿಂದಿರದೆ
ವಸುಧಿಯೊಳ್ ಸಂತತಂ ಸೇವ್ಯವಾಗಿರಲಿನ್ನು ಸದ್ಭಕ್ತಸಂತಾನದೊಳ್ ೩೦

ವರ ವರ್ಣಪರ್ಣಗಳ ಷಟ್ಚರಣ ಕುಸುಮಮಂ
ಜರಿ ಪದ್ಯಗಳ್ ಶಾಖೆಗಳ್ ಒಳಿಕ ಮತ್ಕಾವ್ಯ
ಸುರಕುಜಂ ಮಹಲಿಂಗನಸಮ ಮಹಿಮೆ.ಗಳೆಂಬ ಪರಿಪಕ್ವಫಲಭಾರದಿಂ
ಪರಿರಮ್ಯವಾಗಿ ಸದ್ಭಕ್ತ ಶುಕಪಿಕ ಭ್ರಮರ
ಪರಿಕರದ ಸಮ್ಮುದವ ಸೈಗರೆದು ಸಂತತಂ
ನೆರಿ ಮೆರೆವುದೇನರಿದೆ ಚೆನ್ನವೀರೋತ್ತಮನ ಕಾರುಣ್ಯದಿಂದಿಳೆಯೊಳು ೩೧

ಇದು ಬಸವ ಸುಕುಮಾರ ವಿರಚಿತದ ಮಹಲಿಂಗ
ಸದಮಲದ ಲೀಲೆಯಿದ ಪದುಳದಿಂದೋದುವರ್
ಮುದದಿಂದ ಪೇಳುವರ್ ಕೇಳುವರ್ ಪಠಿಸುವರ್ ಪರಮಾರ್ಥಸಂಪದಗಳ
ಮದನಹರ ಮಹಲಿಂಗನಾಜ್ಞೆಯಿಂ ಪಡೆದು ಘನ
ವಿಧಿ ಕರ್ಮಗಳ ಮೀರಿ ಸಕಲ ಸೌಭಾಗ್ಯದಿಂ
ಮದನಹರ ಕೃಪೆಯಾಂತು ಬಾಳ್ದು ಕಡೆಗಾಲದೊಳ್ ಮುಕ್ತಪಥದೊಳಗಿಪ್ಪರು ೩೨

ಅಂತು ಸಂಧಿ ೨೪ ಕ್ಕಂ ಪದ ೧೦೭೫ ಕ್ಕಂ ಮಂಗಳಂ

ಸಮಾಪ್ತಂ

ಶ್ರೀ

# ಮಹಲಿಂಗಲೀಲೆ

## ಶಬ್ದಕೋಶ

ಅಂಕೆಗಳು ಅನುಕ್ರಮವಾಗಿ ಸಂಧಿ ಹಾಗೂ ಪದ್ಯಸೂಚಕವಾಗಿವೆ.

### ಅ

| | | |
|---|---|---|
| ಅಗಳೆ | ೧೨ - ೫ | ಕಂದಕ |
| ಅಚ್ಚಿ | ೬ - ೨೪ | ಕಣ್ಣು |
| ಅಣಿಯರ | ೫ - ೩೫ | ಉತ್ಕೃಷ್ಟತೆ, ಗೌರವ, ಯೋಗ್ಯತೆ |
| ಅನಂತಮಣಿ | ೨ - ೨ | ಸೂರ್ಯ |
| ಅನಿಮಿಷ | ೧ - ೩೫ | ದೇವತೆ |
| ಅರೆ | ೪ - ೩೩ | ಕಲ್ಲು |
| ಅವತಂಸ | ೨ - ೧೭ | ಆಭರಣ |
| ಅವಿಸು | ೧೬ - ೪೪ | ಮುಚ್ಚು |
| ಅಸವಸ | ೧೪ - ೩೦ | ಅವಸರ |
| ಅಕ್ಷ | ೧ - ೧೨ | ಜೂಜು |
| ಅಂಬರಾಳಕ | ೬ - ೮ | ಶಿವ |

### ಆ

| | | |
|---|---|---|
| ಆಖು | ೧ - ೩ | ಇಲಿ |
| ಆಖುಪತಿವಾಹನ | ೧ - ೩ | ವಿಘ್ನೇಶ |
| ಆಪು | ೭ - ೫ | ಸಾಮರ್ಥ್ಯ |
| ಆವೇಷ | ೧ - ೭ | ಪ್ರವೇಶ |

| | | |
|---|---|---|
| ಆಳ್ವೇರಿ | ೨ - ೩ | ಕೋಟೆಯ ಮೇಲ್ಭಾಗ |
| ಆಂಟು | ೧೪ - ೭೦ | ಮುಳ್ಳು ತೆಗೆಯುವ ಸಾಧನ |

ಇ

| | | |
|---|---|---|
| ಇಕ್ಷುಕಾಂಡ | ೫ - ೧೧ | ಕಬ್ಬಿನ ಗಳ |
| ಇಂಗದಿರ | ೫ - ೧೧ | ಚಂದ್ರ |
| ಇಂಗಳ | ೫ - ೧೧ | ಅಗ್ನಿ |

ಈ

| | | |
|---|---|---|
| ಈರಾರು | ೧೬ - ೬೯ | ಹನ್ನೆರಡು |

ಉ

| | | |
|---|---|---|
| ಉಚ್ಚವ | ೧೭ - ೨೮ | ಉತ್ಸವ, ಮೋಸತನ |
| ಉತ್ತಣ | ೨೩ - ೨೦ | ನಡುವಣ |
| ಉತ್ತಮಾಂಗ | ೧೨ - ೧೭ | ತಲೆ |
| ಉದ್ಗಮ | ೧ - ೨೬ | ಮೊಗ್ಗೆ |
| ಉಮಾ | ೨ - ೩೦ | ಪಾರ್ವತಿ |
| ಉಲ್ಬಣ | ೧ - ೩೧ | ಅಧಿಕ |
| ಉಕ್ಷ | ೧ - ೮ | ಎತ್ತು |

ಊ

| | | |
|---|---|---|
| ಊಚು | ೧೪ - ೧೩ | ಮೇಲು |
| ಊತ್ರಕಾಷ್ಟ | ೨ - ೧೯ | ಉತ್ತರದಿಕ್ಕು (?) |

ಋ

| | | |
|---|---|---|
| ಋಕ್ಷಪತಿ | ೧ - ೮ | ನಕ್ಷತ್ರಪತಿ |

| | | |
|---|---|---|
| | ಎ | |
| ಎಡ್ತ | ೧೧ - ೫ | ಮನೋಹರ |
| | ಏ | |
| ಏಣ | ೨೨ - ೧ | ಚಿಗರಿ |
| ಏಳಿಸು | ೧೨ - ೪ | ತಿರಸ್ಕರಿಸು |
| | ಐ | |
| ಐಸರಲ | ೧೭ - ೪೭ | ಮನ್ಮಥ |
| | ಓ | |
| ಓಗರ | ೧೬ - ೧೯ | ಅನ್ನ |
| | ಕ | |
| ಕಚ್ಚಟ | ೧೧ - ೪೫ | ಕೌಪೀನ |
| ಕಟ್ಟಳವಿ | ೧೧ - ೪ | ತೀರ ಸನಿಹ |
| ಕಟಿಸೂತ್ರ | ೧೫ - ೧೭ | ಉಡುದಾರ |
| ಕಡವರ | ೧೨ - ೨೩ | ಬಂಗಾರ |
| ಕನಕಗಿರಿಕೋದಂಡ | ೧೮ - ೧ | ಶಿವ |
| ಕನ್ನವುರ | ೧೨ - ೧೨ | ಕರ್ಣಾಭರಣ |
| ಕಪಿತ್ಥ | ೪ - ೧೫ | ಬೆಳವಲ |
| ಕಬ್ಬಿಲಿಗ | ೩ - ೩೩ | ಅಂಬಿಗ |
| ಕರುಬು | ೨ - ೨೮ | ಮಾತ್ಸರ್ಯ |
| ಕರುಮಾಡ | ೧೦ - ೫ | ಉಪ್ಪರಿಗೆ |
| ಕರಿ | ೧ - ೧೦ | ದಂಡೆ |
| ಕಲ್ಲಣಗಿ | ೧೧ - ೪೬ | ಪಾರ್ವತಿ |
| ಕಸವರ | ೧೮ - ೨೦ | ಬಂಗಾರ |
| ಕಲಧೌತ | ೧೦ - ೮ | ಬಂಗಾರ |

| | | |
|---|---|---|
| ಕಲಭ | ೧೦ - ೮ | ಆನೆ |
| ಕಲಭಪುರ | ೧೦ - ೮ | ಹಸ್ತಿನಾವತಿ |
| ಕಳಕಿ | ೧೬ - ೫೮ | ಚಿಗುರು |
| ಕಳೇವರ | ೧೮ - ೩ | ದೇಹ |
| ಕಂಡೆಯ | ೧೮ - ೩೬ | ಖಡ್ಗ |
| ಕಂದರ | ೧ - ೨ | ಕುತ್ತಿಗೆ |
| ಕಾಟನಪದಾರಿ | ೧೬ - ೫೭ | ಶಿವ |
| ಕಾರಣೆ | ೧೨ - ೨೨ | ಗೋಡೆಗಳಿಗೆ ಬಣ್ಣ [ಹಚ್ಚುವುದು |
| ಕಾರ್ಬೊನ್ನು | ೧೮ - ೨೩ | ಕಬ್ಬಿಣ |
| ಕಾಮದುಘ | ೧ - ೩೩ | ಕಾಮಧೇನು |
| ಕಾವಡಿ | ೧೪ - ೬೯ | ನೀರು ತರುವ ಕೋಲು |
| ಕಾಶ್ಯಪ | ೧೦ - ೯ | ಸೂರ್ಯನ ಸಾರಥಿ, ಅರುಣ |
| ಕಿಚ್ಚುಗಣ್ಣ | ೫ - ೨೧ | ಶಿವ |
| ಕಿತ್ತಡಿ | ೧೧ - ೫ | ತಪಸ್ವಿ |
| ಕಿಂಜಲ್ಕ | ೪ - ೩೪ | ಮೊಗ್ಗೆ |
| ಕೀಶ | ೧೫ - ೨೭ | ಕಪಿ |
| ಕುಕ್ಕುಟ | ೧೪ - ೬ | ಕೋಳಿ |
| ಕುಕ್ಕುರ | ೧೪ - ೬೬ | ನಾಯಿ |
| ಕುಜನಪತಿ | ೧೪ - ೨೮ | ರಾಜ |
| ಕುಟ್ಟಿಮ | ೧೦ - ೬ | ನೆಲಗಟ್ಟು |
| ಕುದ್ದಾಲ | ೧೧ - ೪ | ಗುದ್ದಲಿ |
| ಕುಧವ | ೧೪ - ೮ | ರಾಜ |
| ಕುಶಧಿ | ೧೭ - ೭ | ಸಮುದ್ರ |
| ಕುಂಜರ | ೧೫ - ೨೨ | ಆನೆ |
| ಕುಂಜರಾಸುರ | ೧೫ - ೨೨ | ಗಜಾಸುರ |
| ಕೂಲ್ಯ | ೪ - ೧೪ | ದಂಡೆ |
| ಕೊತ್ತಳಿ | ೧೭ - ೨೨ | ಕಾಗೆ |
| ಕೊಂಡಿಯ | ೧೬ - ೭೩ | ಚಾಡಿಖೋರ |
| ಕೋವಣ | ೧೬ - ೪೯ | ಕೌಪೀನ |

| | | |
|---|---|---|
| ಕೌಮೋದಕಿ | ೨ - ೧೨ | ವಿಷ್ಣುವಿನ ಗದೆ |
| ಕೌಶಿಕ | ೧ - ೨೫ | ಗೂಗೆ |

## ಖ

| | | |
|---|---|---|
| ಖರ | ೧೭ - ೪೩ | ಒಬ್ಬ ರಾಕ್ಷಸನ ಹೆಸರು |
| ಖರ್ವ | ೨ - ೧೦ | ಸಂಖ್ಯಾವಾಚಕ ಶಬ್ದ |
| ಖೇಟ | ೧೮ - ೨೭ | ಹಳ್ಳಿ |
| ಖೇಯ | ೨ - ೩ | ಕಂದಕ |

## ಗ

| | | |
|---|---|---|
| ಗರ | ೨೨ - ೧೦ | ಗ್ರಹ |
| ಗುಡ್ಡ | ೧೧ - ೫ | ಶಿಷ್ಯ |
| ಗುಡ್ಡಣುಗಿ | ೧೧ - ೫ | ಪಾರ್ವತಿ |
| ಗುಲ್ಮ | ೬ - ೧೯ | ಕಂಟಿ, ಹೊದರು |
| ಗೂಢಪದ | ೩ - ೩೧ | ಸರ್ಪ |
| ಗೂಢಪದಕಂಕಣ | ೩ - ೩೧ | ಶಿವ |
| ಗೆಂಟು | ೧೧ - ೨೮ | ದೂರ |
| ಗೊತ್ತಾಳಿ | ೫ - ೧೭ | ವ್ರತಬದ್ಧ |
| ಗೌಳ | ೧೪ - ೬೯ | ಗೌತವೇಶ |

## ಚ

| | | |
|---|---|---|
| ಚಚ್ಚರ | ೧೬ - ೨೭ | ಅವಸರ |
| ಚಪ್ಪರಣೆ | ೪ - ೧೭ | ಗಿಳಿಗಳ ಧ್ವನಿ |
| ಚಸಕ | ೧೮ - ೨೯ | ಬಟ್ಟಲು |
| ಚಂಚಲ | ೧೩ - ೧೯ | ಮಿಂಚು |
| ಚಂಡಕರ | ೨ - ೩೨ | ಸೂರ್ಯ |
| ಚಾಳಿಸು | ೨ - ೨೨ | ಚಲಿಸು |
| ಚಾಂದಣಿ | ೨೦ - ೭ | ಆಕಳಿಸುವ ಬೇನೆ |

| | | |
|---|---|---|
| ಚಿತ್ರಜ | ೧೦ - ೩೪ | ಮನ್ಮಥ |
| ಚಿಂತಾಲ | ೧೬ - ೫೧ | ತಕ್ಕಡಿ |
| ಚುಂಗಾಣಿ | ೨೩ - ೯ | ಚಿಲಿಮೆ |
| ಚೇಟಿಕಾ | ೧೪ - ೨೪ | ಸೇವಕಿ |
| ಚೇಲ | ೪ - ೧ | ಅರಿವೆ |

## ಜ

| | | |
|---|---|---|
| ಜಗದಚಿ | ೧೧ - ೨೮ | ಸೂರ್ಯ |
| ಜಗುಳು | ೨ - ೨೧ | ಹಿಂದೆಸರಿ |
| ಜಂಭಾರಿ | ೧೭ - ೭ | ಇಂದ್ರ |
| ಜಾಧರ | ೧೧ - ೨೨ | ಶಿವ |
| ಜಾಧವ | ೧೫ - ೪೯ | ಶಿವ |
| ಜೀಮೂತ | ೧ - ೭ | ಮೋಡ |
| ಜೀರ್ೖಸು | ೧೧ - ೧೫ | ಸಣ್ಣಾಗು, ಸಾಮರ್ಥ್ಯ |

## ಝ

| | | |
|---|---|---|
| ಝುಂಝಾನಿಲ | ೧ - ೧ | ಪ್ರಳಯಕಾಲದ ಮಾರುತ |

## ತ

| | | |
|---|---|---|
| ತಗರದೇರ | ೨ - ೧೩ | ನೈರುತಿ |
| ತಟಿನಿ | ೩ - ೧೦ | ನದಿ |
| ತಮ್ಮಟ | ೯ - ೬ | ತಪ್ಪಡಿ |
| ತರಣಿಸಂಭವ | ೨ - ೧೩ | ಯಮ |
| ತರಕ್ಷ | ೧ - ೮ | ಹುಲಿ |
| ತೆವರು | ೧೨ - ೭ | ಕೀಳ್ಪಡಿಸು |
| ತಂಗದಿರ | ೧೧ - ೧೩ | ಚಂದ್ರ |
| ತಾಟಿಸು | ೧೬ - ೧೬ | ತಟ್ಟು; ಬಡಿ |
| ತಾರಾಗ | ೨ - ೨೩ | ತಾರಕಾಸುರ |

| | | |
|---|---|---|
| ತಿರಿಕಲ್ | ೨ - ೮ | ಆಣೇಕಲ್ಲು |
| ತುಹಿನ | ೧ - ೩ | ಹಿಮ |
| ತೂರ್ಣ | ೧೪ - ೪೮ | ತ್ವರೆ |
| ತೂರ್ಯ | ೧೧ - ೫೫ | ಅವಸರ |
| ತೆನೆ | ೧೨ - ೫ | ಪ್ರಾಕಾರಾಗ್ರ |
| ತೆಂಗಳಿಸು | ೫ - ೧೧ | ಕಪ್ಪಾಗಿಸು |
| ತೋಯ | ೧೧ - ೧೪ | ನೀರು |

## ದ

| | | |
|---|---|---|
| ದಲ್ಲಾಳ್ತನ | ೧೦ - ೧೭ | ದಲಾಲಿ |
| ದರ್ಭಾಸ್ತರಣ | ೨೨ - ೫ | ದರ್ಭಾಸನ |
| ದ್ವಿಜಪತಿ | ೨೦ - ೫ | ಹಂಸ (?) |
| ದ್ವಿಜರಾಜ | ೧೧ - ೫೪ | ಚಂದ್ರ |
| ದ್ವಿಜಿಹ್ವ | ೨೦ - ೫ | ಸರ್ಪ |
| ದೀರ್ಘಿಕಾ | ೨ - ೨೧ | ನದಿ |
| ದೌವಾರಿಕ | ೧೦ - ೧೨ | ದ್ವಾರಪಾಲಕ |

## ಧ

| | | |
|---|---|---|
| ಧೀವರ | ೧೫ - ೪೮ | ಮೀನುಗಾರ |
| | ೧ - ೪ | ಬುದ್ಧಿವಂತ |
| ಧೂರ್ಯ | ೧ - ೧೫ | ಅಗ್ರಗಣ್ಯ |

## ನ

| | | |
|---|---|---|
| ನಕ್ರ | ೨ - ೧೪ | ಮೊಸಳೆ |
| ನಚ್ಚಣಿಸು | ೧ - ೨೯ | ನರ್ತಿಸು |
| ನಭೇಶ | ೭ - ೬ | ಚಂದ್ರ, ಸೂರ್ಯ |
| ನರ್ಮ | ೫ - ೨೭ | ವಿನೋದ |
| ನರವಾಹ | ೨ - ೧೪ | ಕುಬೇರ |

| | | |
|---|---|---|
| ನಾಗದೈತ್ಯ | ೧ - ೧ | ಗಜಾಸುರ |
| ನಿಕುರಂಬ | ೬ - ೧೯ | ಸಮೂಹ |
| ನಿಪ್ಪಸರ | ೨೩ - ೧೫ | ಉರವಣೆ, ಆರ್ಭಟೆ |
| ನಿರವಯ | ೧ - ೯ | ಅವಯವರಹಿತ |
| ನಿರುಪ | ೪ - ೬ | ಅಪ್ಪಣೆ |
| ನಿರ್ಮಾಲ್ಯ | ೩ - ೩೪ | ಪೂಜಿಸಿದ ಪತ್ರಿ ಪುಷ್ಪಾದಿ [ಗಳು |
| ನಿಸದ | ೧೪ - ೨೩ | ನಿಶ್ಚಯ |
| ನಿಸ್ಸಾಳ | ೧೨ - ೨೭ | ಭೇರಿ |

## ಪ

| | | |
|---|---|---|
| ಪಕ್ಕಣ | ೬ - ೧೭ | ಬೇಡರ ಹಟ್ಟಿ |
| ಪಚ್ಚಳ | ೪ - ೧೯ | ಹಚ್ಚಡ, ಹಚಡ, ಮೇಲ್ವಸ್ತ್ರ |
| ಪಜ್ಜಳಜ | ೧೮ - ೨೬ | ಪಾದಕಮಲ |
| ಪಡಿಯಿಡು | ೧ - ೩೭ | ಪ್ರತಿಧ್ವನಿಸು |
| ಪದಂಕುಶ | ೧೦ - ೨೦ | ಆಹಾರ ವಿಶೇಷ |
| ಪದ್ಮಜೆ | ೧ - ೩೩ | ಲಕ್ಷ್ಮಿ |
| ಪನ್ನಳಿನ | ೧೮ - ೧೨ | ಪಾದಕಮಲ |
| ಪರಜೆ | ೧೬ - ೮೭ | ಪರದೆ |
| ಪರಮೇಷ್ಠಿ | ೧೮ - ೧೮ | ಬ್ರಹ್ಮ |
| ಪರಠವಿಸು | ೫ - ೫೬ | ಪ್ರತಿಷ್ಠಾಪಿಸು |
| ಪಲ್ಲಿ | ೪ - ೨೦ | ಹಳ್ಳಿ, ಬಂಚೆ |
| ಪಲಾಂಡು | ೧೦ - ೨೦ | ಆಹಾರವಿಶೇಷ |
| ಪವನಭಿಗ್ವರಪುರ | ೧೦ - ೨೪ | ಅಯೋಧ್ಯೆ |
| ಪವಿ | ೧೩ - ೧ | ವಜ್ರಾಯುಧ |
| ಪಂಚಬಾಣ | ೧೨ - ೧೬ | ಮನ್ಮಥ |
| ಪಂಚಾಸ್ಯ | ೧ - ೨೭ | ಸಿಂಹ |
| ಪಾಣ್ಬೆ | ೫ - ೧೬ | ಜಾರೆ |
| ಪಾರುಂಬಳೆ | ೬ - ೯ | ಚಕ್ರ |
| ಪಿಪ್ಪೀಲಿಕಾ | ೧೮ - ೫೨ | ಇರುವೆ |

| | | |
|---|---|---|
| ಪಿಂಗಳ | ೪ - ೧ | ಸುವರ್ಣವರ್ಣ |
| ಪಿಂಜರಿ | ೧೦ - ೬ | ಬೆಳ್ಳಿ |
| ಪೀಲುವ | ೪ - ೧೫ | ವೃಕ್ಷವಿಶೇಷ |
| ಪೀಯೂಷ | ೧೪ - ೫೧ | ಅಮೃತ |
| ಪುರಂದರ | ೧೪ - ೫೨ | ಇಂದ್ರ |
| ಪುರುಹೂತ | ೧ - ೧ | ಇಂದ್ರ |
| ಪುಲಸಗ್ಗಿಗ | ೧೪ - ೫೪ | ಕೀಳುದೇವತೆ |
| ಪೂಸರ | ೫ - ೧೫ | ಮನ್ಮಥ |
| ಪೂಗ | ೧ - ೨೫ | ಸಮೂಹ |
| ಪೊತ್ತರಿ | ೧೧ - ೫೯ | ಬೆಳಗುಮುಂಜಾವು |
| ಪೊರೆಯೇರು | ೧೩ - ೮ | ಉಬ್ಬು |
| ಪೊಂಗು | ೧೫ - ೫೩ | ಉಬ್ಬು |
| ಪ್ರಚ್ಛನ್ನ | ೧೪ - ೧೭ | ಗುಪ್ತ |
| ಪ್ಲವಗ | ೧೫ - ೩೦ | ಮಂಗ |

ಫ

| | | |
|---|---|---|
| ಫಾಲಾಕ್ಷ | ೧೪ - ೩೫ | ಶಿವ |

ಬ

| | | |
|---|---|---|
| ಬಜ್ಜರ | ೧೮ - ೨೬ | ವಜ್ರ |
| ಬಲವರು | ೧೨ - ೮ | ಪ್ರದಕ್ಷಿಣೆ ಹಾಕು |
| ಬಲಾಹಕ | ೪ - ೩೭ | ಮೋಡ |
| ಬಂದುಕ | ೧೪ - ೫೪ | ಮೋಸಗಾರ |
| ಬಾಸಣಿಸು | ೫ - ೧೪ | ಮುಚ್ಚು |
| ಬಿಕ್ಕ | ೧೪ - ೬೬ | ಮಾಂಸ |
| ಬಿಸಜ | ೧೧ - ೨೦ | ಕಮಲ |
| ಬಿಸರ | ೧೪ - ೨೩ | ಮುಂದೆಸಾಗು |
| ಬೆಟ್ಟಣುಗಿ | ೧೧ - ೪ | ಪಾರ್ವತಿ |
| ಬೆದಕು | ೧೦ - ೩೦ | ಹುಡುಕು |

| | | |
|---|---|---|
| ಬೆರಣಿ | ೧೬ - ೧೯ | ಕುಳ್ಳು |
| ಬೆಸಿ | ೧೪ - ೬೯ | ಗೂಟ |
| ಬೋಳಿಯ | ೧೦ - ೭ | ದೇವತೆ |

### ಭ

| | | |
|---|---|---|
| ಭಣಿತಿ | ೧೨ - ೫೧ | ರೀತಿ |
| ಭರ್ಮ | ೧೭ - ೧ | ಬಂಗಾರ |
| ಭುಲ್ಲವಿಸು | ೧೦ - ೩೮ | ಪ್ರೀತಿಸು |
| ಭೇಕ | ೧೧ - ೫೪ | ಕಪ್ಪೆ |
| ಭೇಸ | ೧ - ೭ | ಚಂದ್ರ |
| ಭೇಷಜ | ೧೮ - ೬ | ಔಷಧ |
| ಭೆತ್ರ | ೧೨ - ೩೨ | ಹಡಗ |
| ಭೋಗಿ | ೪ - ೧ | ಸರ್ಪ |

### ಮ

| | | |
|---|---|---|
| ಮಕರಾಂಕ | ೧೫ - ೧೧ | ಮನ್ಮಥ |
| ಮಡಗು | ೧೨ - ೩೩ | ಇಡು |
| ಮನಸಿಜ | ೧೬ - ೩೩ | ಮನ್ಮಥ |
| ಮರಕತ | ೧೨ - ೨೮ | ಪಚ್ಚೆ |
| ಮರುತ | ೧ - ೧ | ಪರ್ವತ |
| ಮರುನ್ಮಿತ್ರ | ೧ - ೯ | ಅಗ್ನಿ |
| ಮಲರ್ | ೧ - ೨೬ | ಹೂವು |
| ಮಂತಣ | ೧೧ - ೫೨ | ಆಲೋಚನೆ |
| ಮುಂದೆವಾಳ | ೧ - ೧೧ | ಉದ್ಭಟತನ |
| ಮುಂದೆಹರ | ೧ - ೨೪ | ಕತ್ತಲೆ |
| ಮುಂದೈಸು | ೧೦ - ೩೯ | ಗಟ್ಟಿಯಾಗು |
| ಮಾಕ್ಷಿಕ | ೧೪ - ೪೦ | ನೊಣ |
| ಮಾಜ | ೧೭ - ೩೮ | ಲಕ್ಷ್ಮೀಪುತ್ರ, ಮನ್ಮಥ |

| | | |
|---|---|---|
| ಮಾಪ | ೧೧ - ೫೦ | ವಿಷ್ಣು |
| ಮಾರುತಾಹಾರಿ | ೧೦ - ೭ | ಸರ್ಪ |
| ಮಿತ್ರ | ೩ - ೧ | ಸೂರ್ಯ |
| ಮುಗಿಲಟ್ಟಣೆ | ೧೨ - ೫ | ಮುಗಿಲೆತ್ತರ |
| ಮುತ್ತುರ್ಪ | ೮ - ೩೨ | ಮುದ್ರೆ ? |
| ಮುನ್ನೀರು | ೧ - ೩೦ | ಸಮುದ್ರ |
| ಮೋಟ | ೧ - ೧೨ | ಮೊಂಡ |
| ಮೋಳಿಗೆ | ೧೪ - ೧೪ | ಕಟ್ಟಿಗೆ |
| ಮೃಗಧರ | ೧೬ - ೪೮ | ಚಂದ್ರ |
| ಮೃಗನಾಭಿಜ | ೧೫ - ೫ | ಕಸ್ತೂರಿ |

## ರ

| | | |
|---|---|---|
| ರಯು | ೧೫ - ೨೫ | ವೇಗ |
| ರಸನೆ | ೧೧ - ೧೧ | ನಾಲಗೆ |
| ರಾಕ | ೧ - ೨೬ | ಹುಣ್ಣಿವೆ |
| ರಾಜ | ೧ - ೧೪ | ಚಂದ್ರ |
| ರಾಮಕಂಧರ | ೧ - ೨<br>೧ - ೧೨ | ನವಿಲು, ಸರ್ಪ, ಶಿವ |
| ರಾಮಕಂಧರಗಮನ | ೧ - ೨ | ಷಣ್ಮುಖ |
| ರಾಮಗಲ | ೧೨ - ೧ | ಶಿವ |
| ರಾಮವಾಹನ | ೪ - ೧೮ | ಹಕ್ಕಿ |
| ರುಚಿ | ೨ - ೨ | ಕಾಂತಿ |
| ರುಜುಗೆಯ್ | ೧೫ - ೫೨ | ನೆಟ್ಟಗೆ ಮಾಡು |
| ರೂಪಜೀವಿ | ೧೨ - ೩೪ | ವೇಶ್ಯೆ |
| ರೇಶಪತಿ | ೧೫ - ೨೩ | ಹನುಮಂತ |
| ರೋಚಕ | ೧೪ - ೧೩ | ದೈನ್ಯ |

## ಲ

| | | |
|---|---|---|
| ಲತಾಂತ | ೧೨ - ೨೩ | ಮೊಗ್ಗೆ |
| ಲಪನ | ೧ - ೧ | ಮುಖ |

| | | |
|---|---|---|
| ಲಂಬೋದರ | ೧ - ೪ | ಗಣಪತಿ |
| ಲಾಕುಳ | ೧೫ - ೧೩ | ದಂಡ |
| ಲಾವಂಚ | ೧೨ - ೨೩ | ಬಾಳ |
| ಲಿಕುಚ | ೧೫ - ೮ | ಲಿಂಬಿಯುಹಣ್ಣು |
| ಲೋಕಬಾಂಧವ | ೧ - ೨೪ | ಸೂರ್ಯ |
| ಲೋವೆ | ೧೦ - ೬ | ಇಳಿಚಪ್ಪರ |

## ವ

| | | |
|---|---|---|
| ವಕ್ರಗತಿ | ೮ - ೩೨ | ಹಾವು |
| ವಧೂಟಿ | ೧೫ - ೧ | ಕನ್ಯೆ |
| ವನ | ೧೬ - ೭೬ | ನೀರು, ಕಮಲ |
| ವನಮಾಲಿ | ೧ - ೩೫ | ವಿಷ್ಣು |
| ವಾರ | ೧೦ - ೭ | ಕ್ರಮ |
| ವಾರಶಿಲೆ | ೧೬ - ೮೯ | ಚಂದ್ರಕಾಂತಶಿಲೆ |
| ವಾಶ್ಚರ | ೧೨ - ೧೦ | ಮೊಸಳೆ |
| ವಾಸರಧವ | ೧೫ - ೨೧ | ಸೂರ್ಯ |
| ವಿಟಪಿ | ೧೦ - ೧೩ | ಗಿಡ |
| ವಿಧು | ೧೬ - ೫೮ | ಚಂದ್ರ |
| ವಿಪ್ರ | ೧೨ - ೫ | ಕ್ರಾಂತಿ |
| ವಿಪಣಿ | ೧೨ - ೪೧ | ಪೇಟೆ |
| ವೇತ್ರ | ೧೫ - ೧೩ | ಬೆತ್ತ |
| ವೃಹಿಪಾತಿ | ೪ - ೧೮ | ಹಕ್ಕಿ |
| ವ್ಯಜನ | ೧೬ - ೮೪ | ಬೀಸಣಿಕೆ |
| ವ್ಯಾಲ | ೧೦ - ೨ | ಸರ್ಪ |
| ವ್ಯೋಮ | ೧೦ - ೧ | ಆಕಾಶ |

## ಶ

| | | |
|---|---|---|
| ಶಕಲ | ೨ - ೧೭ | ತುಂಡು |
| ಶಕ್ರ | ೧೦ - ೨೩ | ಇಂದ್ರ |

| | | |
|---|---|---|
| ಶಫ | ೨೨ - ೧೦ | ಕುದುರೆಯಖುರ |
| ಶಫರ | ೧೪ - ೨೨ | ಮೀನ |
| ಶಮನ | ೧೪ - ೬೬ | ಯಮ |
| ಶರ | ೭೦ - ೧೨ | ನೀರು |
| ಶರಜನ್ಮ | ೧೦ - ೧೨ | ಷಣ್ಮುಖ |
| ಶರದ | ೧೮ - ೧ | ಮೋಡ |
| ಶರ್ಮ | ೧೪ - ೬೭ | ಶಿವ |
| ಶರ್ಮದಪ್ರದ | ೨ - ೪೩ | ಮನ್ಮಥ |
| ಶಂಬ | ೧೪ - ೫೫ | ವಜ್ರಾಯುಧ |
| ಶಂಬರ | ೧೬ - ೨೫, | ಒಬ್ಬ ರಾಕ್ಷಸನ ಹೆಸರು, |
| | ೧೬ - ೩೯ | ಇಂದ್ರನ ವೈರಿ |
| ಶಾಲ | ೨ - ೩ | ಪ್ರಾಕಾರಾಗ್ರ |
| ಶಾಂಡಿಲ್ಯವಿಟಪಿ | ೧೫ - ೩೭ | ಬನ್ನಿಗಿಡ |
| ಶೂರ್ಪಕ | ೧೮ - ೩ | ಒಬ್ಬ ರಾಕ್ಷಸನ ಹೆಸರು |
| ಶೃಂಗ | ೧ - ೩೭ | ಕೋಡು, ಶಿಖರ |

## ಷ

| | | |
|---|---|---|
| ಷಟ್ಪದ | ೧ - ೧೯ | ಭ್ರಮರ |
| ಷಡ್ವರ್ಣದೇವ | ೧ - ೧೫ | ಷಡಕ್ಷರದೇವ |

## ಸ

| | | |
|---|---|---|
| ಸಟ್ಟುಕ | ೧೮ - ೨೫ | ಹುಟ್ಟು |
| ಸಪ್ತಾರ್ಚಿ | ೧೩ - ೧ | ಅಗ್ನಿ |
| ಸರ್ಪಿ | ೧೪ - ೬೧ | ತುಪ್ಪ |
| ಸಮೀರ | ೧೧ - ೧ | ಗಾಳಿ |
| ಸವಿತ್ರ | ೧ - ೧೯ | ವಂಶ |
| ಸವೆ | ೧೦ - ೬ | ಮಾಡು, ನಿರ್ಮಿಸು |
| ಸಸಿಗಲ್ | ೧೦ - ೬ | ಚಂದ್ರಕಾಂತಶಿಲೆ |
| ಸಂಕಾಶ | ೧೧ - ೬೪ | ಪ್ರಕಾಶ |

| | | |
|---|---|---|
| ಸಾಮಜ | ೧ - ೨ | ಆನೆ |
| ಸಾಲ | ೧೦ - ೬ | ಪ್ರಾಕಾರ |
| ಸಿಕ್ಕೆ | ೮ - ೩೨ | ಮೊಹರು |
| ಸಿಂಧು | ೧ - ೩೩ | ಸಮುದ್ರ |
| ಸುತ್ರಾಮ | ೩ - ೧ | ಇಂದ್ರ |
| ಸುಮನ | ೧ - ೧೭ | ದೇವತೆ |
| ಸುರಭೂರುಹ | ೧೨ - ೫೦ | ಕಲ್ಪವೃಕ್ಷ |
| ಸುರಾಚಾರ್ಯ | ೧೨ - ೧೧ | ಬೃಹಸ್ಪತಿ |
| ಸೂರ್ಯಸಂಭವ | ೨ - ೮ | ಯಮ |
| ಸೈಕತ | ೧೫ - ೧೯ | ಮಳಲು |
| ಸ್ವೈರಿ | ೧೪ - ೫೦ | ಚನ್ನಾಗಿಹರಿ |
| ಸ್ವೈಗರಿ | ೧ - ೧೭ | ಒಳಿತುಮಾಡು |
| ಸ್ವೈಪು | ೧೨ - ೩೪ | ಪುಣ್ಯ |
| ಸೊಡರು | ೧೨ - ೧೧ | ದೀಪ |
| ಸೋವಣ | ೪ - ೧೯ | ಹಕ್ಕಿ ಹಾರಿಸುವದು |
| ಸೌಧ | ೨ - ೧೪ | ಉಪ್ಪರಿಗೆ |
| ಸೃಕ್ | ೧೪ - ೭೬ | ರಕ್ತ |

## ಹ

| | | |
|---|---|---|
| ಹಗರಣ | ೧೬ - ೬೮ | ಜೊಳ್ಳು ಮಾತು, ನಟನೆ |
| ಹಟಕಾಸು | ೧೪ - ೧೦ | ಅಷ್ಟಿಯನ್ನೊಡ್ಡು |
| ಹಡಪ | ೧ - ೧೧ | ಚೀಲ, ತಾಂಬೂಲ ಪೆಟ್ಟಿಗೆ |
| ಹರವರಿ | ೧೬ - ೬೮ | ಪ್ರಕಟನೆ |
| ಹವಿ | ೩ - ೧ | ಅಗ್ನಿ (?) |
| ಹರ್ಮ್ಯ | ೧೦ - ೮ | ಉಪ್ಪರಿಗೆಯ ಮದೆ |
| ಹರ್ಯಕ್ಷ | ೧೫ - ೧ | ಸಿಂಹ |
| ಹಾಟಕ | ೧೫ - ೧ | ಬಂಗಾರ |
| ಹೇಮಗರ್ಭ | ೧೨ - ೪೪ | ಬ್ರಹ್ಮ |

| | | |
|---|---|---|
| ಹೇರು | ೫ - ೨೨ | ಹೆಚ್ಚಾಗು |
| ಹೈಮವತಿ | ೧೧ - ೨ | ಪಾರ್ವತಿ |
| ಹೃತ್ ಕಂಜ | ೧೪ - ೭ | ಹೃದಯಕಮಲ |



# ಒ ಪ್ಪೋ ಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೬ | ಒಣ್ಣಿಸುತೆ | ಬಣ್ಣಿಸುತೆ |
| ೬ | ೧೬ | ಕಗರಿವುತ್ತೆ | ಕರಿವುತ್ತೆ |
| ೧೪ | ೧೫ | ಪುರಹೂತ | ಪುರುಹೂತ |
| ೧೮ | ೩ | ಸ್ನೇಹದಂತ | ಸ್ನೇಹದಂತೆ |
| ೨೯ | ೧೧ | ಉದ್ಧತ | ನುದ್ಧತ |
| ೩೦ | ೧೯ | ಗರುಲಿಂಗ | ಗುರುಲಿಂಗ |
| ೪೪ | ೬ | ನಿರುತ್ತಿರ್ದನು | ನಿರುತಿರ್ದನು |
| ೪೭ | ೫ | ಪರ್ಬತ್ಕೆ | ಪರ್ಬಲ್ಕೆ |
| ೫೦ | ೧ | ಫಲ | ಛಲ |
| ೫೨ | ೨೩ | ಚರಣಕ್ಕೆರಗಿ | ಚರಣಕ್ಕೆರಗೆ |
| ೫೯ | ೧೬ | ಕಾಳದಾಸ | ಕಾಳಿದಾಸ |
| ೬೨ | ೧೨ | ಮುಚ್ಚುತ್ತ | ಮಚ್ಚುತ್ತ |
| ೬೩ | ೧೪ | ಮಿನ್ನಾಯು | ಮಿನ್ನಾಯ್ತು |
| ೬೪ | ೧೩ | ಚಿತ್ರಜಾರಿಯ | ಚಿತ್ರಜಾರಿಯೆಂ |
| ೬೯ | ೬ | ನೆಂದಿಂದೆ | ನೆಂದಿರದೆ |
| ೮೬ | ೪ | ನೊರ್ವ | ನೊರ್ಮೆ |
| ೯೧ | ೧೯ | ಕಡುಮಾಡ | ಕರುಮಾಡ |
| ೯೮ | ೨೦ | ನೆತ್ತೆ | ನೆತ್ತಿ |
| ೧೦೨ | ೧೦ | ವೃತ್ತಿಯಿಂ | ವೃತ್ತಿಯಂ |
| ೧೦೩ | ೧೭ | ಸ್ತೊಮ | ಸ್ತೋಮ |
| ೧೦೪ | ೧೪ | ಮನದೊಳಗೆ | ಮನದೊಳಗೆ |
| ೧೧೩ | ೧೦ | ಅಕಲಿಂಕ | ಅಕಲಂಕ |
| ೧೧೮ | ೯ | ಪೊಜಿಸು | ಪೂಜಿಸು |
| ೧೨೧ | ೧೪ | ಸಂಘಟವು | ಸಂಘಟವ |
| ೧೪೪ | ೯ | ಸಮನಿಸಿತೆಗನಗೆ | ಸಮನಿಸಿತೆನಗೆ |
| ೧೪೫ | ೯ | ನೊಂದಿದ | ನೊಂದಿನ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೫೦ | ೨೧ | ಕುಲಕೊರ್ಮೆ | ಕುಲವೊರ್ಮೆ |
| ೧೫೩ | ೨ | ಜ್ಯೊತಿ | ಜ್ಯೋತಿ |
| ೧೫೩ | ೨೪ | ನಟ್ಟಿ | ನಟ್ಟಿ |
| ೧೫೪ | ೨೪ | ಚಿಂತಿಸಿದರು | ಚಿಂತಿಸಿದನು |
| ೧೫೭ | ೮ | ಜಲದೊಳ್ | ಜಲಜದೊಳ್ |
| ೧೭೧ | ೭ | ಬಂದ | ಬಂದು |
| ೧೭೨ | ೧೧ | ಕಳುಹಿದ | ಕಳುಹಿದೆ |
| ೧೭೬ | ೧೮ | ತುಂಬುತ | ನಂಬುತ |
| ೧೭೬ | ೧೮ | ೭೫ | ೪೫ |
| ೧೭೭ | ೧೨ | ಬೂಗಿಯಂ | ಬೂದಿಯಿಂ |
| ೧೮೩ | ೯ | ಭಕ್ತ | ಭಕ್ತೆ |
| ೧೮೩ | ೧೩ | ಕೊಪ | ಕೋಪ |
| ೧೮೫ | ೧೪ | ಬಳಲದಿರಿ | ಬಳಲಿದಿರಿ |
| ೧೮೯ | ೨೪ | ಬಡಿಸಿ | ಬಿಡಿಸಿ |
| ೧೯೪ | ೬ | ನೀತಿಯ | ನೀತಿಯು |
| ೧೯೬ | ೫ | ಬಿನ್ನಣಲದಿಬಾಲೀಲೆ | ಬಿನ್ನಣದಿ ಬಾಲಲೀಲೆ |
| ೧೯೮ | ೧೦ | ಮೃಗನೇತ್ರ | ಮೃಗನೇತ್ರೆ |
| ೨೦೦ | ೧೨ | ತೋರಬೇಳ್ಕೆಂದನಲು | ತೋರವೇಳ್ಕೆಂದೆನಲು |
| ೨೨೭ | ೧೩ | ವಿಷಮಾನ್ನ | ವಿಷದನ್ನ |
| ೨೩೬ | ೫ | ಚೆನ್ನಯ್ಯ | ಚೆನ್ನಯ |
| ೨೩೭ | ೧೭ | ಸಂಜೀವವಿಯಿ | ಸಂಜೀವನಿದು |
| ೨೪೬ | ೨೧ | ಬುದ್ಬುಥ | ಬುದ್ಬುದ |
| ೨೪೮ | ೨೦ | ವಡೆಯ | ಪಡೆಯ |
| ೨೬೩ | ೧೯ | ಲಾಲರೂಪ | ಲಾರೂಪ |
| ೨೬೪ | ೨೧ | ಕೊಂಡಾಡು | ಕೊಂಡಾಡುತ |

